# ಬಯಲ ಬೀಜಗಳು

## ಶರಣರ ವಚನಾನುಭಾವ


ಬಸವರಾಜ ಸ್ವಾಮಿ



ಪ್ರಕಾಶಕರು

ಶ್ರೀ ಬಸವ ಸೇವಾ ಪ್ರತಿಷ್ಠಾನ

ಸುದ್ದಿಮೂಲ ಕಾರ್ಯಾಲಯ, ಅಂಚೆ ಪೆಟ್ಟಿಗೆ 350

12-7-196, ಸಿಯಾತಲಾಬ, ರಾಯಚೂರು-584102

Bayala Beejagalu-*Sharanara Vachananubhava*
by : **Basavaraj Swamy**
Editor , Suddimoola Kannada Daily
Siyatalab, Raichur-584102

**ಬಯಲ ಬೀಜಗಳು**
ಶರಣರ ವಚನಾನುಭಾವ


ಪುಟ : 214 +xx

ಬೆಲೆ : ರೂ.200/-
ಪ್ರತಿಗಳು : 1000
ಪ್ರಥಮ ಮುದ್ರಣ : ಏಪ್ರಿಲ್ 2012
ಕಾಗದ ಬಳಕೆ : 80 ಜಿಎಸ್ಎಂ. ಎನ್ಎಸ್. ಮ್ಯಾಪ್‌ಲಿತೋ
ಅಳತೆ : ಡೆಮಿ 1/8

Page : 214+ XX
**Price : Rs. 200/-**
Copies : 1000

ಮುಖಪುಟ:

Printers :

**Shubhodaya Printers**
Chamarajpet, Bangalore - 560 018
Ph : 2242 1555, 99452 77806

ಪ್ರಕಾಶನ: ಶ್ರೀಬಸವ ಸೇವಾ ಪ್ರತಿಷ್ಠಾನ
ಸುದ್ದಿಮೂಲ ಕಾರ್ಯಾಲಯ
ಅಂಚೆಪೆಟ್ಟಿಗೆ 350, 12-7-196, ಸಿಯಾತಲಾಬ್,
ರಾಯಚೂರು - 584102 (ಕರ್ನಾಟಕ)
ದೂರವಾಣಿ ಸಂಖ್ಯೆ : 08532 235730
ಫ್ಯಾಕ್ಸ್: 235293

## ಅರ್ಪಣೆ

ಅರಿವನ್ನು ತನುವಿನಲ್ಲಿ
ಗರ್ಭೀಕರಿಸಿಕೊಂಡ
ಪ್ರಪಂಚದ ಸಕಲ ತನುಗಳಿಗೆ

ಸಾವಿಲ್ಲದ ಕೇಡಿಲ್ಲದ
ರೂಹಿಲ್ಲದ ಚೆಲುವ



**ಶ್ರೀ ವಿದ್ಯಾನಂದ ಶರಣರು**
ಡಬ್ಬೇರಮಡುವು
ತಾ. ಲಿಂಗಸುಗೂರು ಜಿ. ರಾಯಚೂರು

# ಮುದ್ರಣ ಸೇವೆ



**ಶರಣ ದಂಪತಿಗಳಾದ ಶ್ರೀಮತಿ ನಾಗಮ್ಮ ಹಾಗು ಪರಸಪ್ಪ ಪರಕಿ**

ಸಾ. ಕಾರಟಗಿ ತಾ.ಗಂಗಾವತಿ ಜಿ.ಕೊಪ್ಪಳ



**ಶರಣ ದಂಪತಿಗಳಾದ ಶ್ರೀಮತಿ ಯಶೋದ ಹಾಗು ಮಹೇಂದ್ರಕುಮಾರ ಸಕಲೇಚಾ**

ಮಾಲಿಕರು : ಸಕಲೇಚಾ ಸಾಲವೆನ್ಸ್ ಪ್ರೈ. ಲಿಮಿಟೆಡ್ ತುಮಕೂರ

# ಓದುವ ಮುನ್ನ.....

**ಬಯಲು ಬಯಲನೆ ಬಿತ್ತಿ, ಬಯಲು ಬಯಲನೆ ಬೆಳೆದು**
**ಬಯಲು ಬಯಲಾಗಿ ಬಯಲಾಯಿತ್ತಯ್ಯ**
**ಬಯಲು ಜೀವನ ಬಯಲು ಭಾವನೆ**
**ಬಯಲು ಬಯಲಾಗಿ ಬಯಲಾಯಿತ್ತಯ್ಯ**
**ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು**
**ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ !!**

ನೋಡುವುದೆಲ್ಲ ಬಯಲ ಬಿತ್ತಿಗೆಯ ಫಲ. ನೋಡಲರಿಯದ ನಿಮಿತ್ತ ತನು ಉಪಜೀವನಕ್ಕೆ ಮಾತ್ರ ಮೀಸಲಾಗಿದೆ. ಸಾವು ನೋವುಗಳಿಂದ ಸಂಕಟಕ್ಕೀಡಾಗಿದೆ. ಅರಿವಿನಿಂದ ನೋಡಿದರೆ, ಸದಾ ಸಂಕಟಕ್ಕೀಡಾದ ತನುವಿನ ಉಪಜೀವನ ಬಯಲಾಗುತ್ತದೆ. ಸುಖ ದುಖಃಗಳನ್ನೇ ಅರಿಯದ ಸುಖೀಜೀವನ ಪ್ರಾರಂಭವಾಗುತ್ತದೆ. ಸಾವು ನೋವುಗಳಿಲ್ಲದ ಮರುಜವಣೆಯ ಫಲ ತನುವಿಗೆ ಪ್ರಾಪ್ತವಾಗಿ ಸದಾ ಸುಖಿ ಯಾಗಿರುತ್ತದೆ.

ಭೂಮಿ, ನೀರು, ಗಾಳಿ, ಬೆಂಕಿ, ಬಯಲು ಎನ್ನುವ ಐದು ಭೂತಗಳಿಂದಲೇ ಜಗತ್ತಿನ ಸೃಷ್ಟಿ. ತನು ಕೂಡಾ ಐದು ಭೂತಗಳನ್ನು ಒಳಗೊಂಡು ಜನ್ಮ ತಳೆದಿದೆ ! ಇದು ಸರ್ವರಿಗೂ ತಿಳಿದ ವಿಷಯ. ಆದರೆ ಅಲ್ಲಮ ಪ್ರಭುಗಳು ಒಂದೇ ಒಂದು ಭೂತವಾದ ಬಯಲ ಬಿತ್ತಿಗೆಯಿಂದ ಮಾತ್ರ ಜಗತ್ತಿನ ಸೃಷ್ಟಿಯಾಗಿದೆ ಎನ್ನುತ್ತಾರೆ. ತನು ಕೂಡಾ ಬಯಲ ಬಿತ್ತಿಗೆಯಿಂದಲೇ ಜನಿಸಿದೆ. ಅದರ ಜೀವನವೂ ಬಯಲು, ಭಾವನೆಗಳು ಕೂಡಾ ಬಯಲೇ. ಬಯಲನ್ನೇ ಪೂಜಿಸಿ, ಬಯಲನ್ನೇ ನಂಬಿ, ಬಯಲಲ್ಲಿ ಬಯಲಾಗಬೇಕಿದೆ ಎನ್ನುತ್ತಾರೆ.

ಹುಟ್ಟುವ ಮುನ್ನ ಕಾಣುವುದಿಲ್ಲ. ಅದು ಬಯಲು. ಸತ್ತ ಮೇಲೂ ಕಾಣುವುದಿಲ್ಲ ಅದು ಕೂಡಾ ಬಯಲೇ. ಹುಟ್ಟು ಸಾವುಗಳ ಮಧ್ಯದಲ್ಲಿರುವ ತನು ಕಾಣುತ್ತದಲ್ಲ ? ಅದು ಬಯಲು ಹೇಗೆ? ಎನ್ನುವುದನ್ನೇ ತಿಳಿಯಬೇಕಿದೆ.

ಹುಟ್ಟುವ ಮುನ್ನ ಸುಖ ದುಖಃಗಳ ಪರಿಚಯವಿರುವುದಿಲ್ಲ. ಸತ್ತ ಮೇಲೂ ಸುಖ ದುಖಃಗಳ ಪರಿಚಯ ತನುವಿನ ಗಮನಕ್ಕೆ ಬರುವುದಿಲ್ಲ. ಹುಟ್ಟಿ ಸಾಯುವ ಮಧ್ಯದಲ್ಲಿರುವ ಜೀವನ ಬರ್ಬರ ! ತನು ತನ್ನಂತೆಯೇ ಇರುವ ಮತ್ತೊಂದು ತನುವಿನ ರೂಪಕ್ಕೆ , ಶಬ್ದಕ್ಕೆ , ಸ್ಪರ್ಶಕ್ಕೆ ಸಂಕಟಪಡುತ್ತದೆ. ರುಚಿಗಾಗಿ ವಾಸನೆಗಾಗಿ ನರಕಯಾತನೆ ಅನುಭವಿಸುತ್ತದೆ. ಶಬ್ದ ಮಾಡಿದ ತನುವನ್ನು ಕೊಲ್ಲುತ್ತದೆ. ಇಲ್ಲ ತಾನೇ ಆತ್ಮಹತ್ಯೆ ಮಾಡಿಕೊಳ್ಳುತ್ತದೆ. ಅದನ್ನು ಬೆಂಬಲಿಸಿದ ತನುಗಳೂ ಕುದಿಯುತ್ತವೆ. ಇದು ಹೇಗೆ ಎಂಬುದನ್ನು ಗಮನಿಸಿ ಪುನಃ ಬಯಲಿನ ವಿಷಯಕ್ಕೆ ಬರೋಣ.

**ಶಬ್ದ:** ಕೈಕೇಯಿಯ ಎರಡು ಶಬ್ದಗಳು ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದವು. ನುಡಿದ ಕೈಕೇಯಿಯ ತನು ಜೀವನ ಪರ್ಯಂತ ನರಳಿ ನರಳಿ ಸತ್ತಿತು. ಕೇಳಿದ ಜನ ಮರುಕ ವ್ಯಕ್ತಪಡಿಸಿದರು. ಅಂತೆಯೇ ಮಡಿವಾಳನ ಮಾತು ರಾಮನನ್ನು ವ್ಯಾಕುಲಗೊಳಿಸಿ ಸೀತೆಯನ್ನು

ಪುನಃ ಕಾಡಿಗೆ ಕಳುಹಿಸಿತು. ದ್ರೌಪದಿಯ ಒಂದು ಧ್ವನಿ ಮಹಾಭಾರತದ ಯುದ್ಧಕ್ಕೆ ಕಾರಣವಾಯಿತು. 18 ಅಕ್ಷೋಹಿಣಿ ಸೈನ್ಯ ನಾಶವಾಯಿತು. ರಕ್ತದ ಕಾಲುವೆ ಹರಿಯಿತು.

'' ವಾಕಟ್ಸುಮೋ '' ಎಂಬ ಒಂದೇ ಒಂದು ಶಬ್ದದಿಂದ ಹಿರೋಶಿಮಾ ನಾಗಾಸಾಕಿಗಳ ಮೇಲೆ ಅಣುಬಾಂಬ್‌ಗಳು ಸುರಿದವು. ರಕ್ತದ ಕಾಲುವೆ ಹರಿಯಿತು. ಒಂದು ಲಕ್ಷ ತೊಂಬತ್ತೈದು ಸಾವಿರ ಜನ ಸಾವಿಗೀಡಾದರು. ತನುವಿನಿಂದ ಬಂದ ಮಾತು ತನು ಜ್ಞಾನದಿಂದ ಕೇಳಿ ಬಯಲಾಗಲಿಲ್ಲ. ಶಬ್ದ ತನುಗಳನ್ನು ಸಂಕಟಕ್ಕೀಡು ಮಾಡಿ ಅಣುಬಾಂಬಿಗಿಂತಲೂ ಅಧಿಕ ವಿಷ ಸುರಿದು ಕತಕತನೆ ಕುದಿಯುವಂತೆ ಮಾಡಿತು. ತನುವಿನಿಂದ ಬಂದ ಶಬ್ದ, ಅಪಶಬ್ದ ಶಬ್ದದಲ್ಲಿಯೇ ಇದೆಯೆಂದು ತನುವಿನ ಮನ ತಿಳಿಯಲಿಲ್ಲ.

**ರುಚಿ :** ರುಚಿಯಲ್ಲಿ ವ್ಯತ್ಯಾಸವಾದರೂ ಕೂಡಾ ತನು ಸಂಕಟ ಅನುಭವಿಸುತ್ತದೆ. ಅಡಿಗೆ ಮಾಡಿದ ತನುವಿನೊಂದಿಗೆ ಜಗಳ ಮಾಡುತ್ತದೆ. ಕಾರ, ಉಪ್ಪು, ಹುಳಿ, ಒಗರು, ಸಿಹಿ, ಕಹಿ, ಸಪ್ಪೆ ಪದಾರ್ಥಗಳನ್ನು ಅಡಿಗೆ ಮಾಡಿದ ತನು ನಿರ್ಮಿಸಿಲ್ಲ. ರುಚಿ ಪದಾರ್ಥದಲ್ಲಿದೆಯೋ ಅಥವಾ ನಾಲಿಗೆಯಲ್ಲಿದೆಯೋ ಎಂದು ಸಮಾಧಾನದಿಂದ ಯೋಚಿಸುವ ಗೊಡವೆಗೆ ತಿನ್ನುವ ತನು ಹೋಗುವುದಿಲ್ಲ. ಸಿದ್ಧ ಪದಾರ್ಥಗಳನ್ನು ಬೆರಸಿ ಅಡಿಗೆ ಮಾಡಿದ ತನುವನ್ನು ತಿನ್ನುವ ತನು ಉಪ್ಪು, ಹುಳಿ, ಕಾರವೆಂದು ನಿಂದಿಸುತ್ತದೆ, ಬಡಿಯುತ್ತದೆ. ತಟ್ಟೆ ಎಸೆಯುತ್ತದೆ, ಕೊಲೆ ಮಾಡಲೂ ಹೇಸುವುದಿಲ್ಲ.

ಪದಾರ್ಥ ರುಚಿಯಿಲ್ಲವೆಂದು ನಿಂದೆಗೆ ಒಳಗಾದ ಪ್ರಪಂಚದ ಶೇಕಡಾ 10 ತನುಗಳು ಆತ್ಮಹತ್ಯೆ , ಕೊಲೆಗೆ ಒಳಗಾದರೆ, ಪ್ರತಿದಿನ ರುಚಿಗಾಗಿ ಸಂಕಟಪಡುವ ತನುಗಳ ಸಂಖ್ಯೆ ಕೂಡಾ ಅಪಾರ.

ಮೊದಲನೆ ತುತ್ತು ಮಾತ್ರ ನಾಲಿಗೆಗೆ ರುಚಿ ಎನಿಸುತ್ತದೆ. ಎರಡನೆ , ಮೂರನೆ ತುತ್ತಿಗೆ ರುಚಿ ಕಡಿಮೆಯಾಗುತ್ತದೆ. ನಂತರದ ತುತ್ತುಗಳು ಸಂಪೂರ್ಣ ರುಚಿ ಕಳೆದುಕೊಳ್ಳುತ್ತವೆ. ಅರ್ಥಶಾಸ್ತ್ರಜ್ಞರು ಇದನ್ನು ತುಷ್ಠಿಗುಣ ಎನ್ನುತ್ತಾರೆ. ಆದರೆ ಇದು ಸಮಾಧಾನ ತರುವದಿಲ್ಲ. ಹಾಗಾದರೆ ರುಚಿ ಪದಾರ್ಥದಲ್ಲಿತ್ತೋ, ನಾಲಿಗೆಯಲ್ಲಿತ್ತೋ ಎಂದು ಯೋಚಿಸಿ ಉತ್ತರ ಕಂಡುಕೊಳ್ಳುವ ಶಕ್ತಿ ತನುವಿನ ಗರ್ಭದಲ್ಲಿ ಬಳಕೆಯಾಗದೆ ಹಾಗೆಯೇ ಉಳಿಯುತ್ತದೆ. ಉಣ್ಣುವುದೂ ತಪ್ಪುವುದಿಲ್ಲ ಸಾಯುವವರೆಗೆ ಬಳಲುವುದೂ ತಪ್ಪುವುದಿಲ್ಲ. ತನುವಿರುವವರೆಗೆ ರುಚಿಯ ಸೂತ್ರ ದೊರೆತು ತನು ಪ್ರಯೋಗಕ್ಕೆ ಅಣಿಯಾಗುವುದಿಲ್ಲ. ರುಚಿಗಾಗಿ ತನುವಿನ ಯುದ್ಧ ತನುವಿರುವವರೆಗೆ ಮುಂದುವರೆಯುತ್ತದೆ.

**ವಾಸನೆ :** ವಾಸನೆಯೂ ತನುವನ್ನು ಸಂಕಟಕ್ಕೊಡ್ಡುತ್ತದೆ. ಮೀನು ತಿನ್ನುವವನಿಗೆ ಸುವಾಸನೆಯಾದರೆ ತಿನ್ನದವನಿಗೆ ದುರ್ವಾಸನೆ. ತನುವಿನ ಮೂಗು ಒಂದೇ ಆದರೂ ಅನುಭವಿಸುವ ರುಚಿಯ ವಾಸನೆ ಬೇರೆ ಬೇರೆ. ಮಲ್ಲಿಗೆ ಮಾರುವವನಿಗೆ ಮೀನು ಆಗುವುದಿಲ್ಲ. ಮೀನು ಮಾರುವವನಿಗೆ ಮಲ್ಲಿಗೆ ಆಗುವುದಿಲ್ಲ. ಅಷ್ಟೆ ಏಕೆ ತಟ್ಟೆಯಲ್ಲಿಟ್ಟ ಗರಿಗರಿ ಪದಾರ್ಥ ಮೂಗಿಗೆ ಹಿತವೆನಿಸಿದರೆ, ಹೊಟ್ಟೆಯಲ್ಲಿಳಿದು ಮರುರೂಪ ಹೊಂದಿದ ಪದಾರ್ಥ ಮೂಗಿಗೆ ಅಸಹ್ಯ! ಭೋಗಿಸಿದ ಪದಾರ್ಥವೂ ತನುವಿನದೆ, ತ್ಯಜಿಸಿದ ಪದಾರ್ಥವೂ ತನುವಿನದೆ ಆದರೂ ತನುವಿಗೂ, ತನುವಿನ ಇಂದ್ರಿಯಗಳಿಗೂ ತಿಳಿಯಲಿಲ್ಲ. ತನು ತ್ಯಜಿಸಿದ ಪದಾರ್ಥವನ್ನು ಹಂದಿ,

ನಾಯಿ, ಆಕಳು ಅಮೃತದಂತೆ ಸವಿಯುವುದನ್ನು ತನು ನೋಡುತ್ತದೆ. ಆದರೂ ತನುವಿಗೆ ತಿಳಿ ಯುವುದಿಲ್ಲ. ಅಸಹ್ಯಪಟ್ಟುಕೊಳ್ಳುವುದು ಬಿಡುವುದಿಲ್ಲ. ವಾಸನೆಯನ್ನು ತಿಳಿಯುವ ಜ್ಞಾನ ತಿಳಿಯಲಾಗದೆ ತನುವಿನ ಗರ್ಭದಲ್ಲಿ ಹಾಗೆಯೇ ಉಳಿಯುತ್ತದೆ.

**ಸ್ಪರ್ಶ :** ಅಂತೆಯೇ ತನು, ತನುವಿನ ರೂಪದ ಸ್ಪರ್ಶ ಸುಖಕ್ಕಾಗಿ ಕಾತರಿಸಿ ಸಂಕಟ ಪಡುತ್ತದೆ; ಸಾವುನೋವುಗಳಿಗೆ ಈಡಾಗುತ್ತದೆ.

ಶೂರ್ಪನಖಿಗೆ ಆದ ಅಪಮಾನ ಭರಿಸದ ರಾವಣ, ಲಕ್ಷ್ಮಣನನ್ನು ಕೊಲೆ ಮಾಡಲು ಬಂದು ಸೀತೆಯ ರೂಪ ನೋಡಿ ಮರುಳಾಗುತ್ತಾನೆ. ರಾಜ್ಯವನ್ನು ಅಪಾರ ಪ್ರಮಾಣದ ಸೈನ್ಯವನ್ನು ಕಳೆದುಕೊಂಡು ಸಾವಿಗೀಡಾಗುತ್ತಾನೆ.

ರೂಪ , ಕುರೂಪಗಳನ್ನು ನೋಡುವ ನಿರೂಪ ಕಣ್ಣಿನಲ್ಲಿಯೇ ಅಡಗಿದೆಯೆಂದು ತನು ವಿನ ಮನ ತಿಳಿಯಲಿಲ್ಲ. ಚರ್ಮ, ಚರ್ಮದೊಳಡಗಿದ ಮಟೀರಿಯಲ್, ನೋಡುವ ಕಣ್ಣಿನ ತನುವಿನಂತಿದ್ದರೂ ಕಣ್ಣಿಗೆ ಭೋಗಿಸುವ ಬಯಕೆ ಹಿಂಗುವುದಿಲ್ಲ.

ನೋಡುವ ನೋಟವನ್ನು, ಕಿವಿಯ ಶಬ್ಧವನ್ನು, ಚರ್ಮದ ಸ್ಪರ್ಶ ಶಕ್ತಿಯನ್ನು, ನಾಲಿಗೆಯ ರುಚಿಯನ್ನು, ಮೂಗಿನ ವಾಸನಾ ಶಕ್ತಿಯನ್ನು ಅಳೆಯುವ ತನುವಿನ ಜ್ಞಾನವನ್ನು ಯಾವ ಗುರುವೂ, ಶಿಕ್ಷಣ ತಜ್ಞನೂ ವಿಸ್ತರಿಸಲರಿಯ. ವಿಶ್ವ ವಿದ್ಯಾಲಯಗಳು ಬೋಧಿಸಲರಿಯವು. ಹಾಗೆಯೇ ಇವುಗಳ ಅಜ್ಞಾನವನ್ನು ಯಾವ ಸರ್ಕಾರಗಳು ಬಂಧಿಸಲರಿಯವು. ಕೋರ್ಟ್‌ಗಳು ಕೂಡ ಮನ ಮಾಡುವ ಅಪರಾಧಗಳಿಗೆ ತನುವಿಗೆ ಶಿಕ್ಷೆ ವಿಧಿಸುತ್ತವೆಯೋ ಹೊರತು ಮನಕ್ಕಲ್ಲ.

**ರೂಪ:** ಕಣ್ಣಿಗೆ ನೋಡುವ ಜ್ಞಾನವಿದೆ. ಇದು ತನುವಿನ ಹುಟ್ಟಿನೊಂದಿಗೆ ಬಂದಿದೆ. ನೋಡಿ ದ್ದನ್ನು ತಿಳಿದು ಆನಂದ ಪಡುವ ಜ್ಞಾನವೂ ಇದೆ. ಹಾಗೆಯೇ ನೋಡುವ ವಸ್ತುವಿನ ಮೂಲವನ್ನು ತಿಳಿಯದ ಮನವೆಂಬ ಅಜ್ಞಾನವೂ ಆವರಿಸಿಕೊಂಡಿದೆ. ತನ್ನಂತೆಯೇ ಇರುವ ತನುವನ್ನು ನೋಡಿದ ಕಣ್ಣು ಭೋಗಿಸಲು ತನುವಿಗೆ ಆದೇಶ ನೀಡಿ ರಸಾಯನಿಕ ಕ್ರಿಯೆಯನ್ನುಂಟು ಮಾಡುತ್ತದೆ. ಸಿಕ್ಕರೆ ಜನ ತನುವನ್ನು ದಂಡಿಸುತ್ತಾರೆಯೇ ಹೊರತು ಕಣ್ಣಿನಲ್ಲಿ ಆವರಿಸಿಕೊಂಡು ಭೋಗಕ್ಕೆಳಿಸಿದ ಮನವನ್ನಲ್ಲ. ಶರಣರಿಗೆ, ಜ್ಞಾನಿಗಳಿಗೆ ಮಾತ್ರ ಈ ವಿಷಯ ನಿಲುಕುತ್ತದೆ.

ಬುದ್ಧ ಸಿದ್ಧಾರ್ಥನಾಗಿದ್ದರೆ ಅಂಗುಲಿಮಾಲನಿಗೆ ಗಲ್ಲು ಶಿಕ್ಷೆ ವಿಧಿಸುತ್ತಿದ್ದ. ಸಿದ್ಧಾರ್ಥ ಬುದ್ಧನಾದ ಮೇಲೆ ಅಂಗುಲಿಮಾಲನೆಂಬ ಮನಕ್ಕೆ ಶಾಶ್ವತ ಶಿಕ್ಷೆ ನೀಡಿ, ಬುದ್ಧನನ್ನು ಬುದ್ಧ ಆಲಿಂಗನ ಮಾಡಿ ಕೊಳ್ಳುತ್ತಾನೆ. ಹೀಗೆ ಮನ, ನೋಡುವ ಕಣ್ಣಿನಲ್ಲಿ ಆವರಿಸಿಕೊಂಡು ನೋಡು ವುದನ್ನು ನೋಡದಂತೆ, ಕಿವಿಯಲ್ಲಿ, ಮೂಗಿನಲ್ಲಿ , ನಾಲಿಗೆಯಲ್ಲಿ, ಚರ್ಮದಲ್ಲಿ, ಆವರಿಸಿಕೊಂಡು ಜ್ಞಾನದಿಂದ ಕೇಳದಂತೆ, ವಾಸಿಸದಂತೆ, ರುಚಿಸದಂತೆ, ಮುಟ್ಟದಂತೆ ಮಾಡುತ್ತದೆ.

ಹೀಗೆ ಪಂಚೇಂದ್ರಿಯಗಳನ್ನು ಆವರಿಸಿಕೊಂಡ ಮನಕ್ಕೆ ಶಿಕ್ಷೆಯಿಲ್ಲ, ಜ್ಞಾನಕ್ಕಂಟಿದ ಮನದ ಮುಸುಕನ್ನು ತೆಗೆಯುವ ಶಕ್ತಿ ಆಧುನಿಕ ಶಿಕ್ಷಣದಲ್ಲಿ ಇಲ್ಲ. ಹೀಗಾಗಿ ಕಲಿತ ಶಿಕ್ಷಣ ಮನದಲ್ಲಿ ಸಂಗ್ರಹಗೊಂಡು ತನು ಟೇಪಿನಂತೆ ಕಾರ್ಯನಿರ್ವಹಿಸುತ್ತದೆ. ನುಡಿದಂತೆ ನಡೆಯುವುದು ತನುವಿಗೆ ಸಾಧ್ಯವಾಗುತ್ತಿಲ್ಲ.

ತನುವಿನ ಅರಿವು ತನುವನ್ನು ಜ್ಞಾನಕ್ಕೆಳಸಿದರೆ, ತನುವನ್ನು ಆವರಿಸಿದ ಮನ ತನ್ನ ಸುಖ ಕ್ಕಾಗಿ ಅಜ್ಞಾನದೆಡೆಗೆಳೆಸಿ ತನುವಿಗೆ ಶಿಕ್ಷೆ ಕೊಡಿಸಿ ತಾನು ಸುರಕ್ಷಿತವಾಗಿರುತ್ತದೆ. ಸದಾ ಎಚ್ಚರಿಸುವ

ಅರಿವು ತನುವಿನ ಮನದ ಗಮನಕ್ಕೆ ಸಿಲುಕುವುದೇ ಇಲ್ಲ. ಹೀಗೆ ಜೀವನ ಪರ್ಯಂತ ಏಳು ಬೀಳುಗಳನ್ನು ಅನುಭವಿಸುವ ತನು ತನ್ನ ಜ್ಞಾನವನ್ನು ತಾನೇ ಪಡೆದು ಸಚ್ಚಿದಾನಂದನಾಗುವುದನ್ನು ಅಂತ್ಯದವರೆಗೂ ಕಲಿಯದೇ ವ್ಯರ್ಥ ಅವಸಾನ ಹೊಂದುತ್ತದೆ.

ತನುವಿನಲ್ಲಿ ಜ್ಞಾನವೆಂಬ ಅರಿವೂ ಇದೆ. ಅಜ್ಞಾನವೆಂಬ ಮನವೂ ಇದೆ. ತನುವಿಗೆ ಸ್ವತಂತ್ರವಾಗಿ ಯೋಚಿಸುವ ಶಕ್ತಿಯಿಲ್ಲ. ಅದು ಅರಿವು ಮತ್ತು ಮನದ ಕೈಗೊಂಬೆ. ತನುವನ್ನು ಮನ ಬಳಕೆ ಮಾಡಿಕೊಂಡರೆ ಅಂಗುಲಿಮಾಲನಾಗುತ್ತದೆ. ಅರಿವು ಬಳಕೆ ಮಾಡಿಕೊಂಡರೆ ಬುದ್ಧ , ಶರಣ, ಸಂತ, ಜ್ಞಾನಿಯಾಗುತ್ತದೆ.

ಮನಕ್ಕೆ ಭೂಮಿ, ಆಭರಣ ದೊಡ್ಡದಾಗಿ ಕಾಣುತ್ತದೆ. ಅದು ತನ್ನಲ್ಲಿದ್ದರೂ ಮತ್ತಷ್ಟು ವಸ್ತುಗಳನ್ನು ಸಂಗ್ರಹಿಸಬೇಕೆಂಬ ಅದರ ಬಯಕೆಯಿಂದ ತನುಗಳನ್ನು ಕೊಂದಾದರೂ ಪಡೆಯಬೇಕೆಂದು ಪ್ರೇರೇಪಿಸುತ್ತದೆ. ಆದರೆ ಅರಿವು ತನುವನ್ನು ಎಚ್ಚರಿಸುತ್ತದೆ. ಚಿನ್ನದ ಬಣ್ಣವನ್ನು ಅನಾವರಣ ಮಾಡಿ ಲೋಹವನ್ನು ಪರಿಚಯಿಸುತ್ತದೆ. ತನುವು ಚೇತನ, ಲೋಹ ಜಡ. ಜಡ ವಸ್ತುವಿನ ವ್ಯಾಮೋಹಕ್ಕಾಗಿ ತನ್ನಂತಿರುವ ಅನೇಕ ತನುಗಳನ್ನು ಕೊಲ್ಲುವುದೆ? ತಾನು ರಾಜ, ತನ್ನಂತೆಯೇ ಇರುವ ಮತ್ತೊಂದು ತನು ಕಾಲಾಳಾಗಬೇಕೆ? ಚರ್ಮ ಚರ್ಮದೊಳಗಿದ್ದ ವಸ್ತು ಒಂದೇ ಆದರೂ ಚರ್ಮ, ಚರ್ಮದೊಂದಿಗೆ ಭೋಗಕ್ಕಿಳಿಯುವ ಕಾರಣವಾದರೂ ಏನಿರಬೇಕು? ಎಂದು ವಿಚಾರಕ್ಕೊಳಪಡಿಸುವ ತನುವಿನ ಅರಿವಿನೊಂದಿಗೆ ಮನ ಬೆರೆತರೆ ಆ ಅರಿವೇ ತಾನಾಗಿ ಜ್ಞಾನಿಯಾಗುತ್ತದೆ.

ಜಲಬಿಂದು ತಾಯಿ ಗರ್ಭ ಸೇರಿ ಪಾಕವಾಯಿತು, ಪಿಂಡವಾಯಿತು, ರಕ್ತ, ಮೂಳೆ, ಮಾಂಸವಾಯಿತು. ಜಲವೇ ಚರ್ಮದ ಕವಚವಾಗಿ ತನುವಾಗಿ ಹೊರಬಂದಿತು. ಕಾಣುವ ಈ ತನು ಗಟ್ಟಿಗೊಂಡ ಜಲದ ರಾಶಿಯಲ್ಲವೆ !

ಜಲ ನೋಡಲು ಹೋದರೆ ಅದರ ಮೂಲವೂ ಜಲವಲ್ಲ. ವಿಜ್ಞಾನದ ಪ್ರಕಾರ ಜಲದ ಸೂತ್ರ $H_2O$ ಅಂದರೆ ಜಲಜನಕದ ಎರಡು ಪ್ರಮಾಣ, ಆಮ್ಲಜನಕದ ಒಂದು ಪ್ರಮಾಣ ಬಯಲಿನಲ್ಲಿ ಕೂಡಿ ಜಲವಾಯಿತು. ಜಲಜನಕವೂ ಕಾಣುವುದಿಲ್ಲ. ಆಮ್ಲಜನಕವೂ ಕಾಣುವುದಿಲ್ಲ. ಬಯಲೂ ಕಾಣುವುದಿಲ್ಲ. ಕೂಡಿದ ಮೇಲೆ ಜಲ ಕಾಣುತ್ತದೆ.

ಜಲಕ್ಕೆ ಬಣ್ಣವಿಲ್ಲ, ವಾಸನೆಯಿಲ್ಲ, ರುಚಿಯಿಲ್ಲ, ತನ್ನ ಮಟ್ಟ ತಾನು ಕಾಯ್ದುಕೊಳ್ಳುತ್ತದೆ. ಆದರೆ ಜಲ ಬಿಂದು ಗರ್ಭ ಪ್ರವೇಶ ಮಾಡಿ ತನುವಾಗಿ ತನ್ನ ತತ್ವವನ್ನೇ ಇಲ್ಲಿ ಸುಳ್ಳು ಮಾಡಿದೆ.

ಜಲಬಿಂದುವೇ ತನು ಸೇರಿ ಹೆಣ್ಣಾಗಿ, ಗಂಡಾಗಿ, ಜಾತಿ, ಮತ, ಪಂಥ, ಶ್ರೀಮಂತ, ಬಡವ, ರಾಜ, ಕಾಲಾಳು, ಅಧಿಕಾರಿ, ಜವಾನ, ಗುರು, ಶಿಷ್ಯನೆಂದು ಸೃಷ್ಟಿ ಮಾಡಿಕೊಂಡಿದೆ. ತಿಳಿಯಲು ಹೋದರೆ ಜಲ ! ಆದರೆ ಜಲವೂ ಜಲವಲ್ಲ, ಬರಿ ಬಯಲು ಮಾತ್ರ !!

ಜಲವೇ ಕುದ್ದು ಪಾಕವಾಗಿ ಗಟ್ಟಿಗೊಂಡು ಕೆನೆಯಾಕಾರದ ಭೂಮಿಯಾಗಿದೆ. ಭೂಮಿಯೊಳಗಿದ್ದ ಹೇಮವೂ ಜಲವೇ, ಉಳಿದೆಲ್ಲ ಖನಿಜಗಳೂ ಜಲವೇ, ಭೂಮಿಯಲ್ಲಿ ಬೆಳೆದ ಸಸ್ಯರಾಶಿಗಳೂ ಜಲವೇ, ಜಲದಲ್ಲಿದ್ದ ಜಲರಾಶಿಗಳೂ ಜಲವೇ, ಪ್ರಾಣಿ, ಪಕ್ಷಿ, ಉರಗ, ಕೀಟಾದಿಗಳೂ ಜಲದಿಂದಲೇ ಸೃಷ್ಟಿಯಾಗಿವೆ !

ಜಲಜನಕದ ಸುಡುವ ಗುಣ, ಇದನ್ನು ಎಂದೂ ನಂದದಂತೆ ಉರಿಸುವ ಗಾಳಿಯ

ಗುಣ ! ಸುಟ್ಟರೂ ನೋವರಿಯದ ಬಯಲ ಗುಣಗಳೂ ಜಲದಲ್ಲಿಯೇ ಅಡಕವಾಗಿವೆ !

ಜಲಜನಕವೂ ಜಲವಲ್ಲ, ಆಮ್ಲಜನಕವೂ ಜಲವಲ್ಲ, ಬಯಲೂ ಜಲವಲ್ಲ, ಈ ಮೂರು ಸೇರಿ ಜಲ ತಂಪಾಗಿದೆ. ತನುವಿನಲ್ಲಿ ಗಟ್ಟಿಗೊಂಡ ಜಲಕ್ಕೆ, ಶಬ್ದ, ರೂಪ, ಸ್ಪರ್ಶ, ರುಚಿ, ವಾಸನೆಗಳು ಬಡಿದು ರಾಸಾಯನಿಕ ಕ್ರಿಯೆಯಿಂದ ಸುಡುತ್ತದೆ. ಕುದಿಯುತ್ತದೆ. ಅರಳುತ್ತದೆ, ಅಳುತ್ತದೆ, ಕನಿಕರಿಸುತ್ತದೆ, ಹಾಗೆಯೇ ಕೊಲ್ಲುವಂತೆ , ಸಾಯುವಂತೆ ಮಾಡಿ, ಸಂತೋಷವನ್ನೂ ವ್ಯಕ್ತಪಡಿಸುತ್ತದೆ !

ಗಾಳಿ ರಭಸವಾಗಿ ಬೀಸಿ, ಜಲ ಪ್ರಳಯ, ಅಗ್ನಿ ಪ್ರಳಯವಾಗಿ, ಭೂಮಿ ಬಿರಿದು ಲಾವಾರಸ ಚೆಲ್ಲಿ ನಾಲ್ಕು ಭೂತಗಳು ತಮ್ಮ ವಿಕೃತ ಸ್ವಭಾವದಿಂದ ಆಗಾಗ್ಗೆ ಮೆರೆಯುವುದುಂಟು. ಇದನ್ನು ಪ್ರಕೃತಿಯ ವಿಕೃತ ಅಥವಾ ಪ್ರಳಯವೆಂದು ಕರೆಯುತ್ತಾರೆ. ನಾಲ್ಕು ಭೂತಗಳು ಪ್ರಳಯದಲ್ಲಿ ನಿರತವಾದಾಗ ಬಯಲು ಮಾತ್ರ ಕದಲುವುದಿಲ್ಲ.

ಹೊಟ್ಟೆಯಲ್ಲಿದ್ದ ಮಗು ತೊಂದರೆಯನ್ನುಂಟು ಮಾಡಿದರೆ ಗರ್ಭ ಧರಿಸಿದ ತನುವಿಗೆ ಹೇಗೆ ಆನಂದ ಉಂಟಾಗುತ್ತದೋ ಹಾಗೆಯೇ ನಾಲ್ಕು ಭೂತಗಳ ಉಪಟಳವನ್ನು ಬಯಲು ತನ್ನ ಗರ್ಭದಲ್ಲಿ ಬಂಧಿಸಿ ಕೊಂಡಿರುತ್ತದೆ. ಬಯಲ ಗರ್ಭದಲ್ಲಿಯೇ ಭೂಮಿ ಬೆಂಕಿ, ಗಾಳಿ, ನೀರು, ಸೂರ್ಯ, ಚಂದ್ರ, ಆಕಾಶ ಕಾಯಗಳು ಇರುವುದರಿಂದ ಅವುಗಳ ಉಪಟಳ ಬಯಲಿಗೆ ಉಂಟಾಗುವುದೇ ಇಲ್ಲ. ಹಾಗೆಯೇ ತನುವು ಕೂಡಾ ನೀರು, ಗಾಳಿ, ಬೆಂಕಿ, ಭೂಮಿ ಬಯಲುಗಳ ಮಿಶ್ರಣದಿಂದ ಆಗಿದೆ. ನಾಲ್ಕು ಭೂತ ಗಳನ್ನು ಬಯಲು ತನ್ನ ಗರ್ಭದಲ್ಲಿ ಮಿಶ್ರಣ ಮಾಡಿ ತಾಯಿಗರ್ಭ ಹೊಕ್ಕು ಜ್ಞಾನ ತನುವಾಗಿ ಹೊರ ಬಂದಿದೆ.

ಈ ಜ್ಞಾನವೇ ತನುವಿನ ಕಣ ಕಣದಲ್ಲಿ ತನ್ಮಯವಾಗಿ ಬೆರೆತಿದೆ. ಶರಣರು ಇದಕ್ಕೆ ಲಿಂಗಾಂಗ ಸಾಮರಸ್ಯ ಎಂದರು.

ಜ್ಞಾನದಿಂದ ಸಕಲ ವಸ್ತುಗಳನ್ನು ನೋಡಿ, ಜ್ಞಾನದಿಂದ ಸಕಲ ಗಂಧಗಳನ್ನು ವಾಸಿಸಿ, ಜ್ಞಾನದಿಂದ ಸಕಲ ಶಬ್ದಗಳನ್ನು ಕೇಳಿ , ಜ್ಞಾನದಿಂದ ಸಕಲ ವಸ್ತುಗಳನ್ನು ಮುಟ್ಟಿ , ಜ್ಞಾನದಿಂದ ಸಕಲ ಪದಾರ್ಥಗಳನ್ನು ರುಚಿಸಿ , ತನುವಿಗೆ ಕಳುಹಿಸಿದರೆ, ಜಲಜನಕ ಆಮ್ಲಜನಕ ಬೆರೆತು ನಿರ್ಮಾಣಗೊಂಡ ತನುವಿನಲ್ಲಿ ರಸಾಯನಿಕ ಕ್ರಿಯೆ ಉಂಟಾಗದೇ ತನುವಿಗೆ ಯಾವ ಬಾಧೆ ಆಗುವುದೇ ಇಲ್ಲ. ಜ್ಞಾನ ತನುವಿನ ಗುರುವು ; ಜ್ಞಾನ ತನುವಿನ ಅರಿವು; ಬಯಲಜ್ಞಾನವೇ ತನುವಿನ ಸಾಕ್ಷಾತ್ ಪರಬ್ರಹ್ಮ! ಮನ ಆ ಜ್ಞಾನಕ್ಕೆ ಶಿಷ್ಯನಾಗುವುದನ್ನು ರೂಢಿಸಿಕೊಳ್ಳಬೇಕಷ್ಟೆ !

12 ನೇ ಶತಮಾನದಲ್ಲಿ ಶರಣರು ತನುವಿನ ಅಜ್ಞಾನ ಕಳೆಯುವ ಕಾಯಕವನ್ನು ಸದ್ದಿಲ್ಲದಂತೆ ಕಾಲು ಶತಮಾನದವರೆಗೆ ಮಾಡಿದರು. ಈ ಕಾಯಕದಲ್ಲಿ ಕಾಶ್ಮೀರದ ಅರಸ ಮೋಳಿಗೆ ಮಾರಯ್ಯ, ಅಫಘಾನಿಸ್ತಾನದ ಮರುಳ ಶಂಕರ ಮುಂತಾದ ಶರಣರೊಂದಿಗೆ ಅಲ್ಲಮ ಪ್ರಭುವಿನ ಅಧ್ಯಕ್ಷತೆಯಲ್ಲಿ , ಬಸವಣ್ಣನವರ ಹಿರಿತನದಲ್ಲಿ ಒಂದು ಲಕ್ಷ ತೊಂಬತ್ತಾರು ಸಾವಿರ ಜನ ಸೇರಿಕೊಂಡರು.

ಬಸವಣ್ಣನವರು ಅರಿವಿನ ಕಾರ್ಯಕ್ಕೆ ಹಿರಿಯರಾದರೂ ಎನಗಿಂತ ಕಿರಿಯರಿಲ್ಲ ಅರಿವಿನ ಆಚಾರ ದಲ್ಲಿರುವವರಿಗಿಂತ ಹಿರಿಯರಿಲ್ಲ ಎಂದು ಸಾರಿದರು. ಈ ಮಾತು ಅರಿವಿನ ಮಾತು ; ಅರಿವಿನ ಆಚಾರದಲ್ಲಿರುವವರಿಗೆ ಮಾತ್ರ ತಿಳಿಯುವ ಮಾತು. ಬೀದರ್ ಜಿಲ್ಲೆಯ ಬಸವ

ಕಲ್ಯಾಣ ಅರಿವಿನ ಕಾಯಕದ ಸುಕ್ಷೇತ್ರವಾಯಿತು. ಮಹಾಜ್ಞಾನಿ ಅಲ್ಲಮಪ್ರಭು, ಚೆನ್ನಬಸವಣ್ಣ, ಸಿದ್ಧರಾಮ ಶಿವಯೋಗಿ, ಅಕ್ಕಮಹಾದೇವಿ ಮುಂತಾದ ಏಳುನೂರಾ ಎಪ್ಪತ್ತು ಶರಣರು ಅಮರ ಗಣಂಗಳಾದರು. ಬುದ್ಧನಂತೆ ಮಹಾಜ್ಞಾನಿಗಳಾದರು.

ಕರ್ನಾಟಕದಾದ್ಯಂತ ಅರಿವಿನ ಕಾಯಕದಲ್ಲಿ ಭಾಗಿಯಾಗಿ ತನುವಿನ ಅರಿವಿಗೆ ಶರಣು ಹೋಗಿ ಶರಣರಾದರು. ತನುವಿನ ಮನವನ್ನು ಶರಣನೆಂಬ ಸತಿಯನ್ನಾಗಿಸಿ, ತನುವಿನ ಅರಿವನ್ನು ಲಿಂಗವೆಂಬ ಪತಿಯನ್ನಾಗಿಸಿದರು. ಸತಿ-ಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ ಎಂದು ಘೋಷಿಸಿದರು.

ಪ್ರತಿ ತನುವಿನಲ್ಲಿಯೂ ಅರಿವಿದೆ. ಆ ತನುವಿನ ಅರಿವಿನಿಂದಲೇ ಜಗತ್ತಿನ ಪುಸ್ತಕಗಳೆಲ್ಲ ಪ್ರಕಟಗೊಂಡಿವೆ. ಬೈಬಲ್ ಭಗವದ್ಗೀತೆ ಮುಂತಾದ ಜ್ಞಾನ ಗ್ರಂಥಗಳು ಇದಕ್ಕೆ ಹೊರತಾಗಿಲ್ಲ. ಪುಸ್ತಕಗಳಿಂದ ಯಾವ ಮನುಷ್ಯನೂ ಹುಟ್ಟಿಲ್ಲ. ಅವುಗಳಿಂದ ಯಾವ ಮನುಷ್ಯನೂ ಜ್ಞಾನಿ ಎನಿಸಿಕೊಂಡಿಲ್ಲ. ಬದಲಾಗಿ ಪಂಡಿತ, ಶಾಸ್ತ್ರಿಯಾಗಬಹುದಷ್ಟೆ ; ಇದು ತನುವಿನ ವ್ಯವಹಾರವೇ ಹೊರತು ಜ್ಞಾನವಲ್ಲ. ತತ್ವ ಪುಸ್ತಕ ದಲ್ಲಿರುವುದೆಲ್ಲಾ ಜ್ಞಾನಕ್ಕೆ ಹೋಗುವ ಸೂತ್ರಗಳೇ ಹೊರತು ಜ್ಞಾನವಲ್ಲ. ಪುಸ್ತಕಗಳನ್ನು, ಪುಸ್ತಕ ಬರೆದವರನ್ನು ಪೂಜಿಸಿ ಫಲವಿಲ್ಲ. ಅವರಿಗಾಗಿ ಮಂದಿರಗಳನ್ನು ಕಟ್ಟುವ ಅವಶ್ಯಕತೆಯೂ ಇಲ್ಲ. ದಾರಿ ತೋರುವ ದಿಕ್ಸೂಚಿಗಳಂತೆ ; ಸಾರಾಯದ ಮಾರ್ಗವನು ಯಾರು ತೋರಿದರೇನು? ತೋರಿದವರಿಂದ ಅರಿವು ನಿರ್ಮಾಣವಾದುದಲ್ಲ. ತನುವಿನ ಅರಿವು ತನುವಿಗೆ ತೋರಿ ಮರೆಯಾದವನೇ ನಿಜವಾದ ಗುರು. ಇಂತಹ ಗುರುಗಳ ಸಂಖ್ಯೆ ಇದೀಗ ವಿರಳವಾಗುತ್ತಲಿದೆ.

ಸದ್ಗುರುಗಳಾದ ಡಬ್ಬೇರುಮಡುವಿನ ಶ್ರೀ ವಿದ್ಯಾನಂದ ಶರಣರು ಈ ಭಾಗದಲ್ಲಿ ನಿರಂತರ 60 ವರ್ಷಗಳ ಪರ್ಯಂತ ಮನೆ ಮನೆಗೆ ಹೋಗಿ ಅರಿವಿನ ಕಾಯಕ ಮಾಡಿದರು. ಮೂರ್ನಾಲ್ಕು ಸಾವಿರ ಪುಟಗಳಿಗಾಗುವಷ್ಟು ಶರಣರ ವಚನಗಳಿಗೆ ವ್ಯಾಖ್ಯಾನ ಬರೆದರು. ಸಮಾಧಾನದಿಂದ ಓದಿದರೆ ಅವು ಹೃದಯಕ್ಕೆ ತಲುಪುವ ರಹದಾರಿಗಳೆಂದರು. ಮುದ್ರಿಸಲು ಅನುಮತಿ ಕೇಳಿದರೆ ತನುವಿನಲ್ಲಿ ಕೋಟಿ ಗಟ್ಟಲೆ ಗ್ರಂಥಗಳಡಗಿವೆ. ಯಾವ ಪಠ್ಯಗಳಿಲ್ಲದೆ 24 ಗಂಟೆಗಳ ಕಾಲ ಬೋಧಿಸುವ ಅರಿವಿನ ಗುರುವೇ ತನುವಿನಲ್ಲಿದ್ದಾನೆ. ಕಣ್ಣಿನ ಮರೆಯಲ್ಲಿದ್ದು ಕಣ್ಣಿನ ಕಣ್ಣಾಗಿ ಬೋಧಿಸುತ್ತಾನೆ. ಕಿವಿಯ ಮರೆಯಲ್ಲಿದ್ದು ಕಿವಿಯ ಕಿವಿಯಾಗಿ ಬೋಧಿಸುತ್ತಾನೆ. ಚರ್ಮದ ಮರೆಯಲ್ಲಿದ್ದು ಚರ್ಮದ ಚರ್ಮವಾಗಿ ಬೋಧಿಸುತ್ತಾನೆ. ಘ್ರಾಣದ ಮರೆಯಲ್ಲಿದ್ದು ಘ್ರಾಣದ ಘ್ರಾಣವಾಗಿ ಬೋಧಿಸುತ್ತಾನೆ. ಜಿಹ್ವೆಯ ಮರೆಯಲ್ಲಿದ್ದು ಜಿಹ್ವೆಯ ಜಿಹ್ವೆಯಾಗಿ ಬೋಧಿಸುತ್ತಾನೆ. ಬೋಧೆಗೂ ನಿಲುಕದ ತನುವಿನ ಮಹಾಬೋಧಿಗೆ ನಾನು ಗುರುವಾಗಿ ಬೋಧಿಸಲು ಸಾಧ್ಯವೇ? ಎಂದು ತನುವಿನ ಅರಿವಿನ ಗೊಂಚಲಿಗೆ ಕೈ ಹಾಕಿ ಅದರ ರಸ ಪಾನ ಮಾಡಿಸುತ್ತಿದ್ದರು.

ಹೀಗೆ ಗುರುಗಳು ಮನೆ ಮನೆಗೆ ಹೋಗಿ ಸಾವಿರಾರು ತನುಗಳ ಅರಿವಿನ ಬತ್ತಿ ಮೀಂಟಿ ಬೆಳಗಿಸಲು ಪ್ರಯತ್ನಿಸಿದರು. ಆದರೆ ಹಲವಾರು ಶಿಷ್ಯ ತನುಗಳ ಮರೆವು ಅರಿವಿನ ರಸಪಾನ ಮಾಡಲು ಆಸ್ಪದ ಕೊಡಲೇ ಇಲ್ಲ ಅರವತ್ತು ವರ್ಷಗಳ ಪರ್ಯಂತ ಶ್ರೀ ವಿದ್ಯಾನಂದ ಗುರುಗಳು ಶಿಷ್ಯರ ಹೃದಯದಲ್ಲಿ ಬಯಲ ಬೀಜಗಳನ್ನೇ ಬಿತ್ತಿದರು. ನೆನಪಿಸಿಕೊಂಡರೆ ಸಾಕು, ಅಂಕುರಿಸಿ ಅರಿವಿನ ಪರಿಮಳ ಬೀರಿ ಫಲ ನೀಡುವುದರಲ್ಲಿ ಸಂದೇಹವೇ ಇಲ್ಲ. ಹೀಗೆ

ಬಯಲು ಬಿತ್ತಿ, ಬೆಳೆದು ಬಯಲನ್ನೇ ಪೂಜಿಸಿ ಆ ಬಯಲನ್ನೇ ನಂಬಿ 2006, ಜುಲೈ 2ರಂದು ಬಯಲಲ್ಲಿ ಬಯಲಾಗಿ ಬಯಲಾದರು.

ಮೊದಲ ಭಾಗವಾಗಿ ಮೇ 2011 ರಲ್ಲಿ **ಬೆಳಕಿನ ಬಳ್ಳಿ** ಪುಸ್ತಕ ಪ್ರಕಟಿಸಲಾಗಿತ್ತು . ಆ ಪುಸ್ತಕದಲ್ಲಿ ಹದಿನಾಲ್ಕು ಶರಣರ 96 ವಚನಗಳನ್ನು ತೆಗೆದುಕೊಂಡು ವಚನಾನುಭಾವ ಮಾಡಲಾಗಿತ್ತು. ಇದೀಗ ಪ್ರಕಟಗೊಂಡ **ಬಯಲ ಬೀಜಗಳು** ಪುಸ್ತಕದಲ್ಲಿ ಎಪ್ಪತ್ತೈದು ಶರಣರ ನೂರಾ ಇಪ್ಪತ್ತು ವಚನಗಳನ್ನು ತೆಗೆದುಕೊಂಡು ಅರಿವು ನುಡಿಸಿದಂತೆ ವಚನಾನುಭವ ಮಾಡಲಾಗಿದೆ. ತನುವಿನ ಅರಿವನ್ನು ತನುವಿಗಾಗಿ ಬಳಕೆ ಮಾಡಿಕೊಂಡವನೇ ಶರಣ. ಆತ ನನ್ನು ಸಂತ, ಬುದ್ಧ, ಜ್ಞಾನಿ, ಬ್ರಹ್ಮಜ್ಞಾನಿ ಎಂದು ಕರೆಯುತ್ತಾರೆ. ಇದನ್ನು ಸಾರ್ವ ತ್ರಿಕಗೊಳಿಸಲು ಬರುವುದಿಲ್ಲ. ವೈಯಕ್ತಿಕವಾಗಿ ತನ್ನ ತನುವಿನ ಅರಿವನ್ನು ತಾನೇ ಪಡೆಯಬೇಕು. ಇದನ್ನು ಬಯಕೆ ಮಾಡಿ ಪ್ರಯೋಗಕ್ಕೆ ಇಳಿದವನಿಗೆ ಮಾತ್ರ ಸಾಧ್ಯವಾಗುತ್ತದೆ. ಇದೊಂದು ವಿಜ್ಞಾನ. ತನ್ನ ಜ್ಞಾನ ತಾನೇ ಜಾಣತನದಿಂದ ಬಳಕೆ ಮಾಡಿಕೊಳ್ಳುವ ಬ್ರಹ್ಮಜ್ಞಾನ ! ಈ ನಿಟ್ಟಿ ನಲ್ಲಿ **ಬಯಲ ಬೀಜ ಗಳು** ಓದುಗರ ಹೃದಯದಲ್ಲಿ ಬಿದ್ದು ಅಂಕುರವಾಗಿ ಮರವಾಗಲಿ . ಅದರ ಪರಿಮಳ ಎಲ್ಲೆಡೆ ಬೀರಲಿ. ಅದರ ಜ್ಞಾನದ ಫಲಗಳು ಪ್ರಪಂಚದ ಸರ್ವ ತನುಗಳಿಗೂ ದಕ್ಕಲಿ ಎಂದು ಆಶಿಸುವೆ.

**-ಬಸವರಾಜಸ್ವಾಮಿ**
ಸಂಪಾದಕ
ಸುದ್ದಿಮೂಲ, ರಾಯಚೂರು

# ಹೂರಣ

| ಕ್ರ.ಸಂ. | ಶೀರ್ಷಿಕೆ | ಪುಟ ಸಂಖ್ಯೆ |
|---|---|---|

# ಅರಿವು ಧಾರಣ ಮಾಡಿದ ಅಂಗವೇ ಲಿಂಗ

**ಅಂಗದ ಮೇಲೆ ಲಿಂಗ ಧಾರಣವಾದ ಬಳಿಕ ಮರಳಿ ಭವಿ ನಂಟನೆಂದು ಬೆರಸಿದರೆ**
**ಕೊಂಡ ಮಾರಿಂಗೆ ಹೋಹದು ತಪ್ಪದು.**
**ಹಸಿಯ ಮಣ್ಣಿನಲ್ಲಿ ಮಾಡಿದ ಮಡಕೆ ಅಗ್ನಿ ಮುಖದಿಂದಾದ ಬಳಿಕ**
**ಅದು ತನ್ನ ಪೂರ್ವಕುಲವ ಬೆರಸೂದೆ?**
**ಇದು ಕಾರಣ ಪೂರ್ವ ನಾಸ್ತಿಯಾದ ಭಕ್ತನು ಅಪೂರ್ವ**
**ಕೂಡಲಚೆನ್ನಸಂಗಮದೇವಾ.**

**- ಚೆನ್ನಬಸವಣ್ಣ**

**ಅಂಗದ ಮೇಲೆ ಲಿಂಗ ಧಾರಣವಾದ ಬಳಿಕ ಮರಳಿ ಭವಿ ನಂಟನೆಂದು ಬೆರಸಿದರೆ ಕೊಂಡ ಮಾರಿಂಗೆ ಹೋಹದು ತಪ್ಪದು:**

ಅಂಗದಲ್ಲಿ ತನ್ಮಯವಾದ ಅರಿವನ್ನು ಧಾರಣ ಮಾಡಿ, ಆ ಅರಿವೇ ತಾನಾದ ಬಳಿಕ ಅಂಗ ಅರಿವಿನ ಅಂಗವಾಗುತ್ತದೆ. ಮತ್ತೊಂದು ಅಂಗವನ್ನು ಅರಿವಿನಿಂದ ನೋಡಲು ಆ ಅಂಗವೂ ತನ್ನಂತೆ ಇರುವ ಅರಿವಿನ ಅಂಗ ! ಆ ಅಂಗವನ್ನು ಭವಿ ಎಂದು ದೂಷಿಸಲು ಬರುವುದಿಲ್ಲ; ನಂಟನೆಂದು ಕೂಡಲು ಬರುವುದಿಲ್ಲ. ಎರಡು ಅಂಗಗಳೂ ಪ್ರೀತಿಗೆ ಪಾತ್ರವಾದವುಗಳೇ. ತನಗೆ ಅರಿವು ದೃಢವಾದ ಬಳಿಕ ಸಕಲ ಅಂಗಗಳೂ ಅರಿವುಳ್ಳ ಅಂಗಗಳೇ !

ಅಂಗವನ್ನು ಅಜ್ಞಾನ(ಮಾರಿ) ಆವರಿಸಿರುವುದರಿಂದ ಕಳ್ಳ,ಸುಳ್ಳ, ಹಾದರಿಗ ಭ್ರಷ್ಟ ಎಂಬ ದೂಷಣೆ. ಗಂಡ,ಹೆಂಡತಿ, ಮಕ್ಕಳು ನಂಟರೆಂಬ ಪ್ರೀತಿ. ಅರಿವಾ ದನಂತರ ಅನ್ಯ ಅಂಗ ನೋಡಿ ತಾರತಮ್ಯವೆಸಗಿದರೆ ಹಿಂದೆ ಕೊಂಡ ಮಾರಿ (ಅಜ್ಞಾನ) ತನ್ನ ಅಂಗಕ್ಕೆ ಎಸಗಿ ; ಹಿಂದಿನಂತಾಗುವನು.

**ಹಸಿಯ ಮಣ್ಣಿನಲ್ಲಿ ಮಾಡಿದ ಮಡಕೆ ಅಗ್ನಿ ಮುಖದಿಂದಾದ ಬಳಿಕ ಅದು ತನ್ನ ಪೂರ್ವ ಕುಲವ ಬೆರಸೂದೆ?:**

ಮಣ್ಣಿನಿಂದಾದ ಮಡಕೆ ಬೆಂಕಿಯಲ್ಲಿ ಸುಟ್ಟಬಳಿಕ ಅದು ಮಡಕೆ ಯಾಗುತ್ತದೆ ; ಮಣ್ಣಾಗುವುದಿಲ್ಲ. ಒಡೆದರೂ ಬೋಕಿಯಾಗುತ್ತದೆ ; ಮಣ್ಣಿನಲ್ಲಿ ಮಣ್ಣಾಗಿ ಬೆರೆಯುವುದಿಲ್ಲ. ಹಾಗೆಯೇ ಅಂಗದಲ್ಲಿದ್ದ ಜ್ಞಾನದ ಬಲ ತನಗೆ ಗೋಚರವಾಗಿ ಜ್ಞಾನಿಯೇ ತಾನಾದವನು ಪುನಃ ಅಜ್ಞಾನಕ್ಕೆಳಸುವುದಿಲ್ಲ. ಅಜ್ಞಾನ ಕ್ರಿಯೆಗಳಲ್ಲಿ ಭಾಗಿಯಾಗುವುದಿಲ್ಲ.

**ಇದು ಕಾರಣ ಪೂರ್ವ ನಾಸ್ತಿಯಾದ ಭಕ್ತನು ಅಪೂರ್ವ ಕೂಡಲಚೆನ್ನ ಸಂಗಮದೇವಾ:**

ಅಪೂರ್ವ ಕಾಲದಿಂದಲೂ ಅಂಗ ಜ್ಞಾನಾಂಗವೇ ಆಗಿದೆ. ಪುಸ್ತಕಗಳಿಂದ ಅಂಗಕ್ಕೆ ಜ್ಞಾನ ಬರುವುದಿಲ್ಲ. ಬದಲಾಗಿ ಪುಸ್ತಕಗಳಿಗೆ ಅಂಗ ಜನ್ಮ ನೀಡುತ್ತದೆ. ಇದನ್ನು ಮರೆತು ಜ್ಞಾನಕ್ಕಾಗಿ ಅಂಗ ಪುಸ್ತಕಗಳಿಗೆ ಹಾಗೂ ತನ್ನಂತೆ ಇರುವ ಅಂಗಕ್ಕೆ ಗುರು ಎಂದು ಶರಣು ಹೋಗುತ್ತದೆ. ಈ ಮರುವೇ ಅಂಗಕ್ಕೆ ಮಾರಿಯಾಗಿ ಕಾಡುತ್ತದೆ. ತನ್ನಂಗದಲ್ಲಿರುವ ಜ್ಞಾನಕ್ಕೆ ತಾನೇ (ಭಕ್ತಿ) ವಿಶ್ವಾಸ ಮಾಡಬೇಕು. ಅದು ಅಪೂರ್ವ ಕಾಲದಿಂದಲೂ ಬಂದ ಜ್ಞಾನವೂ ಹೌದು; ಗುರುವೂ ಹೌದು. ಆ ಜ್ಞಾನದ ಬಲದಿಂದ ಅಂಗಕ್ಕೆ ಆವರಿಸಿದ ಅಜ್ಞಾನದ ಕೇಡು ನಿವಾರಣೆಯಾಗುತ್ತದೆ. ಕತ್ತಲ ಕೋಣೆಯಲ್ಲಿ ಬೆಳಕು ಚೆಲ್ಲಿದಂತೆ;

ಕತ್ತಲು ಬೆಳಕಿನಲ್ಲಿ ಲೀನವಾಗಿ ಬೆಳಕೇ ಆದಂತೆ!

ಬೆಳಕು ಎಂದೂ ಕತ್ತಲಾಗಲರಿಯದು. ವಸ್ತುವಿನ ಮೇಲೆ ಬಿದ್ದ ನೆರಳು ಎಂದೂ ಬೆಳಕಾಗಲರಿಯದು. ಆದರೆ ಇದು ಜಡ. ಅಂಗದಲ್ಲಿ ಬೆಳಕು ಇದೆ, ಕತ್ತಲೂ ಇದೆ; ಕತ್ತಲನ್ನು ತಿಳಿಯುವ ಸುಳಿವೂ ಇದೆ. ಆ ಸುಳಿವಿನಿಂದ ಬೆಳಕು ತಿಳಿಯಲು ಹೋದರೆ ಕತ್ತಲು ಕೂಡ ಬೆಳಕೇ ಆಗುತ್ತದೆ ! ಬೆಳಕಿಂಗೆ ಬೆಳಕಾಗಿ ಬೆಳಗುವ ಅಪೂರ್ವ ಬೆಳಕಾಗುತ್ತದೆ ಎಂದಿದ್ದಾರೆ ಮಹಾಜ್ಞಾನಿ ಚೆನ್ನಬಸವಣ್ಣ.

□

**ಅರಿವಿನ ಪರಿಮಳ :**

- □ ಅಂಗದಲ್ಲಿ ತನ್ಮಯವಾದ ಅರಿವನ್ನು ಧಾರಣ ಮಾಡಿ, ಆ ಅರಿವೇ ತಾನಾದ ಬಳಿಕ ಅಂಗ ಅರಿವಿನ ಅಂಗವಾಗುತ್ತದೆ.
- □ ಪುಸ್ತಕಗಳಿಂದ ಅಂಗಕ್ಕೆ ಜ್ಞಾನ ಬರುವುದಿಲ್ಲ. ಬದಲಾಗಿ ಪುಸ್ತಕಗಳಿಗೆ ಅಂಗ ಜನ್ಮ ನೀಡುತ್ತದೆ.
- □ ಅಂಗದಲ್ಲಿ ಬೆಳಕು ಇದೆ, ಕತ್ತಲೂ ಇದೆ; ಕತ್ತಲನ್ನು ತಿಳಿಯುವ ಸುಳಿವೂ ಇದೆ.

# ತನುವಿಗೆ ಬಳಕೆಯಾಗದ ಅರಿವು

**ಕುರುಡನ ಕೈಯ ಕನ್ನಡಿಯಂತೆ !**
**ಭಕ್ತನೆನೆಸಿಕೊಂಡು ಜಂಗಮದೊಡನೆ ದುರುಳತನವ ನುಡಿದರೆ**
**ಅವ ಭಕ್ತನಲ್ಲ, ಲಿಂಗ ವಿರಳ ನೋಡಾ.**
**ಕಾಯದಲ್ಲಿ ವಿಶ್ವಾಸ, ಪ್ರಾಣದಲ್ಲಿ ಅವಿಶ್ವಾಸ**
**ಕಾಯ ಪ್ರಾಣದಂತೆ ಇದ್ದಿತ್ತು , ಜಂಗಮ ಲಿಂಗದ ನಿಲುವು.**
**ಆತ್ಮಸ್ತುತಿ ಪರನಿಂದೆವುಳ್ಳನ್ನಕ್ಕ ಕೂಡಲ ಚೆನ್ನಸಂಗಮದೇವಾ**
**ಕುರುಡನ ಕೈಯ ದರ್ಪಣದಂತೆ.**

**-ಚೆನ್ನಬಸವಣ್ಣ**

ಕಾಯದಲ್ಲಿ ಅಪಾರವಾದ ಜ್ಞಾನವಿದೆ. ಆ ಜ್ಞಾನಕ್ಕೆ ವಿಶ್ವಾಸ ಮಾಡುವ ಭಕ್ತನೂ ಕಾಯದಲ್ಲಿಯೇ ಇದ್ದಾನೆ. ಆ ಜ್ಞಾನ ಅನುಭವಿಸುವ ಜಂಗಮ(ಅರಿವು)ನೂ ಕಾಯದಲ್ಲೇ ಇದ್ದಾನೆ. ಆ ಅರಿವಿಗೆ ವಿಶ್ವಾಸ ಮಾಡುವ ಭಕ್ತನೆನೆಸಿಕೊಂಡು ಅನ್ಯ ಕಾಯದ ಮೇಲೆ ದುರುಳತನವ ನುಡಿದರೆ ಅವ ಭಕ್ತನಲ್ಲ. ವೇಷಧಾರಿ ಭಕ್ತ! ಜ್ಞಾನಕ್ಕೂ ಭಕ್ತನಿಗೂ ಅಜಗಜಾಂತರ ದೂರವೆಂದಿದ್ದಾರೆ ಚೆನ್ನಬಸವಣ್ಣ.

ಕಾಯಕ್ಕೆ ವಿಶ್ವಾಸ ಮಾಡಿ ಕಾಯಹೊತ್ತ ಪ್ರಾಣಕ್ಕೆ ಅವಿಶ್ವಾಸ ಮಾಡಿದಂತೆ ; ಪ್ರಾಣವಿಲ್ಲದ ಕಾಯವನ್ನು ಯಾರೂ ವಿಶ್ವಾಸ ಮಾಡುವುದಿಲ್ಲ. ಕಾಯವಿರುವವ ರೆಗೆ ಕಾಯದ ಪ್ರಾಣವನ್ನು ಯಾರೂ ನೋಡುವುದಿಲ್ಲ. ಹಾಗೆಯೇ ಜಂಗಮ ಲಿಂಗದ ನಿಲುವು ಕೂಡಾ ಕಾಯ ಪ್ರಾಣದಂತಿದೆ.

ಕಾಯದಲ್ಲಿ ಜ್ಞಾನ (ಲಿಂಗ)ವಿದೆ. ಆ ಸುಖವನ್ನು ಅನುಭವಿಸುವ ಜ್ಞಾನಿಯೂ ಇದ್ದಾನೆ.

ತನ್ನನ್ನು ತಾನು ಹೊಗಳಿಕೊಳ್ಳುತ್ತಾ ಇತರರನ್ನು ನಿಂದೆ ಮಾಡುವ ಅಜ್ಞಾನದ ಮನ ಕಾಯ ದಲ್ಲಿ ಇರುವವರೆಗೆ, ತನ್ನ ಜ್ಞಾನ ತಾನೇ ಬಳಕೆ ಮಾಡಿಕೊಳ್ಳಲು ಬಾರದಂತಾಗಿದೆ. ಕುರುಡನ ಕೈಯ್ಯಲ್ಲಿರುವ (ಕನ್ನಡಿ) ದರ್ಪಣದಂತೆ ; ಜ್ಞಾನ ಕಾಯದಲ್ಲಿಯೇ ಮರೆಯಾಗಿದೆ.

ಕಾಯದಲ್ಲಿ ಮರೆಯಾದ (ಜ್ಞಾನ) ಲಿಂಗ ತನ್ನರಿವಿಗೆ ಬಂದರೆ ತಾನೇ ಕೂಡಲ ಚೆನ್ನಸಂಗಮದೇವ. ಆಗ ತನ್ನ ಸ್ತುತಿ ಇಲ್ಲ. ಪರ ನಿಂದೆಯೂ ಇಲ್ಲ.

□

---

**ಅರಿವಿನ ಪರಿಮಳ :**

- □ ಕಾಯದಲ್ಲಿ ಜ್ಞಾನ (ಲಿಂಗ)ವಿದೆ. ಆ ಸುಖವನ್ನು ಅನುಭವಿಸುವ ಜ್ಞಾನಿಯೂ ಇದ್ದಾನೆ.
- □ ಕುರುಡನ ಕೈಯ್ಯಲ್ಲಿರುವ (ಕನ್ನಡಿ) ದರ್ಪಣದಂತೆ ; ಜ್ಞಾನ ಕಾಯದಲ್ಲಿಯೇ ಮರೆ ಯಾಗಿದೆ.

# ಅರಿವಿನ ಪರಿಮಳ

**ಕಾಯವೂ ಜೀವೂ, ಜೀವವೂ ಕಾಯವೂ ಎಂತು ಬೆರಸಿಪ್ಪುದಂತೆ**
**ಲಿಂಗದೊಳಗೆ ಜಂಗಮ, ಜಂಗಮದೊಳಗೆ ಲಿಂಗ ಬೆರಸಿಪ್ಪುದು, ಭಿನ್ನಭಾವವಿಲ್ಲದೆ,**
ನ ಶಿವೇನ ವಿನಾ ಶಕ್ತಿರ್ನ ಶಕ್ತಿರಹಿತಃ ಶಿವಃ।
ಪುಷ್ಪಗಂಧಾವಿವಾನ್ಯೋನ್ಯಂ ಮಾರುತಾಂಬರಯೋರಿವ॥
**ಎಂದುದಾಗಿ ಭಾವ ಭೇದವಿಲ್ಲ, ಜಂಗಮವೆ ಲಿಂಗ ಕೂಡಲಚೆನ್ನಸಂಗಮದೇವಾ.**

**-ಚೆನ್ನಬಸವಣ್ಣ**

ಕಾಯ (ತನು) ಜೀವವನ್ನು ಬೇರ್ಪಡಿಸಿ ನೋಡಲು ಬರುವುದಿಲ್ಲ. ಕಾಯ ಬಿಟ್ಟು ಜೀವವಿಲ್ಲ, ಜೀವ ಬಿಟ್ಟು ಕಾಯವಿಲ್ಲ. ಹಾಗೆಯೇ ಜ್ಞಾನ ಬಿಟ್ಟು ಕಾಯ ವಿಲ್ಲ, ಕಾಯ ಬಿಟ್ಟು ಜ್ಞಾನ(ಲಿಂಗ)ವಿಲ್ಲ. ಕಾಯದ ಕಣಕಣದಲ್ಲಿಯೂ ಬಿಚ್ಚಿ ಬೇರ್ಪಡಿಸದಂತೆ ಜ್ಞಾನ ಕಾಯದಲ್ಲಿ ತನ್ಮಯವಾಗಿ ಬೆರೆತಿದೆ.

**ಲಿಂಗ :** ಕಾಯದಲ್ಲಿ ಬೆರೆತ ಲಿಂಗ ನೋಡುವುದು ಆನಂದ. ಆ (ಜ್ಞಾನ) ಲಿಂಗವೇ ತಾನಾಗುವುದು ಪರಮಾನಂದ. ಕಟೆದ ಕಲ್ಲನ್ನು ಲಿಂಗವೆಂದು ಪೂಜಿಸಿ ಭಕ್ತನಾಗುವುದು ಹಿತವೋ? ಕಲ್ಲನ್ನು ಕಲ್ಲೆಂದು ತಿಳಿದು ಜ್ಞಾನಿಯಾಗುವುದು ಹಿತವೋ ? ಪೂಜೆಗೆ ಕಾರಣವಾದ ಕಲ್ಲಿಗೆ ಜ್ಞಾನ ಹೊಳೆಯುವುದಿಲ್ಲ. ಭಕ್ತಿಗೆ ಕಾರಣವಾದ ಮನುಷ್ಯನಿಗೆ ಹೊಳೆಯುವುದು ಬೇಡವೆ ? ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ ನೋಡಾ ಕಪಿಲಸಿದ್ಧಮಲ್ಲಿಕಾರ್ಜುನಾ ಎಂದು ಸಿದ್ಧರಾಮ ಶಿವಯೋಗಿಗಳು ಕಲ್ಲನ್ನು ಲಿಂಗ ಮಾಡಿಕೊಂಡು ಪೂಜಿಸುವವರನ್ನು ಎಚ್ಚರಿಸಿ ಜ್ಞಾನಕ್ಕೆ ಕರೆದುಕೊಂಡು ಹೋಗುತ್ತಾರೆ.

**ಜಂಗಮ :** ಕಾಯ ಬೇರೆ ಜೀವ ಬೇರೆಯಲ್ಲ, ಕಾಯ ಜೀವ ಬೆರೆತು ಜೀವವಾಗಿದೆ. ಲಿಂಗ ಬೇರೆ ಜಂಗಮ ಬೇರೆಯಲ್ಲ, ಲಿಂಗ ಜಂಗಮ ಬೆರೆತು ಜಂಗಮ ಲಿಂಗವಾಗಿದೆ. ಕಾಯದಲ್ಲಿ ಲಿಂಗ ಬೆರೆತು ಲಿಂಗ ಕಾಯವಾಗಿದೆ. ಲಿಂಗದಲ್ಲಿ ಕಾಯ ಬೆರೆತು ಕಾಯವೇ ಲಿಂಗವಾಗಿದೆ. ಜೀವವಿಲ್ಲದ ಕಾಯ ಶವ ಹೇಗೋ ಅರಿವಿ(ಜಂಗಮ)ನಿಂದ ನೋಡಲು ಲಿಂಗ (ಜ್ಞಾನ)ವಿಲ್ಲದ ಕಾಯವೂ ಶವವೇ!

ಕಾಯದಲ್ಲಿ ಜೀವ, ಲಿಂಗ, ಜಂಗಮ ಭಿನ್ನ ಭಾವವಿಲ್ಲದೆ ಬೆರೆತಿವೆ. ಅಂದರೆ ಕಾಯದಲ್ಲಿ ಜೀವವಿದೆ, ಜ್ಞಾನವಿದೆ, ಅದನ್ನು ತಿಳಿಯುವ ಅರಿವಿದೆ.

ಶಿವನನ್ನು ಬಿಟ್ಟು ಶಕ್ತಿಯಿಲ್ಲ. ಶಕ್ತಿಯಿಲ್ಲದ ಶಿವನೂ ಇಲ್ಲ. ಹೂವನ್ನು ಬಿಟ್ಟು ಪರಿಮಳವಿಲ್ಲ, ಗಾಳಿಯನ್ನು ಬಿಟ್ಟು ಬಯಲಿಲ್ಲ. ಹೂವಿನಲ್ಲಿ ಪರಿಮಳವಿದೆ. ಆ ಪರಿಮಳ ಬಯಲಿಲ್ಲ ಬೆರೆತು ಗಾಳಿಯೊಂದಿಗೆ ಪಸರಿಸುತ್ತದೆ- ಭಾವ ಭೇದವಿಲ್ಲದೆ. ಹಾಗೆಯೇ ಜಂಗಮವೇ ಲಿಂಗ ಕೂಡಲಚೆನ್ನಸಂಗಮದೇವಾ ಎಂದು ಚೆನ್ನಬಸವಣ್ಣನವರು ಕಾಯ-ಜೀವ-ಲಿಂಗ-ಜಂಗಮ ಒಂದೇ ಎನ್ನುವ ಸೂತ್ರವನ್ನು ವೈಜ್ಞಾನಿಕವಾಗಿ ಹೇಳಿದ್ದಾರೆ.

ಕಾಯ ಜೀವ ಹೂ ಆದರೆ ಜ್ಞಾನ ಕಾಯದ ಪರಿಮಳ. ಕಾಯ ಜೀವ ಜ್ಞಾನ ಅರಿವೆಂಬ ಪರಿಮಳ ಜಗದಗಲ ಮುಗಿಲಗಲ ! □

---

**ಅರಿವಿನ ಪರಿಮಳ :**

□ ಕಟೆದ ಕಲ್ಲನ್ನು ಲಿಂಗವೆಂದು ಪೂಜಿಸಿ ಭಕ್ತನಾಗುವುದು ಹಿತವೋ? ಕಲ್ಲನ್ನು ಕಲ್ಲೆಂದು ತಿಳಿದು ಜ್ಞಾನಿಯಾಗುವುದು ಹಿತವೋ ?

# ತಾನೇ ಬುದ್ಧನಾಗುವ ಕಥನವಲ್ಲದ ಕತೆ

**ಗುರುಲಿಂಗ ಶಿವಲಿಂಗ ಜಂಗಮಲಿಂಗ-**
**ಈ ತ್ರಿವಿಧ ಒಂದೇ ಎಂದುದಾಗಿ, ಒಂದರ ಕಡನವೊಂದು ತಿದ್ದುವವು.**
**ಗುರು ನಷ್ಟವಾದರೆ ಜಂಗಮ ಗುರುವಲ್ಲದೆ ಭಕ್ತ ಗುರುವಾಗಲಾಗದು.**
**ಪಶು ಪಶುವಿಂಗೆ ಗರ್ಭವಹುದೆ ಬಸವಂಗಲ್ಲದೆ ?**
**ಭಕ್ತ ಗುರುವಾದರೆ ಅವನನಾಚಾರಿ, ವ್ರತಗೇಡಿ, ಅವನುನ್ಮತ್ತನು.**
**ಗುರುಶಿಷ್ಯರಿಬ್ಬರು ಕೆಟ್ಟಕೇಡಿಂಗೆ ಕಡೆಯಿಲ್ಲ**
**ಕೂಡಲಚೆನ್ನಸಂಗಮದೇವಾ.**

**- ಚೆನ್ನಬಸವಣ್ಣ**

**ಗುರುಲಿಂಗ ಶಿವಲಿಂಗ ಜಂಗಮಲಿಂಗ- ಈ ತ್ರಿವಿಧ ಒಂದೇ ಎಂದುದಾಗಿ, ಒಂದರ ಕಡನವೊಂದು ತಿದ್ದುವವು :**

ಒಮ್ಮೆ ಊರ ಹೊರಗಿನ ಮರವೊಂದರ ಕೆಳಗೆ ಬುದ್ಧ ಧ್ಯಾನಾಸಕ್ತನಾಗಿ ಕುಳಿತಿದ್ದ, ಒಬ್ಬ ಮಹಿಳೆ ಬಂದು ಬುದ್ಧನನ್ನು ಅವಾಚ್ಯ ಶಬ್ದಗಳಿಂದ ವಾಚಾಮಗೋಚರವಾಗಿ ನಿಂದಿಸಿದಳು. ಬುದ್ಧನ ಮುಖದಲ್ಲಿ ಅದೇ ಮುಗುಳ್ನಗೆ. ನಿಂದಿಸಿದರೆ ನಿನಗೆ ನಾಚಿಕೆಯಾಗುವುದಿಲ್ಲವೆ ಎಂದು ಬುದ್ಧನನ್ನು ಎಚ್ಚರಿಸಿ ವ್ಯಗ್ರಳಾದಳು. ಬುದ್ಧ ನಿಧಾನವಾಗಿ ಕಣ್ತೆರೆದು, ತಾಯಿ ನೀನು ನುಡಿದ ಮಾತುಗಳನ್ನು ಪ್ರಸಾದ ರೂಪದಲ್ಲಿ ಆನಂದದಿಂದ ಸ್ವೀಕರಿಸಿದ್ದೇನೆ. ಸಾಧ್ಯವಾದರೆ ಮತ್ತಷ್ಟು ಮಾತನಾಡು. ನಿನಗೆ ತೃಪ್ತಿಯಾಗುವಷ್ಟು ಮಾತನಾಡು ಎಂದರು. ಮಹಿಳೆಯ ಸಿಟ್ಟು ಸರ್ರನೆ ಇಳಿಯಿತು. ಬುದ್ಧನಿಗೆ ನಮಸ್ಕರಿಸಿ, ಬುದ್ಧನಿಂದ ನಿಶ್ಯಬ್ದ ವೇದದ  ಕಲೆ ತಿಳಿದು ಬುದ್ಧಳೇ ಆದಳು.

ಬುದ್ಧ ಗುರು (ಜ್ಞಾನಿ) ಲಿಂಗವೂ ಆಗಿದ್ದ, ಶಿವ (ಜ್ಞಾನಿ)ಲಿಂಗವೂ ಆಗಿದ್ದ, ಜಂಗಮ (ಜ್ಞಾನಿ) ಲಿಂಗವೂ ಆಗಿದ್ದ, ಬುದ್ಧನಲ್ಲಿ ಸಿದ್ಧಾರ್ಥ ಸುಳಿಯಲೇ ಇಲ್ಲ. ಮಹಿಳೆಯ ಬಿರುನುಡಿಗಳನ್ನು ಜ್ಞಾನದಿಂದ (ಜಂಗಮ ಲಿಂಗವಾಗಿ) ಕೇಳಿದ. ಪ್ರತಿ ಶಬ್ದವೂ ಜ್ಞಾನದಿಂದಲೇ ತುಂಬಿತ್ತು. ಒಂದು ವೇಳೆ ಸಿದ್ಧಾರ್ಥ ಚಕ್ರವರ್ತಿ ಯಾಗಿದ್ದರೆ, ಮಹಿಳೆ ತನ್ನ ಪ್ರಜೆ ಎನ್ನುವುದನ್ನೂ ಗಣನೆಗೆ ತೆಗೆದುಕೊಳ್ಳದೆ ಆಕೆಯ ಕತ್ತು ನೆಲಕ್ಕುರುಳುತ್ತಿತ್ತು. ಶಬ್ದ ಅಪಶಬ್ದ ಎಂದು ಶಬ್ದಗಳನ್ನು ವಿಂಗಡಣೆ ಮಾಡಲು ಬರುವುದಿಲ್ಲ. ಆದರೂ ಬುದ್ಧನಲ್ಲದ ಸಿದ್ಧಾರ್ಥನಿಗೆ ಇದು ಹೊಳೆಯುತ್ತಿರಲೇ ಇಲ್ಲ. ಚಕ್ರವರ್ತಿ ಎಂಬ ಸಿದ್ಧಾರ್ಥ ನಷ್ಟವಾಗಿ ಬುದ್ಧನಾಗಿದ್ದ. ಬುದ್ಧನಲ್ಲಿ ಬೋಧೆ ಮಾಡುವ ಗುರುವು ಕೂಡಾ ನಷ್ಟವಾಗಿ, ಜಂಗಮಲಿಂಗವಾಗಿದ್ದ. ಜಂಗಮಲಿಂಗವೆಂದರೆ ಮಹಾಜ್ಞಾನಿ, ಈತ ಶಬ್ದ ಸ್ಪರ್ಶ ರೂಪ ರುಚಿ ವಾಸನೆ ಯಿಂದ ಬಂದ ಅಜ್ಞಾನವನ್ನು ಜ್ಞಾನದಿಂದ ಕ್ಷಣಾರ್ಧದಲ್ಲಿಯೇ ಅರಿತು ಪ್ರಸಾದ ವಾಗಿ ಸ್ವೀಕರಿಸುತ್ತಾನೆ. ಬುದ್ಧ ತನ್ನಲ್ಲಿ ಗುರುವಾಗಿ ಬೋಧಿಸುವ ಗುರುತನವೆಂಬ  ಚಿಕ್ಕ ಅಹಂಕಾರವನ್ನು ಕೂಡಾ ಜಂಗಮಲಿಂಗದ ಸಹಾಯದಿಂದ ಪ್ರಸಾದವಾಗಿ ಸ್ವೀಕರಿಸಿ ಶಿವಲಿಂಗವಾಗಿ ರಾರಾಜಿಸುತ್ತಿದ್ದ.

**ಗುರು ನಷ್ಟವಾದರೆ ಜಂಗಮ ಗುರುವಲ್ಲದೆ ಭಕ್ತ ಗುರುವಾಗಲಾಗದು :**

ಗುರುಗಳಿಗೆ ನಾನು ಗುರುವೆಂಬ ಅಹಂಕಾರ ಬರುತ್ತದೆ. ವೇಷದ ಗುರುಗಳಿಗೆ , ಪೀಠದ ಮೇಲೆ ತಂದು ಕೂಡಿಸಿದ ಗುರುಗಳಿಗೆ ಇದು ಸಹಜ. ಈ ಗುರುಗಳ ಅಹಂಕಾರವನ್ನು ತಂದು ಕೂಡಿಸಿದ ಭಕ್ತನೇ ಮುರಿಯುತ್ತಾನೆ.  ರಾಜನಾಗಿದ್ದ ಸಿದ್ಧಾರ್ಥನನ್ನು ಯಾರೂ ಗುರು ಮಾಡಲಿಲ್ಲ. ತಾನೇ

ಗುರುವಾಗಿದ್ದ; ಬುದ್ಧನಾಗಿದ್ದ. ಇತರರಿಗೆ ಬೋಧೆ ಮಾಡುತ್ತೇನೆಂದು ಸುಳಿಯುವ ಸಿದ್ಧಾರ್ಥನ ಚಿಕ್ಕ ಅಹಂಕಾರವನ್ನು ಕೂಡ ತನುವಿನಲ್ಲಿರುವ ಜಂಗಮಲಿಂಗವು ಪ್ರಸಾದವಾಗಿ ಸ್ವೀಕರಿಸಿ ಶಿವಲಿಂಗವಾಗಿಸಿತ್ತು. ಶಿವಮಯವಾಗಿಸಿತ್ತು.

**ಪಶು ಪಶುವಿಂಗೆ ಗರ್ಭವಹುದೆ ಬಸವಂಗಲ್ಲದೆ? :**

ಸಿದ್ಧಾರ್ಥ ಚಕ್ರವರ್ತಿಯಾಗಿದ್ದರೆ ಕಿರೀಟದ ಆಸೆಗಾಗಿ ಮತ್ತೊಬ್ಬ ರಾಜನನ್ನು ಕೊಲ್ಲುತ್ತಿದ್ದ. ಅಪಾರ ಸಾವು ನೋವುಗಳು ಸಂಭವಿಸಿ, ರಕ್ತದ ಕಾಲುವೆ ಹರಿಯುತ್ತಿತ್ತು. ಚಕ್ರವರ್ತಿಯ ವೇಷ ಹೊತ್ತ ಸಿದ್ಧಾರ್ಥನಿಗೆ ಹೊಳೆಯುವುದು ಇದು ಒಂದೇ. ರಾಜ್ಯದ ವಿಸ್ತಾರದಿಂದ ತನ್ನ ಪ್ರಜೆಗಳು ಸುಖಿಗಳಾಗುತ್ತಾರೆಂದು, ತನ್ನ ಬಲ ಅಧಿಕವಾಗುತ್ತದೆ ಎಂದು.

ಮತ್ತೊಂದು ರಾಜ್ಯದ ಪ್ರಜೆಗಳೂ ಪ್ರಜೆಗಳೇ. ಆ ರಾಜ್ಯದ ರಾಜನೂ ರಾಜನೇ. ಅವನ ಸೈನಿಕರೂ ಸೈನಿಕರೆ; ಅವರೂ ಸುಖವಾಗಿರುವುದು ಬೇಡವೆ ? ನನ್ನ ಸುಖಕ್ಕಾಗಿ ಅವರು ನಷ್ಟವಾಗಬೇಕೆ? ಅವರೂ ನನ್ನಂತೆ ಮನುಷ್ಯರಲ್ಲವೆ ? ಅವರೂ ನಾನೂ ಸುಖ ಪಡುವ ಬಗೆ ಹೇಗೆ ? ಎಂದು ಚಕ್ರವರ್ತಿ ವೇಷದ ರಾಜನಿಗೆ ಹೊಳೆದರೆ ಸಾಕು; ರಾಜ ತನ್ನ ತನುವಿನಲ್ಲಿಯೇ ಒಡಮೂಡಿದ ಅರಿವಿಗೆ ಭಕ್ತನಾಗುತ್ತಾನೆ. ಗುರುವಾಗುತ್ತಾನೆ. ಗುರುಲಿಂಗವಾಗುತ್ತಾನೆ. ಶಿವಲಿಂಗವಾಗುತ್ತಾನೆ. ಜಂಗಮಲಿಂಗವಾಗುತ್ತಾನೆ. ರಾಜ ತನ್ನ ವೃತ್ತಿಗನುಗುಣವಾಗಿ ವಿಚಾರಿಸಿದರೆ, ರಾಜ್ಯವಿಸ್ತಾರಕ್ಕಾಗಿ ಯುದ್ಧ ಸಾವು ನೋವುಗಳು ಸಂಭವಿಸುವವು. ರಾಜ ಮತ್ತು ಅವನ ವೃತ್ತಿಯ ವಿಚಾರದಿಂದ ಅರಿವು ಹುಟ್ಟುವುದಿಲ್ಲ. ಹೋರಿಯಿಲ್ಲದೆ ಹಸು ಮತ್ತು ಹಸು ಕೂಡಿದ ಲೈಂಗಿಕ ಕ್ರಿಯೆಯಿಂದ ಕರು ಹಾಕಲು ಹೇಗೆ ಸಾಧ್ಯವಿಲ್ಲವೋ ಹಾಗೆ ತನುವಿನಲ್ಲಿ ಅರಿವಿನ ವಿಚಾರ ಹೊಳೆಯುವುದಿಲ್ಲ ಎಂದು ಚೆನ್ನಬಸವಣ್ಣನವರು ತನುವಿನಲ್ಲಿ ತನ್ಮಯವಾದ ಅರಿವನ್ನು ತಾನೇ ನೋಡಿಕೊಳ್ಳುವ ಬಗೆ ವಿವರಿಸಿದ್ದಾರೆ.

**ಭಕ್ತ ಗುರುವಾದರೆ ಅವನನಾಚಾರಿ, ವ್ರತಗೇಡಿ, ಅವನುನ್ಮತ್ತನು. ಗುರು ಶಿಷ್ಯರಿಬ್ಬರು ಕೆಟ್ಟ ಕೇಡಿಂಗೆ ಕಡೆಯಿಲ್ಲ ಕೂಡಲ ಚೆನ್ನಸಂಗಮದೇವಾ:**

ಭಕ್ತಿಯಿಂದ ವೇದ ಉಪನಿಷತ್ತು ಭಗವದ್ಗೀತೆ ತಿಳಿಯಲು ಹೋದವ ಗುರುವಾದರೆ ಅವನು ಅನಾಚಾರಿ, ವ್ರತಗೇಡಿ, ಏಕೆಂದರೆ ಅರಿವನ್ನು ತಿಳಿಯಲು ಹೋದ ಭಕ್ತ ಆ ಅರಿವಿನ ಉನ್ಮತ್ತೆಯಿಂದ ಅಹಂಕಾರಿಯಾದ. ಆ ಅರಿವೇ ತಾನೆಂದು ತಿಳಿಯದೇ ಪಂಡಿತನಾದ. ಪಂಡಿತನಿಗೆ ಭಗವದ್ಗೀತೆ, ವೇದ, ಉಪನಿಷತ್ತುಗಳು ಶ್ರೇಷ್ಠವೇ ಹೊರತು ಆ ಗ್ರಂಥಗಳನ್ನು ಹೊರಹಾಕಿದ ತನುಗಳಲ್ಲ.ಅಂತವನು ಗುರುವಲ್ಲ,ಪಾಂಡಿತ್ಯದಿಂದ ಉನ್ಮತ್ತನಾದವನು; ವ್ರತಗೇಡಿ, ಅನಾಚಾರಿ. ಅರಿವು ತಿಳಿಯಲು ಹೋದ ಭಕ್ತ ಗುರುವಾದರೆ ಅವನು ವೇಷದ ಗುರು. ಆ ಗುರುವಿಗೆ ತನ್ನ ತನುವಿನಲ್ಲಿ ತನ್ಮಯವಾದ ಗುರುವಿನ ದರ್ಶನವಿಲ್ಲ. ಅರಿವು ತಿಳಿಯ ಹೋದ ಭಕ್ತ ಶಿಷ್ಯನಾಗಬೇಕಿತ್ತು. ಆತನೇ ಗುರುವಾದರೆ ಮತ್ಯಾರು ಆತನಿಗೆ ಬೋಧೆ ಮಾಡಬೇಕು? ಶಿಷ್ಯ ತನುವಿಗೆ ವೇಷ ಹಾಕಿಕೊಂಡು ತಾನೇ ಗುರುವಾದ. ತನುವಿನಲ್ಲಿ ತನ್ಮಯವಾದ ಗುರು ಹಾಗೆ ಉಳಿದ.

ವೇಷಧಾರಿ ಗುರು ಗುರುವನ್ನು ತಿಳಿಯಲಿಲ್ಲ. ಶಿಷ್ಯನೂ ಗುರುವನ್ನು ತಿಳಿಯಲಿಲ್ಲ. ಇವರಿಬ್ಬರೂ ಕೆಟ್ಟ ಕೇಡಿಂಗೆ ಕಡೆಯಿಲ್ಲ. ಗುರುವಾಗಿ ಭಕ್ತರನ್ನು ಮೋಸ ಮಾಡಲಿಲ್ಲ. ತನ್ನನ್ನು ತಾನೇ ಮೋಸ ಮಾಡಿಕೊಂಡು ಕೇಡಿಂಗೆ ಗುರಿಯಾದ.

□

---

**ಅರಿವಿನ ಪರಿಮಳ :**

□ ಪಂಡಿತನಿಗೆ ಭಗವದ್ಗೀತೆ, ವೇದ, ಉಪನಿಷತ್ತುಗಳು ಶ್ರೇಷ್ಠವೇ ಹೊರತು ಆ ಗ್ರಂಥಗಳನ್ನು ಹೊರಹಾಕಿದ ತನುಗಳಲ್ಲ.

# ಸತ್ಯದ ಆಚಾರವೇ ಸದಾಚಾರ

**ಅಮಳೋಕ್ಯದಲ್ಲಿ ಲಿಂಗವ ಧರಿಸುವರೆ**
**ಅನ್ನಪಾನಾದಿಗಳ ಹಂಗಳಿಯಬೇಕು,**
**ಅಹಂಕಾರ ಮದಂಗಳಳಿಯಬೇಕು, ಜ್ಞಾನ ವಿಸ್ತಾರ ಪರಿಪೂರ್ಣವಾಗಿರಬೇಕು,**
**ಅನುಭಾವ ಘನಮನ ವೇದ್ಯನಾಗಬೇಕು, ಕಾಮದ ಕಣ್ಣರಿಯದಿರಬೇಕು,**
**ಶಬ್ದ ನಿಶಬ್ದವಾಗಬೇಕು, ಮಹದಾಶ್ರಯದಲ್ಲಿ ಮನವು ಲೀನವಾಗಬೇಕು.**
**ಕೂಡಲ ಚೆನ್ನಸಂಗನಲ್ಲಿ ಏಕಾರ್ಥವಾಗಿರಬೇಕು.**

*-ಚೆನ್ನಬಸವಣ್ಣ*

**ಅಮಳೋಕ್ಯದಲ್ಲಿ ಲಿಂಗಧರಿಸುವರೆ ಅನ್ನಪಾನಾದಿಗಳ ಹಂಗಳಿಯಬೇಕು:**

ಲಿಂಗವೆಂದರೆ ಜ್ಞಾನ. ಇದು ಹನ್ನೆರಡನೇ ಶತಮಾನಕ್ಕಿಂತಲೂ ಹಿಂದೆ ಬಳಸಿದ ಪದ.ಲಿಂಗ ಪದವನ್ನೇ ಸಂಕೇತವನ್ನಾಗಿಸಿ ಉತ್ತಮಾಂಗ,ಗಳ,ಕಕ್ಷೆ,ಮುಖಸಜ್ಜೆ, ಅಮಳೋಕ್ಯ ಎಂದು ತನುವಿನ ವಿವಿಧ ಭಾಗದಲ್ಲಿ ಲಿಂಗ ಧರಿಸುವ ಸಂಪ್ರದಾಯ ಶುರುವಾಯಿತು.

ಹೀಗೆ ದೇಹದ ಕೆಲ ಭಾಗಗಳಲ್ಲಿ ಲಿಂಗ ಧರಿಸುವುದರಿಂದ ದೇಹದ ವಿಕೃತ ಗುಣಗಳು ನಿರ್ನಾಮವಾಗಲಾರವು.

**ಅಮಳೋಕ್ಯ :** ಗಂಟಲಲ್ಲಿ ಲಿಂಗ ಧರಿಸುವ ಪದ್ಧತಿ ರೂಢಿಯಲ್ಲಿತ್ತು . ಊಟ ಮಾಡುವಾಗ ಗಂಟಲಲ್ಲಿಯ ಲಿಂಗ ಬದಿಗಿರಿಸಿ ಪುನಃ ಗಂಟಲಿನಲ್ಲಿ ಲಿಂಗ ಧರಿಸುವುದು ಸಂಪ್ರದಾಯ.ಲಿಂಗ ಗಂಟಲಿನಲ್ಲಿರುವುದರಿಂದ ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ಜಗಳ ಮಾಡುವ ಪ್ರಸಂಗವೇ ಇರುತ್ತಿರಲಿಲ್ಲ. ಇದು ಒಂದು ನಿಯಮವಾಯಿತು.

ತನುವಿನ ಅಜ್ಞಾನವನ್ನು ತಿಳಿಯುವುದರ ಮೂಲಕ ಕಳೆದು ಕೊಳ್ಳಬೇಕೇ ಹೊರತು ಯಾವುದೇ ನಿಯಮದಿಂದ ಸಾಧ್ಯವಾಗುವುದೇ ಇಲ್ಲ. ಲಿಂಗ ಧರಿಸಿದರೆ ನಾಲಿಗೆಯ ಅಜ್ಞಾನ ಅಳಿಯಬೇಕು.ಅಹಂಕಾರ, ಮದಗಳು ಸುಳಿಯಬಾರದು, ಜ್ಞಾನದಿಂದ ಪರಿಪೂರ್ಣನಾಗಿರಬೇಕು, ಕಣ್ಣಿನಲ್ಲಿ ಕಾಮ ಸುಳಿಯಬಾರದು, ಶಬ್ದಗಳಿಂದ ವಿಕೃತನಾಗದೆ ನಿಶಬ್ದವೇದಿಯಾಗಬೇಕು, ತನುವಿನ ಜ್ಞಾನದಲ್ಲಿ ಮನ ಕೂಡಿಕೊಂಡು ಜ್ಞಾನವೇ ತಾನಾಗಿ, ತಾನು ಜ್ಞಾನ ಏಕಾರ್ಥವಾಗಿ ರಬೇಕು.ಹೀಗಿರುವುದೇ ಲಿಂಗಧಾರಣೆಯ ಲಕ್ಷಣ ಎನ್ನುತ್ತಾರೆ ಚೆನ್ನಬಸವಣ್ಣ.

ಗಂಟಲಿನಲ್ಲಿ ಲಿಂಗ ಧರಿಸಿದರೆ ನಾಲಿಗೆ ಪದಾರ್ಥದ ರುಚಿಯೆಡೆಗೆ ತನುವನ್ನು ಕರೆದು ಕೊಂಡು ಹೋಗದಿರಲು ಸಾಧ್ಯವೇ? ರುಚಿಗಾಗಿ ತನುವನ್ನು ಸಂಕಟಕ್ಕೆ ಗುರಿ ಮಾಡದಿರಲು ಸಾಧ್ಯವೇ ? ತೋರಿಕೆಗೆ ಲಿಂಗಧಾರಿ ಎಂದು ಕಾಣಬಹುದು, ಆದರೆ ರುಚಿಗಾಗಿ ತನುವಿನ ಸಂಕಟ ನಿಲ್ಲವುದಿಲ್ಲ. ರುಚಿ ಉತ್ಪತ್ತಿಯಾದ ನಾಲಿಗೆಯನ್ನು ಪದಾರ್ಥವನ್ನು ಜ್ಞಾನದಿಂದ ನೋಡಿದಾಗ ರುಚಿಯ ಬಯಕೆ ಹಿಂಗುತ್ತದೆ. ಸೇವಿಸಿದ ಪದಾರ್ಥಗಳೆಲ್ಲ ಪ್ರಸಾದವಾಗುತ್ತದೆ.

**ಕಾಮದ ಕಣ್ಣರಿಯದಿರಬೇಕು,ಶಬ್ದ ನಿಶಬ್ದವಾಗಬೇಕು:**

ಕಣ್ಣು ಕಾಣುತ್ತದೆ. ಆದರೆ ಬೇಕು ಎನ್ನುವ ಕಾಮದ ಕಣ್ಣಿನ ಬೇಡಿಕೆಯಿಂದ

ಕುರುಡಾಗಿದೆ.ಯಾಕೆ ಬೇಕು ಎನ್ನುವ ಪ್ರಶ್ನೆ ಕಣ್ಣಿನಲ್ಲಿ ಹುಟ್ಟುವುದೇ ಇಲ್ಲ. ಕಣ್ಣು ಆಭರಣ ನೋಡಿ ಕಾಮಿಸಿ ಖರೀದಿಸಿ ತನುವಿಗೆ ಧರಿಸುತ್ತದೆ. ಕಾಮಿಸಿ ಕಳುವು ಮಾಡುತ್ತದೆ. ಆಭರಣ ನೋಡಿ ಬಯಕೆ ಮಾಡುವ ವಿಧಾನ ಒಂದೇ ಆದರೂ ಪಡೆಯುವ ಬಗೆ ಬೇರೆ ಬೇರೆ. ಒಂದು ತನು ಕಳವು ಮಾಡಿ ಪಡೆಯಿತು, ಮತ್ತೊಂದು ತನು ಖರೀದಿ ಮಾಡಿ ಪಡೆಯಿತು. ಬಯಕೆ ಮಾಡಿದ್ದಕ್ಕಾಗಿ ಖರೀದಿಸಿತು. ಬಯಕೆ ಮಾಡಿದ್ದಕ್ಕಾಗಿ ಕಳುವು ಮಾಡಿತು; ಬಯಕೆ ಏಕೆ ಉಂಟಾಯಿತೆಂಬ ಸತ್ಯ ಎರಡೂ ಕಣ್ಣಿಗೂ ಹೊಳೆಯಲಿಲ್ಲ. ಹೊಳೆದರೆ ಆಭರಣ ದಲ್ಲಿರುವ ಸತ್ಯ ಕಣ್ಣಿಗೆ ಗೋಚರಿಸುತ್ತದೆ. ಆಭರಣದ ಸತ್ಯ ಚಿನ್ನ. ಚಿನ್ನದ ಸತ್ಯ ಲೋಹ ಮತ್ತು ಹಳದಿ ಬಣ್ಣ! ಲೋಹ, ಲೋಹದ ಮಾಟ, ಲೋಹದಲ್ಲಿ ಬೆರೆತ ಬಣ್ಣ ತಿಳಿದ ಕಣ್ಣು ಆಭರಣಗಳನ್ನು ಸಂಗ್ರಹಿಸುವುದಿಲ್ಲ; ಸತ್ಯ ಹೊಳೆದರೆ ಖರೀದಿ ಸುವುದಿಲ್ಲ ; ಧರಿಸುವುದಿಲ್ಲ; ಕಳುವು ಕೂಡಾ ಮಾಡುವುದಿಲ್ಲ.

ವಸ್ತುವಿನ ಸತ್ಯ, ಧರಿಸುವ ಬಾಹ್ಯ ಲಿಂಗದಿಂದ ಹೊಳೆಯುವುದಿಲ್ಲ. ತನುವಿನ ಅಹಂಕಾರ,ಮದ ಧರಿಸುವ ಲಿಂಗದಿಂದ ತಿಳಿಯುವುದಿಲ್ಲ, ಧರಿಸುವ ಲಿಂಗದಿಂದ ಜ್ಞಾನ ವಿಸ್ತಾರವಾಗಿ ಪರಿಪೂರ್ಣನಾಗುವುದಿಲ್ಲ, ಕೇಳಿದ ಶಬ್ದ ನಿಶಬ್ದವಾಗುವುದಿಲ್ಲ. ಬದಲಾಗಿ ಸರ್ವಾಂಗದಲ್ಲಿ (ಜ್ಞಾನ) ಲಿಂಗವೇ ಇದೆ. ಸರ್ವಾಂಗವೂ ಲಿಂಗವೇ ಆಗಿದೆ ಎಂಬುದನ್ನು ತಿಳಿಯಬೇಕು. ಬಲವಾಗಿ ತಿಳಿ ಯಬೇಕು.

ತನುವಿನಲ್ಲಿ ವಸ್ತುವನ್ನು ಕಾಮಿಸಿ ಖರೀದಿಸಿ ಅಥವಾ ಕಳುವಿನಿಂದ ಸಂಗ್ರಹಿ ಸುವ ಅಜ್ಞಾನವೂ ಇದೆ. ವಸ್ತುವಿನ ಸತ್ಯ ತಿಳಿದು ಸುಮ್ಮನಾಗುವ ಜ್ಞಾನವೂ ಇದೆ.

ಸರ್ವಾಂಗವೂ ಜ್ಞಾನಾಂಗವೇ ಆಗಬೇಕು. ಅಂಗದ ಕಣ ಕಣದಲ್ಲಿ ಬೆರೆತ ಆ ಜ್ಞಾನದ ಸಹಾಯದಿಂದ ವಸ್ತುವಿನ ಸತ್ಯ ತಿಳಿಯಬೇಕು.ತಿಳಿಯುವ ಆ ಆಚಾರದಲ್ಲಿಯೇ ಏಕಾರ್ಥವಾಗಬೇಕು ಎಂಬುದೇ ಮಹಾಜ್ಞಾನಿ ಚೆನ್ನಬಸವಣ್ಣನ ಆಶಯ.

□

**ಅರಿವಿನ ಪರಿಮಳ :**

□ ಆಭರಣದ ಸತ್ಯ ಚಿನ್ನ. ಚಿನ್ನದ ಸತ್ಯ ಲೋಹ ಮತ್ತು ಹಳದಿ ಬಣ್ಣ! ಲೋಹ, ಲೋಹದ ಮಾಟ, ಲೋಹದಲ್ಲಿ ಬೆರೆತ ಬಣ್ಣ ತಿಳಿದ ಕಣ್ಣು ಆಭರಣಗಳನ್ನು ಸಂಗ್ರಹಿಸುವುದಿಲ್ಲ; ಸತ್ಯ ಹೊಳೆದರೆ ಖರೀದಿ ಸುವುದಿಲ್ಲ ; ಧರಿಸುವುದಿಲ್ಲ; ಕಳುವು ಕೂಡಾ ಮಾಡುವುದಿಲ್ಲ.

# ಇಂದ್ರಿಯಗಳು ಸ್ಪರ್ಶಿಸಿದ ಪದಾರ್ಥ ಜ್ಞಾನಕ್ಕರ್ಪಿತವಲ್ಲ

**ಕಂಗಳು ನೋಡಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,**
**ಕಿವಿಗಳು ಕೇಳಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,**
**ನಾಸಿಕ ಮುಟ್ಟಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,**
**ಜಿಹ್ವೆ ಸೋಂಕಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,**
**ಕೈಗಳು ಮುಟ್ಟಿದ ಪದಾರ್ಥ ಲಿಂಗಕ್ಕರ್ಪಿತವಲ್ಲ,**
**ರೂಪು, ರಸ, ಗಂಧ, ರುಚಿ, ಸ್ಪರ್ಶವನು**
**ಕೂಡಲ ಚೆನ್ನಸಂಗಯ್ಯ ನೀನರಿಯಲು ಪ್ರಸಾದವೆನಗೆ.**

**-ಚನ್ನಬಸವಣ್ಣ**

ತನು ಎನ್ನುವುದು ಒಂದೇ ಆದರೂ ಇದರಲ್ಲಿ ಮೂರು ಭಾಗಗಳಿವೆ. 1) ಸ್ಥೂಲ ತನು: ಇದು ಎಲ್ಲರಿಗೂ ಕಾಣುವ ತನು. 2) ಸೂಕ್ಷ್ಮ ತನು: ಮನ ಆವರಿಸಿದ ತನು; ಇದು ಯಾರಿಗೂ ಕಾಣುವುದಿಲ್ಲ. ಕಾಣುವ ತನುವಿನಲ್ಲಿ ಮನ ಆಶ್ರಯ ಪಡೆದು ತನ್ನಿಚ್ಛೆಯಂತೆ ತನುವನ್ನು ದುರ್ಬಳಕೆ ಮಾಡಿಕೊಳ್ಳುತ್ತದೆ. ಶರಣರು ಇದಕ್ಕೆ ಅಜ್ಞಾನ, ಮರವು, ಸೂಳೆ, ಚಂಚಲೆ, ಹೆಂಡತಿ ಎಂದು ಕರೆದಿದ್ದಾರೆ. 3) ಕಾರಣ (ಜ್ಞಾನ) ತನು: ಇದು ಕೂಡ ಯಾರಿಗೂ ಕಾಣುವುದಿಲ್ಲ. ಕಾಣುವ ತನುವಿನ ಜನ್ಮಕ್ಕೆ ಕಾರಣವಾದ ಜ್ಞಾನವೇ ಕಾರಣ ತನು. ಇದಕ್ಕೆ ಶರಣರು ಲಿಂಗ ಎಂದು ಕರೆದು ಶರಣುಹೋದರು. ಮನವನ್ನು ಸತಿಯಾಗಿಸಿ, ಲಿಂಗ ಪತಿಯಾಗಿಸಿದರು. ತತ್ವಪದಕಾರರು, ಜನಪದರು, ಜ್ಞಾನಕ್ಕೆ ಗಂಡ ಎಂದು ಕರೆದರು. ದಾಸರು ಜ್ಞಾನಕ್ಕೆ ದಾಸರಾದರು ಪೂರ್ವಜರು ಮನಕ್ಕೆ ಪಶು ಎಂದು, ಜ್ಞಾನಕ್ಕೆ ಪಶುಪತಿ ಎಂದು ಕರೆದರು.

ಜ್ಞಾನ : ಕಣ್ಣಿನಲ್ಲಿ, ನೋಟವಾಗಿ , ಕಿವಿಯಲ್ಲಿ ಶಬ್ದವಾಗಿ, ಚರ್ಮದಲ್ಲಿ ಸ್ಪರ್ಶವಾಗಿ, ಮೂಗಿನಲ್ಲಿ ವಾಸನೆಯಾಗಿ, ನಾಲಿಗೆಯಲ್ಲಿ ರುಚಿಯಾಗಿ ಬೆರತಿದೆ. ಸರ್ವಾಂಗದಲ್ಲಿ ಬೇರ್ಪಡಿಸದಂತೆ ಸಮರಸವಾಗಿ ಬೆರೆತ ಈ ಲಿಂಗ(ಜ್ಞಾನ)ವನ್ನು ತಿಳಿಯುವ ಕ್ರಿಯೆಗೆ ಶರಣರು ಲಿಂಗಾಂಗ ಸಾಮರಸ್ಯ ಎಂದು ಕರೆದರು.

ಕಣ್ಣು, ಕಿವಿ, ಮೂಗು, ನಾಲಿಗೆ ಹಾಗೂ ಚರ್ಮದಲ್ಲಿ ಜ್ಞಾನ ಹೇಗೆ ಬೆರೆತಿದೆಯೋ ಹಾಗೆ ಮನ (ಅಜ್ಞಾನ) ವೂ ಆವರಿಸಿಕೊಂಡಿದೆ.

**ಕಂಗಳು ನೋಡಿದ ಪದಾರ್ಥ ಲಿಂಗಕ್ಕರ್ಪಿತವಲ್ಲ:**

ಕಣ್ಣು ಜ್ಞಾನದ ಆಸ್ತಿ ; ಅದರ ಸ್ವತ್ತು. ಕಾಣುವ ಕಣ್ಣಿನಲ್ಲಿ ಸತ್ಯವೇ ತುಂಬಿದೆ. ಆದರೆ, ನೋಡಿದ ಪದಾರ್ಥ ಕಣ್ಣಿಗೆ ವಿಪರೀತವಾಗಿ ಕಂಡು. ಪದಾರ್ಥದಲ್ಲಿಯ ಸತ್ಯ ಕಾಣುವುದೇ ಇಲ್ಲ. ಏಕೆಂದರೆ ಕಣ್ಣಿನಲ್ಲಿ ಮನ (ಅಜ್ಞಾನ) ಆವರಿಸಿಕೊಂಡಿದೆ. ಉದಾ:

ಮನ ಆವರಿಸಿದ ಕಣ್ಣು : ಯುವತಿ ಧರಿಸಿದ ಆಭರಣ ನೋಡಿ ಅಪೇಕ್ಷೆಪಟ್ಟು ಕದಿಯಲು ಹೋಯಿತು. ಅಡ್ಡಿಪಡಿಸಿದ ಯುವತಿಯನ್ನು ಕೊಂದು ಆಭರಣ ಪಡೆಯಿತು. ಕಳ್ಳ, ಕೊಲೆಗಡುಕ ಎಂದು ಜ್ಞಾನ ತನುವಿಗೆ ಹಣೆಪಟ್ಟಿ ಹಚ್ಚಿ ಜೇಲು ಸೇರಿತು. ಮನಕ್ಕೆ ಆಭರಣದ ಸತ್ಯ ಹೊಳೆಯಲಿಲ್ಲ. ಕಣ್ಣು ನೋಡಿದ ಪದಾರ್ಥ ಲಿಂಗ (ಜ್ಞಾನ)ಕ್ಕೆ ಅರ್ಪಣೆಯಾಗಲಿಲ್ಲ. ಅಜ್ಞಾನಕ್ಕೆ ಗುರಿಯಾಯಿತು.

ಮನ ಆವರಿಸಿದ ಕಣ್ಣು : ಯುವತಿ ಧರಿಸಿದ ಆಭರಣ ನೋಡಲಿಲ್ಲ. ತನು ನೋಡಿತು. ತನುವನ್ನು ಭೋಗಿಸಲು ಆಪೇಕ್ಷಿಸಿತು. ಅಡ್ಡಿಪಡಿಸಿದಾಗ ಕೊಲೆ ಮಾಡಿತು. ಅತ್ಯಾಚಾರಿ, ಕೊಲೆಗಡುಕ ಎಂದು ತನುವಿಗೆ ಹಣೆಪಟ್ಟಿ ಹಚ್ಚಿ ಜೇಲು ಸೇರಿತು. ಕಣ್ಣಿಗಾವರಿಸಿದ ಮನಕ್ಕೆ (ಅಜ್ಞಾನ) ತನುವಿನ ಸತ್ಯ ಹೊಳೆಯಲಿಲ್ಲ. ನೋಡಿದ ಪದಾರ್ಥ ಜ್ಞಾನ (ಲಿಂಗ)ಕ್ಕೆ ಅರ್ಪಣೆಯಾಗಲಿಲ್ಲ. ಅಜ್ಞಾನಕ್ಕೆ ಗುರಿಯಾಯಿತು.

ಜ್ಞಾನಭರಿತ ಕಣ್ಣು: ಆಭರಣ ಧರಿಸಿದ ಯುವತಿಯನ್ನು ನೋಡಿತು. ಯುವತಿ ತನ್ನಂತಹ ತನುವನ್ನು ಹೊಂದಿದ್ದಾಳೆ. ರಕ್ತ, ಮೂಳೆ, ಮಾಂಸ, ಮಜ್ಜ, ಮೇದಸ್ಸು ಮುಚ್ಚಿದ ಚರ್ಮದ ಕವಚ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಹೊದ್ದ ಜ್ಞಾನೇಂದ್ರಿಯಗಳೂ ಕೂಡ ತನ್ನಂತಿವೆ. ತನ್ನದೇ ಆದ ಪ್ರತಿ ರೂಪ. ಆ ರೂಪದಲ್ಲಿ ತನ್ನಂತೆ ಇರುವ ಜ್ಞಾನವೆನ್ನುವ ನಿರೂಪ! ರೂಪ ಹೊತ್ತ ನಿರೂಪದಿಂದಲೇ ಯುವತಿಯ ಸೌಂದರ್ಯ ದ್ವಿಗುಣಗೊಂಡಿದೆ. ನಿರೂಪವಿಲ್ಲದಿದ್ದರೆ ರೂಪ ಶವ. ನಿರೂಪವೆಂಬ ಶಿವನೊಂದಿಗೆ ಭೋಗಿಸುವಂತಿಲ್ಲ. ರೂಪವೆಂಬ ಶವವನ್ನು ಹರಿದು ತಿನ್ನುವಂತೆಯೂ ಇಲ್ಲ. ಕಣ್ಣಿನಿಂದ ನೋಡಿದ ಯುವತಿ ಜ್ಞಾನ(ಲಿಂಗ) ಕ್ಕೆ ಅರ್ಪಿತವಾದಳು.

ಜ್ಞಾನಭರಿತ ಕಣ್ಣು: ಆಭರಣ ನೋಡಿತು. ಆಭರಣದಲ್ಲಿ ಅಡಗಿದ ಚಿನ್ನ ನೋಡಿತು. ಚಿನ್ನದಲ್ಲಿ ಬೇರ್ಪಡಿಸದಂತೆ ಅಡಗಿದ ಹಳದಿ ಬಣ್ಣವನ್ನೂ ನೋಡಿತು. ಭೂಮಿಯೊಳಗೆ ದೊರೆತ ಹಳದಿ ಲೋಹ ದೊಡ್ಡದೋ? ಅದನ್ನು ಅಗೆದು ಹೊರತೆಗೆದ ಚೇತನ ದೊಡ್ಡದೊ? ಯಕಶ್ಚಿತ್ ಲೋಹಕ್ಕೆ ಚೇತನ ಮರುಳಾಗಬೇಕೆ? ಆ ಲೋಹದಾಸೆಗಾಗಿ ಜ್ಞಾನ ತನುವಿಗೆ ಕಳ್ಳ, ಕೊಲೆಗಡುಕ ಎಂಬ ಹಣೆಪಟ್ಟಿ ಅಂಟಿಸಿಕೊಳ್ಳಬೇಕೆ ಎಂಬುದನ್ನು ಮನಗಂಡ ಕಣ್ಣು ಆಭರಣವೆಂಬ ಪದಾರ್ಥವನ್ನು ನೋಡಿ ಜ್ಞಾನ (ಲಿಂಗ)ಕ್ಕೆ ಅರ್ಪಣೆ ಮಾಡಿತು.

ಕಣ್ಣಿನಲ್ಲಿ ಜ್ಞಾನವಿದೆ. ಪದಾರ್ಥ(ಆಭರಣ)ದ ಸತ್ಯವನ್ನು ನೋಡದ ಅಜ್ಞಾನವೂ ಇದೆ.

ಪದಾರ್ಥದ ಸತ್ಯ ತಿಳಿಯದ ಕಣ್ಣು ಆಭರಣ ಧರಿಸಲು ತನುವಿ(ಯುವತಿ)ಗೆ ಆದೇಶ ನೀಡಿತು. ಹಾಗೆಯೇ ಪದಾರ್ಥದ ಸತ್ಯ ತಿಳಿಯದ ಕಣ್ಣು ಆ ಭರಣ ಕದಿಯಲು ತನುವಿ(ಕಳ್ಳ)ಗೆ ಆದೇಶ ನೀಡಿತು. ಯುವತಿಗೂ ಆಭರಣದ ಸತ್ಯ ಹೊಳೆಯಲಿಲ್ಲ. ಕಳ್ಳನಿಗೂ ಆಭರಣದ ಸತ್ಯ ಹೊಳೆಯಲಿಲ್ಲ. ಕಾರಣ, ಇವರಿಬ್ಬರೂ ನೋಡಿದ ಪದಾರ್ಥ ಲಿಂಗ(ಜ್ಞಾನ)ಕ್ಕರ್ಪಿತವಾಗಲಿಲ್ಲ.

ಕಣ್ಣಿಗೆ ತನ್ನ ಜ್ಞಾನ ಹೊಳೆದರೆ ಆಭರಣ ಧರಿಸುವ ಅಂಗವೂ ಲಿಂಗವೆ ! ಕದಿಯುವ ಅಂಗವೂ ಲಿಂಗವೆ !! ಕಣ್ಣು ತನ್ನ ಜ್ಞಾನ ತಾನು ತಿಳಿಯದಿದ್ದರೆ ಆಭರಣ ಧರಿಸಿದ ಅಂಗವೂ ಅಜ್ಞಾನವೆ! ಕಳುವು ಮಾಡುವ ಅಂಗವೂ ಅಜ್ಞಾನವೆ. ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಎರಡೂ ಲಿಂಗಕ್ಕರ್ಪಿತವಲ್ಲ.

ಇದ್ದವಸ್ತುವನ್ನು ಇದ್ದಂತೆಯೇ ನೋಡುವುದು ಕಣ್ಣಿನ ಧರ್ಮ ! ಇದ್ದ ವಸ್ತುವಿನಲ್ಲಿ ಇಲ್ಲದ ವಸ್ತುವನ್ನು ಆರೋಪಿಸಿ ನೋಡುವುದು, ಆ ವಸ್ತುವಿಗಾಗಿ ಸಂಕಟ ಪಡುವುದು ಕಣ್ಣಿಗೆ ಆವರಿಸಿದ (ಮನ)ಅಜ್ಞಾನದ ಕ್ರಿಯೆ.

**ಕಿವಿಗಳು ಕೇಳಿದ ಪದಾರ್ಥ ಲಿಂಗಕ್ಕರ್ಪಿತವಲ್ಲ:**

ಕಣ್ಣಿನಂತೆ ಕಿವಿಗೂ ತನ್ನದೇ ಆದ ಧರ್ಮವಿದೆ. ಶಬ್ದವನ್ನು ಕಿವಿಯ ಗುಣಧರ್ಮದಿಂದ ಕೇಳಿದರೆ, ಜ್ಞಾನವಾಗಿ ಶಬ್ದ ನಪುಂಸಕವಾಗುತ್ತದೆ. ಕಿವಿಗೆ ಆವರಿಸಿದ ಮನ (ಅಜ್ಞಾನ)ದಿಂದ ಕೇಳಿದರೆ

ಯುದ್ಧ, ಜಗಳ, ಸಾವು-ನೋವು ಸಂಭವಿಸಿ ಶಬ್ದ ಆತ್ಮಹತ್ಯೆಗೂ ಕಾರಣವಾಗುತ್ತದೆ. ಆಗ ಶಬ್ದ ಕಿವಿಯ ಧರ್ಮವಾದ ಲಿಂಗ(ಜ್ಞಾನ) ಕ್ಕರ್ಪಿತವಾಗಲಿಲ್ಲ.

''ಶಬ್ದ ನೋಡುವಡೆ ನಪುಂಸಕ ಅದರ ಕಾರ್ಯ ನೋಡುವಡೆ ಹರಿ ಹರ ಬ್ರಹ್ಮಾದಿಗಳನ್ನೆಲ್ಲ ಮುರಿದಿಕ್ಕಿತ್ತು. ಅದರಂತೆ ಹೋದಡೆ ತನ್ನನ್ನು ಬಿಡದು. ತಾ ತಿಳಿದು ಹೋದಡೆ ತನ್ನಕಡೆ ಬರದು ನೋಡಾ, ಕಪಿಲಸಿದ್ಧಮಲ್ಲಯ್ಯಾ '' ಎಂದು ಸಿದ್ಧರಾಮ ಶಿವಯೋಗಿಗಳು ಶಬ್ದವನ್ನು ಜ್ಞಾನದಿಂದ ಕೇಳುವ ಸೂತ್ರ ಬರೆದಿದ್ದಾರೆ.

''ಶಬ್ದವೆಂಬೆನೆ ಶ್ರೋತ್ರದೆಂಜಲು'' ಎಂದಿದ್ದಾರೆ ಅಲ್ಲಮಪ್ರಭುಗಳು. ಶಬ್ದವನ್ನು ಜ್ಞಾನದಿಂದ ಸ್ವೀಕರಿಸುವುದು ಕಿವಿಯ ಧರ್ಮ. ಇದು ಮೀಸಲು ಜ್ಞಾನ. ಶಬ್ದವನ್ನು ತಿಳಿಯದೆ ವಿಪರೀತವಾಗಿ ಸ್ವೀಕರಿಸಿ ಜಗಳ ಮಾಡುವುದು ಇದು ಕಿವಿಗೆ ಆವರಿಸಿದ ಎಂಜಲು ಜ್ಞಾನ. ಸಂಗ್ರಹ ಜ್ಞಾನ. ಉಗುಳು ಬಾಯಿಯಲ್ಲಿರುವವರೆಗೂ ಉಗುಳಲ್ಲ. ಉಗುಳಿದ ಮೇಲೆ ಎಂಜಲು. ಉಗುಳಿದ ಎಂಜಲು ಪುನಃ ಬಾಯಿಗೆ ಬರುವುದಿಲ್ಲ. ತಿಳಿದು ನೋಡಿದರೆ ಉಗುಳೆಲ್ಲ ಜಲ ಬಿಂದುಗಳೇ. ಅಂತೆಯೇ ಪುಸ್ತಕಗಳಲ್ಲಿ ಸೇರಿದ ಶಬ್ದಗಳೆಲ್ಲ ತನುವಿನ ಧ್ವನಿ ಮೂಲಕ ಉಗುಳಿದ ಎಂಜಲುಗಳೇ., ಇಲ್ಲಿ ಎಂಜಲು ಶ್ರೇಷ್ಠವಾಯಿತು. ತನು ಕನಿಷ್ಟವಾಯಿತು. ನುಡಿದ ತನು ಒಂದೇ; ಕೇಳಿದ ತನು ಒಂದೇ. ಮೀಸಲಿನಿಂದ ಬಂದ ನುಡಿ ಮೀಸಲ ಕಿವಿ ಕೇಳಿ ಆನಂದ ಪಟ್ಟಿತು. ಶಬ್ದ ಲಿಂಗಕ್ಕರ್ಪಿತವಾಯಿತು.

ಶಬ್ದಗಳಲ್ಲಿ ಶಬ್ದ ಅಪಶಬ್ದ ಎಂದು ವಿಂಗಡಿಸಲು ಬರುವುದಿಲ್ಲ. ಅಂತೆಯೇ ಅಕ್ಷರಗಳಲ್ಲಿಯೂ ವಿಂಗಡಿಸಲು ಬರುವುದಿಲ್ಲ. ಶಬ್ದ ಮತ್ತು ಅಕ್ಷರಗಳು ಹುಟ್ಟಿದ್ದೇ ಅಕ್ಷರೋತ್ತಮನಿಂದ; ಜ್ಞಾನದಿಂದ. ಮಂಥರೆಯ ಎರಡು ಶಬ್ದ ಗಳನ್ನು ಕೈಕೇಯಿ ರಾಮನಿಗೆ ಡೆಲಿವರಿ ಮಾಡಿದಳು. ಶಬ್ದ ಜ್ಞಾನ ತಿಳಿದ ಸಮರ್ಥ ರಾಮ ಆನಂದದಿಂದ ಸ್ವೀಕರಿಸಿ ಕಾಡಿಗೆ ಹೋದ. ನುಡಿದು ಸುಖಪಡಬೇಕಾದ ಕೈಕೇಯಿ ಜೀವನ ಪರ್ಯಂತ ದುಃಖಿಸಿದಳು. ಇಡೀ ನಾಡಿನ ಜನ ಶಪಿಸಿತು. ರಾಮಾಯಣ ನಿರ್ಮಾಣವಾಯಿತು. ನುಡಿದ ಕೈಕೇಯಿಗೂ ಶಪಿಸಿದ ಜನಕ್ಕೂ ಶಬ್ದ ತಿಳಿಯಲಿಲ್ಲ. ತಿಳಿದ ರಾಮ ಶ್ರೀರಾಮನಾದ.

ಶಬ್ಧ ತಿಳಿಯದ್ದಕ್ಕಾಗಿ ಮಹಾಭಾರತ ನಿರ್ಮಾಣವಾಯಿತು. 18 ಅಕ್ಷೋಹಿಣಿ ಸೈನ್ಯ ನಾಶವಾಯಿತು. 'ವಾಕಟ್ಟುಸ್ಮೋ' ಎನ್ನುವ ಒಂದೇ ಶಬ್ದದಿಂದಲೇ ಎರಡನೇ ಮಹಾಯುದ್ಧವಾಯಿತು. ಹಿರೋಶಿಮಾ ನಾಗಾಸಾಕಿಯ ಮೇಲೆ ಬಾಂಬ್ ದಾಳಿಯಾಯಿತು. 1 ಲಕ್ಷ 95 ಸಾವಿರ ಜನ ಸಾವಿಗೀಡಾದರು. ಶಬ್ಧ ಜ್ಞಾನಕ್ಕೆ ಅರ್ಪಣೆಯಾದರೆ ನಪುಂಸಕ ! ಅಜ್ಞಾನದಿಂದ ಸ್ವೀಕರಿಸಿದರೆ ಯುದ್ಧ!

ಉದಾ : ಪಾಲಕರು ಮಕ್ಕಳಿಗೆ ಶಬ್ಧ ಕಲಿಸುತ್ತಾರೆ.

ಶಿಕ್ಷಕ ಬೋರ್ಡಿನ ಮೇಲೆ ಕುದುರೆ ನಾಯಿ ಕತ್ತೆ ಎಂದು ಬರೆದು ವಿದ್ಯಾರ್ಥಿಗಳಿಗೆ ತಪ್ಪಿಲ್ಲದಂತೆ ಬರೆಯಲು ಹೇಳುತ್ತಾನೆ. ತರಗತಿಯ 30 ವಿದ್ಯಾರ್ಥಿಗಳು ಬರೆದರು. ಒಂದು ಹುಡುಗ ಮಾತ್ರ ಒತ್ತಕ್ಷರ ಕೊಡದೆ ಕತೆ ಎಂದು ಬರೆದಿದ್ದ. ಶಿಕ್ಷಕ ಹುಡುಗನ ಕಾಪಿ ನೋಡಿ ಕತ್ತೆಯಂಥವನೆ ಕತ್ತೆ ಬರೆಯಲು ಬರುವುದಿಲ್ಲವೇ ಎಂದು ಕೆಂಡಾಮಂಡಲನಾದ. ಶಿಕ್ಷಕನ ಶಬ್ಧ ಕೇಳಿದ 29 ಹುಡುಗರು ಗಹಗಹಿಸಿ ನಕ್ಕರು. ಹುಡುಗ ಅಪಮಾನಿತನಾದ. ಅಪಮಾನ ಭರಿಸದ ಹುಡುಗ ಶಿಕ್ಷಕನನ್ನು ಕುರಿತು ಕತ್ತೆ ನಾನಲ್ಲ ನೀನೇ ಎಂದ. ನಗುವ ಹುಡುಗರು ಗಪ್‌ಚುಪ್. ಶಿಕ್ಷಕನ ಪಿತ್ತ ನೆತ್ತಿಗೇರಿ ಹುಡುಗನನ್ನು ಚರ್ಮ ಸುಲಿಯುವಂತೆ ಬಡಿದ. ಕತ್ತೆ ಎನ್ನುವ ಶಬ್ದ ಶಿಕ್ಷಕ ನುಡಿದು ಬೋರ್ಡಿನ ಮೇಲೆ ಬರೆದಾಗ ನಪುಂಸಕವಾಗಿತ್ತು. ಹುಡುಗರು ಕಾಪಿಯಲ್ಲಿ ಬರೆದಾಗಲೂ ನಪುಂಸಕವಾಗಿತ್ತು. ಒಬ್ಬ ಹುಡುಗ ತಪ್ಪು ಬರೆದದ್ದು ನೋಡಿದ ಶಿಕ್ಷಕನಿಗೆ ಸಿಟ್ಟು ಬರಿಸಿತು. ಹುಡುಗರಿಗೆ ನಗು ಬರಿಸಿತು. ಕೇಳಿದ ಹುಡುಗ

ಅಪಮಾನ ತಾಳದೆ ಮರುನುಡಿದಾಗ ಜ್ಞಾನ ಬೋಧಿಸಬೇಕಾದ ಗುರು ರಕ್ಕಸನಾದ.

ಕತ್ತೆ ಎನ್ನುವ ಶಬ್ಧ ಒಂದು ಪ್ರಾಣಿಗೆ ಕರೆಯಲು ಇಟ್ಟ ಹೆಸರೇ ಹೊರತು ಆ ಪ್ರಾಣಿ ಕತ್ತೆಯಲ್ಲ. ತಾನೂ ಕತ್ತೆಯಲ್ಲ. ತನಗಿಟ್ಟ ಹೆಸರೂ ತಾನಲ್ಲ ಎನ್ನುವ ಸಾಮಾನ್ಯ ಜ್ಞಾನ ಮರೆಯಾಯಿತು. ಇದು ಕಿವಿಯ ಜ್ಞಾನ. ಕತ್ತೆ ಎನ್ನುವ ಶಬ್ಧಕ್ಕೆ ಜನ್ಮ ಕೊಟ್ಟ ಸ್ಥಲ.

ಜ್ಞಾನ ಹೇಳಬೇಕಾದ ಗುರುವಿನ ಕಿವಿಯಲ್ಲೂ ಪಾಲಕರ ಕಿವಿಯಲ್ಲೂ ಎಂಜಲು ಬೆರೆತಿರುವುದರಿಂದ ಕೇಳಿದ ಶಬ್ಧ ಕಿವಿಯ ಜ್ಞಾನಕ್ಕೆ ಪ್ರಸಾದವಾಗಲಿಲ್ಲ. ತನುವಿಗೆ ಸಂಕಟವನ್ನೊಡ್ಡಿ ಯುದ್ಧಕ್ಕೆ ಆತ್ಮಹತ್ಯೆಗೆ, ಸಾವು ನೋವಿಗೆ ಕಾರಣವಾಯಿತು.

**ನಾಸಿಕ ಮುಟ್ಟದ ಪದಾರ್ಥ ಲಿಂಗಕ್ಕರ್ಪಿತವಲ್ಲ:**

ವಾಸನೆ ನೋಡುವ ಮೂಗಿನಲ್ಲಿ ಮನ (ಅಜ್ಞಾನ) ಬೆರೆತಿರುವುದರಿಂದ ವಾಸನೆಯ ಸತ್ಯ ಹೊಳೆಯುವುದಿಲ್ಲ. ಹೂ ಮಾರುವವನಿಗೆ ಹೂವಿನ ಪರಿಮಳ ಶ್ರೇಷ್ಟ. ಪ್ರತಿ ಹೂವಿನ ಹೆಸರು ಅದು ಬೀರುವ ಕಂಪನ್ನು ಗುರುತಿಸಿ ಗ್ರಾಹಕರಿಗೆ ಪರಿಚಯಿಸಿ ಮಾರಾಟ ಮಾಡುತ್ತಾನೆ. ಗ್ರಾಹಕರಿಗೆ ಹೂವಿನ ಅಂಗಡಿಯ ಮುಂದೆ ಹಾಗೇ ನಿಲ್ಲಬೇಕೆನ್ನಿಸುತ್ತದೆ.

ಮೀನು ಮಾರುವವನಿಗೆ ಅದರ ವಾಸನೆಯೇ ಪರಿಮಳ. ಮಲ್ಲಿಗೆಯ ಪರಿಮಳ ಸೇರುವುದಿಲ್ಲ. ಮಲಗುವಾಗ ಮೀನಿನ ವಾಸನೆಯ ಕಲ್ಪನೆ ಮಾಡಿ ಕೊಂಡರೆ ನಿದ್ರೆ ಬರುತ್ತದೆ. ಮೀನು ತಿನ್ನುವ ಗ್ರಾಹಕ ವಾಸನೆಗೆ ಮರುಳಾಗಿ ಕೊಳ್ಳುತ್ತಾನೆ. ತಿನ್ನದವರು ಮಾರುಕಟ್ಟೆಯ ಹಾದಿ ಹಿಡಿಯುವುದೇ ಇಲ್ಲ. ಪರಿಚಯವಿಲ್ಲದೆ ಹಾದಿತಪ್ಪಿ ಹೋದರೆ ದುರ್ಗಂಧ ವಾಸನೆ; ನೆನಪು ಮಾಡಿ ಕೊಂಡರೆ ವಾಕರಿಕೆ!

ವಾಸನೆಯ ಆಸೆಗೆ ಸುಗಂಧ ದ್ರವ್ಯ ಕೊಳ್ಳುವ ಆಸೆ. ಮೈತುಂಬಾ ಬಳಿದು ಕೊಂಡು ಸುತ್ತುವ ಬಯಕೆ.

ದುಂಬಿಗೆ ಕಮಲದ ಸುಗಂಧ ಹೀರುವ ಆಸೆ. ವಾಸನೆಯ ಜಾಡು ಹಿಡಿದು ಕಮಲದ ಹೂವಿನೊಳಗೆ ಸೇರುತ್ತದೆ. ಕತ್ತಲಾದರೆ ಅರಳಿದ ಕಮಲ ಮುದುಡು ತ್ತದೆ. ಅದರ ಪರಿವೆಯೇ ಇಲ್ಲದ ದುಂಬಿ ಸುಗಂಧ ಹೀರುವ ಹಿಂಗದ ಬಯಕೆಯಿಂದ ಮುಚ್ಚಿದ ಪಕಳೆಗಳಲ್ಲಿ ಪ್ರಾಣ ಕಳೆದು ಕೊಳ್ಳತ್ತದೆ.ಇದು ಕೀಟ. ಆಹಾರ ನಿದ್ರೆ ಭಯ ಮೈಥುನ ಬಯಸಿ ಪ್ರಾಣ ಕಳೆದುಕೊಳ್ಳುತ್ತದೆ. ಆದರೆ ಮನುಷ್ಯನಿಗೆ ಜ್ಞಾನವಿದೆ; ಬಳಕೆ ಮಾಡದ ಅಜ್ಞಾನವೂ (ಮನ) ಇದೆ. ಮನಕ್ಕೆ ಆಹಾರ,ಮೈಥುನಗಳನ್ನು ಕುಟಿಲತೆಯಿಂದ ಪಡೆಯುವ ಬಯಕೆಯಂತೆ ಭಯವೂ ಇದೆ. ವಾಸನೆಯ ಆಸೆಯಿಂದ ಹಸಿವು ಮೈಥುನದ ಬಯಕೆ ಹುಟ್ಟುತ್ತದೆ. ಅದನ್ನು ಪಡೆಯಬೇಕೆಂಬ ಅಜ್ಞಾನದ ಛಲದಿಂದ ದುಂಬಿಯಂತೆ ಪ್ರಾಣ ಕಳೆದುಕೊಳ್ಳುತ್ತಾನೆ.

ಮಲ್ಲಿಗೆ ತೋಟದ ಬದಿಯ ಮರದ ಕೆಳಗಡೆ ಒಬ್ಬ ಜ್ಞಾನಿ ಕುಳಿತಿದ್ದ. ಮಲ್ಲಿಗೆ ಬೀರುವ ಕಂಪು ಆತನನ್ನು ಆಕರ್ಷಿಸಿತ್ತು . ಮತ್ತೊಬ್ಬ ತೋಟದಲ್ಲಿ ನುಗ್ಗಿ ಬಿರಬಿರನೆ ಹೂಗಳನ್ನು ಕೀಳಹತ್ತಿದ. ಎಲ್ಲಿಯೋ ಇದ್ದ ತೋಟದ ಮಾಲಿ ಬಂದು ಅವನನ್ನು ಹಿಡಿದು ಮನಬಂದಂತೆ ಹೊಡೆದ. ನಂತರ ಮರದಡಿಯಲ್ಲಿ ಕುಳಿತ ಜ್ಞಾನಿಯ ಪಾದಕ್ಕೆ ನಾಲ್ಕು ಹೂಗಳನ್ನಿತ್ತು ನಮಸ್ಕರಿಸಿದ. ಅವನನ್ನು ಏಕೆ ಹೊಡೆದೆ ಎಂದು ಜ್ಞಾನಿ ಮಾಲಿಯನ್ನು ಪ್ರಶ್ನಿಸಿದ. ಅವನು ಹೂ ಕೀಳಲು ಬಂದಿದ್ದ ಅದ ಕ್ಕಾಗಿ ಹೊಡೆದೆ ಎಂದ. ನಾನು ಕೂಡಾ ಮಲ್ಲಿಗೆಯ ಕಂಪಿಗಾಗಿ ಬಂದವನು. ನಿನ್ನ ತೋಟದ ಮಲ್ಲಿಗೆಯ ಕಂಪು ಕದ್ದವನು. ಅವನಂತೆಯೇ ನಾನೂ ಕೂಡಾ ಕಳ್ಳನೇ. ಅವನು ಕಂಪಿನ ಆಸೆಗಾಗಿ ಮಲ್ಲಿಗೆ ಕದ್ದ; ನಾನು ಮಲ್ಲಿಗೆ ಕಂಪು ಕದ್ದೆ ಎಂದ ಜ್ಞಾನಿ. ಒಬ್ಬನಿಗೆ ಶಿಕ್ಷೆ ಮತ್ತೊಬ್ಬನಿಗೆ ಪುರಸ್ಕಾರ. ಇದು ಆಸೆಯಿದ್ದೂ ತನುವಿನ ಜ್ಞಾನ ಬಳಕೆಯಾದ ಲಕ್ಷಣ.

ಗರಿಗರಿಯಾಗಿ ಕರಿದ ಪದಾರ್ಥದ ವಾಸನೆ ಸೇವಿಸಿದ ಮೂಗು ಉಣ್ಣುವಂತೆ ಮಾಡುತ್ತದೆ. ಆ

ವಾಸನೆ ಮೂಗಿಗೆ ಅಮೃತ. ಅದರ ಪ್ರತಿ ರೂಪವಾದ ಮಲದ ವಾಸನೆಗೆ ಅಸಹ್ಯ ಪಟ್ಟು ಕೊಳ್ಳುತ್ತದೆ. ಅದು ಮೂಗಿಗೆ ದುರ್ಗಂಧ. ಮಲ ತಿನ್ನಲು ಬಂದ ಹಂದಿಗೆ ಸುಗಂಧ. ಅದಕ್ಕೆ ಮಲ ಅಮೃತವಾಗಿ ಗೋಚರಿಸುತ್ತದೆ. ತಾನು ಮೂಗರಳಿಸಿ ತಿಂದಂತೆ ಅದೂ ತಿನ್ನುತ್ತದೆ.

ಜ್ಞಾನದಿಂದ ವಾಸಿಸಿದರೆ ಪದಾರ್ಥದಿಂದ ತನುವಿಗೆ ಸಂಕಟವಾಗು ವುದಿಲ್ಲ. ಪದಾರ್ಥ ಬೀರುವ ವಾಸನೆ ಜ್ಞಾನ(ಲಿಂಗ)ಕ್ಕೆ ಅರ್ಪಿತವಾಗುತ್ತದೆ. ವಾಸನೆ ಜ್ಞಾನದಲ್ಲಿ ಹಿಂಗಿ ಜ್ಞಾನವೇ ತಾನಾಗುತ್ತದೆ. ತನುವಿನ ಜ್ಞಾನ ಬಳಕೆಯಾಗಲೆಂದು ಮನುಷ್ಯನ ವಾಸನಾ ರೋಗ ಕಳೆಯಲೆಂದು ಮಹಾವಿಷ್ಣು ವರಾಹ (ಹಂದಿ) ಅವತಾರವೆಂಬ ಸೂತ್ರ ಕರುಣಿಸಿದ. ಇದು ಅಜ್ಞಾನ (ಮನ) ಕಳೆದುಕೊಂಡ ಜ್ಞಾನಿಯ ಕೆಲಸ. ಜನ ಮನದಿಂದ ವರಾಹ (ಹಂದಿ)ನನ್ನು ಪೂಜಿಸಿದರೆ ಹೊರತು; ತನುವಿನಲ್ಲಿರುವ ಜ್ಞಾನವೆಂಬ ಮಹಾವಿಷ್ಣುವಿನ ಪರಿಚಯವಾಗಲೇ ಇಲ್ಲ.

**ಜಿಹ್ವೆಸೋಂಕಿದ ಪದಾರ್ಥ ಲಿಂಗಕ್ಕರ್ಪಿತವಲ್ಲ :**

ನಾಲಿಗೆ ಮುಟ್ಟಿದ ಪದಾರ್ಥ ಜ್ಞಾನಕ್ಕೆ ಅರ್ಪಣೆಯಾಗಲಿಲ್ಲ. ಚೆನ್ನ ಬಸವಣ್ಣನವರು ಮಾನವ ಕುಲಕ್ಕೆ ಕರುಣಿಸಿದ ಸೂತ್ರವಿದು. ಪದಾರ್ಥ ರುಚಿ ಯಿಲ್ಲವೆಂದು ಗಂಡ ಹೆಂಡತಿಯನ್ನು, ಅತ್ತೆ ಸೊಸೆಯನ್ನು, ಮಗ ತಾಯಿಯನ್ನು, ಮಾಲಕ ಅಡಿಗೆಯವನನ್ನು ಹಿಂಸಿಸುವುದು ಎಲ್ಲೆಡೆಯೂ ಇದೆ. ರುಚಿಗಾಗಿ ಸಾವು ನೋವುಗಳು ಸಂಭವಿಸುವವು.

ರುಚಿಕರ ಅಡಿಗೆ ಮಾಡಲು ಬರುವುದಿಲ್ಲ ಎಂಬ ಕಾರಣಕ್ಕಾಗಿ ಪ್ರಪಂಚದಲ್ಲಿ ಶೇ.10ರಷ್ಟು ಮಹಿಳೆಯರು ಕೊಲೆಗೀಡಾಗುತ್ತಾರೆ. ನಿಂದೆ ತಾಳದೆ ಆತ್ಮಹತ್ಯೆ ಗೊಳಗಾಗುತ್ತಾರೆ. ಕೆಲವರು ಸಂಬಂಧ ಕಳಚಿಕೊಳ್ಳುತ್ತಾರೆ. ರುಚಿ ನಾಲಿಗೆಯಲ್ಲಿದೆಯೋ ಪದಾರ್ಥದಲ್ಲಿದೆಯೋ ? ನಾಲಿಗೆಯಲ್ಲಿದ್ದರೆ ಸದಾ ರುಚಿ ಇರಬೇಕಾಗಿತ್ತು. ಪದಾರ್ಥದಲ್ಲಿದ್ದರೂ ಸದಾ ರುಚಿಕರವಾಗಿರ ಬೇಕಿತ್ತು. ಒಂದು ತುತ್ತಿನ ಪದಾರ್ಥದ ರುಚಿ ಮತ್ತೊಂದು ತುತ್ತಿಗಿರುವುದಿಲ್ಲ. ರುಚಿ ಕಡಿಮೆಯಾಗುತ್ತಾ ಹೋಗಿ ಕೊನೆಗೆ ವಾಕರಿಕೆ ಬರುತ್ತದೆ. ಬಯಸಿ ತಿನ್ನುವ ಪದಾರ್ಥದಲ್ಲಿಯೂ ಹೀಗಾಗುವುದು ಪ್ರತಿದಿನ ಗೋಚರಕ್ಕೆ ಬರುತ್ತದೆ. ಆದರೂ ಯಾಕೆ ಹೀಗಾಗುತ್ತದೆ ಎಂದು ಕಂಡುಕೊಳ್ಳುವುದರಲ್ಲಿ ಅಸಮರ್ಥರಾಗಿದ್ದೇವೆ.

ಒಂದು ತುತ್ತಿನ ರುಚಿ ಮತ್ತೊಂದು ತುತ್ತಿನಲ್ಲಿ ಇಲ್ಲದಿರುವುದಕ್ಕೆ ಅರ್ಥ ಶಾಸ್ತ್ರಜ್ಞರು ತುಷ್ಠಿಗುಣ ಎನ್ನುತ್ತಾರೆ. ಹೀಗೆಂದ ಮಾತ್ರಕ್ಕೆ ರುಚಿಗಾಗಿ ಜಗಳ ಕೊಲೆ ಡೈವರ್ಸ್ ಆತ್ಮಹತ್ಯೆ ನಿಂತಿಲ್ಲ. ಅಡಕೆಗೆ ಹೋದ ಮಾನ ಆನೆ ಕೊಟ್ಟರೂ ಬರುವುದಿಲ್ಲ. ರುಚಿಗಾಗಿ ಮಾನ ಕಳೆದುಕೊಳ್ಳಲು ಹೇಸುವುದಿಲ್ಲ.

ಮದ್ಯಪಾನದ ರುಚಿಗಾಗಿ ತನ್ನನ್ನು ತಾನೇ ಕಳೆದುಕೊಳ್ಳುತ್ತಾನೆ. ತನಗೆ ತಿಳಿ ಯುವುದಿಲ್ಲವೆಂದಲ್ಲ. ತಿಳಿದರೂ ಕುಡಿಯುತ್ತಾನೆ, ಚೀರಾಡುತ್ತಾನೆ, ಬಡಿಯು ತ್ತಾನೆ, ಜಗಳ ಕಾಯುತ್ತಾನೆ. ಕೊಲೆ ಮಾಡುತ್ತಾನೆ. ಎಚ್ಚರವಾದಾಗ ಸಂಕಟಪಟ್ಟು ಮತ್ತೆ ಕುಡಿತಕ್ಕೆ ಶರಣಾಗುತ್ತಾನೆ. ಅಡಿಗೆ ರುಚಿ ಕಾಣದಿದ್ದರೆ ಕುಡಿಯದಿದ್ದರೂ ಕೂಡಾ ಕುಡುಕನಂತೆ ವ್ಯಗ್ರನಾಗಿ ಜಗಳ ಕಾಯುತ್ತಾನೆ. ಸ್ವರ್ಗವೇ ಆಗಬೇಕಾದ ಕುಟುಂಬ ವ್ಯವಸ್ಥೆ ನರಕದ ಮನೆಯಾಗುತ್ತದೆ. ಇದು ಎಲ್ಲ ಮನೆಗಳಲ್ಲೂ ಸಹಜ. ಒಂದು ಮನೆಯ ತನುಗಳು ಸೂಕ್ಷ್ಮ ಸೌಮ್ಯ ವಾದರೆ ಮತ್ತೊಂದು ಬಹಿರಂಗ.

ಚೆನ್ನಬಸವಣ್ಣನವರು ನಾಲಿಗೆ ಮುಟ್ಟಿದ ಪದಾರ್ಥ ಜ್ಞಾನಕ್ಕರ್ಪಿತವಲ್ಲ ಎಂದಿದ್ದಾರೆ. ಪದಾರ್ಥ ಸರಿ ಇಲ್ಲವೋ ಅಥವಾ ತಿನ್ನುವ ನಾಲಿಗೆ ಸರಿ ಇಲ್ಲವೋ ? ಪದಾರ್ಥದಲ್ಲಿಯ ರುಚಿಯನ್ನು ಹೆಚ್ಚು ಕಡಿಮೆ ಮಾಡಲು ಬರುವುದಿಲ್ಲ. ಅದು ತನ್ನ ರುಚಿಯನ್ನು ಬಹಿರಂಗವಾಗಿ ಸರ್ವರಿಗೂ ದೃಢಪಡಿಸುತ್ತದೆ.

ಉದಾ: ಮೆಣಸಿನಕಾಯಿ, ಬೆಳ್ಳುಳ್ಳಿ, ಈರುಳ್ಳಿ, ಕಬ್ಬು, ಗೆಣಸು, ಗಜ್ಜರಿ, ಅಕ್ಕಿ, ಬೇಳೆ, ಜೋಳಗಳ ರುಚಿ ಕಣ್ಣುನೋಡಿ ನಾಲಿಗೆ ನಿರ್ಧಾರ ಮಾಡಿ ಹೆಸರಿನೊಂದಿಗೆ ದಾಖಲಿಸಿದೆ.

ಪದಾರ್ಥಗಳ ರುಚಿಯನ್ನು ನಾಲಿಗೆ ಬದಲಿಸುವಂತಿಲ್ಲ. ಅಡುಗೆ ಮಾಡುವವರೂ ಬದಲಿಸುವಂತಿಲ್ಲ. ಆದರೂ ನಾಲಿಗೆಗೆ ಮೊದಲೆರಡು ತುತ್ತು ರುಚಿ ನಂತರದ ತುತ್ತು ಗಳು ವಾಕರಿಕೆ. ನಾಲಿಗೆಯಲ್ಲಿ ಅಜ್ಞಾನ ಬೆರೆತಿರುವುದರಿಂದ ಪದಾರ್ಥ ಜ್ಞಾನಕ್ಕರ್ಪಣೆಯಾಗಲಿಲ್ಲ. ಜ್ಞಾನ ಒಂದು ಜಡವಸ್ತುವಲ್ಲ. ಅದನ್ನು ಪುಸ್ತಕದಿಂದ ಬಾಹ್ಯ ದಿಂದ ಸಂಗ್ರಹಿಸುವಂತಿಲ್ಲ. ತನುವಿನ ತುಂಬಾ ತನ್ಮಯವಾಗಿ ತನುವೇ ತಾನಾಗಿದೆ. ಆ ಜ್ಞಾನ ತಾನಾಗಿ ನೋಡಬೇಕಷ್ಟೆ. ಅದಕ್ಕಾಗಿಯೇ ಬಸವಣ್ಣನವರು 'ಉದಕ ದೊಳಗೆ ಬೈಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು' ಎಂದಿದ್ದಾರೆ.

ಉದಕದ ಬಿಂದು ಗರ್ಭ ಪ್ರವೇಶಿಸಿ ಪಾಕವಾಗಿ ಪಿಂಡವಾಗಿ ತನುವಾಗಿ ತನುವಿನ ಕಣಕಣವೂ ಉದಕದಿಂದ ಗಟ್ಟಿಗೊಂಡಿದೆ. ಈ ತನುವಿನಲ್ಲಿ ಬಯಕೆಯೂ ಕಿಚ್ಚಾಗಿ ಬಚ್ಚಿಟ್ಟುಕೊಂಡು ಬೇಕು ಬೇಕು ಎಂದು ಕಾಡುತ್ತದೆ. ಬಯಕೆ ಈಡೇರಿದರೆ ಸಮಾಧಾನಿ, ಈಡೇರದಿದ್ದರೆ ಸ್ಫೋಟ ! ನೀರು ಏನೂ ಬಯಸುವುದಿಲ್ಲ, ತನುವಿನಲ್ಲಿದ್ದ ನೀರು ಬಯಸದೆ ಬಿಡುವುದಿಲ್ಲ.

ಪದಾರ್ಥದಲ್ಲಿಯೂ ನೀರಿದೆ. ನೀರುಗಟ್ಟಿಗೊಂಡು ಪದಾರ್ಥವಾಯಿತು. ಭೂಮಿಗೆ ಬೀಜ ಊರಿ ನೀರು ಹರಿಸಿದರೆ ಮೆಣಸಿನ ಕಾಯಿ ಖಾರವಾಯಿತು. ಕಬ್ಬು ಸಿಹಿಯಾಯಿತು. ಬೆಳ್ಳುಳ್ಳಿ ಘಾಟಾದರೆ, ಈರುಳ್ಳಿ ಕಾಕಾಯಿತು. ಗಜ್ಜರಿ ಗೆಣಸು ಹಣ್ಣು ಕಾಯಿಗಳೆಲ್ಲ ನೀರಿನಿಂದಲೇ. ಇದನ್ನು ಸೇವಿಸುವ ತನುವೂ ಕೂಡಾ ನೀರಿನಿಂದಲೇ ನಿರ್ಮಾಣ !

'ಹೊಳೆಯಲ್ಲಿ ಹುಣಸೇಹಣ್ಣು ತೊಳೆದಂತೆ' ಎಂಬ ನಾಣ್ಣುಡಿಯಿದೆ. ಹೆಚ್ಚು ನೀರಲ್ಲಿ ಹುಳಿ ಬೆರೆತರೆ ನೀರು ಹುಳಿಯಾಗುವುದಿಲ್ಲ. ನೀರಿನಿಂದಲೇ ಜನ್ಮಪಡೆದ ಹುಳಿ ನೀರಲ್ಲಿ ಬೆರೆತು ನೀರಾಗಿ ರುಚಿ ಕಳೆದುಕೊಳ್ಳುತ್ತದೆ. ಅಂತೆಯೇ ನೀರು ಗಟ್ಟಿಗೊಂಡ ಪದಾರ್ಥದಲ್ಲಿ ಬೆರೆತ ರುಚಿ ಇಡೀ ತನುವಿನಲ್ಲಿ ತುಂಬಿದ ನೀರಲ್ಲಿ ಕರಗಿ ನೀರೇ ಆಗಿ ರುಚಿ ಕಳೆದುಕೊಳ್ಳುತ್ತದೆ. ಅರಿವಿನಿಂದ ರುಚಿಯ ಬಯಕೆ ಹಿಂಗಿ ರುಚಿಗಾಗಿ ನಿರ್ಮಾಣವಾದ ಸಾವು ನೋವುಗಳೂ ನಿಲ್ಲುತ್ತವೆ. ಇದಕ್ಕೆ ಮೂರುನಾಲ್ಕು ತುತ್ತುಗಳ ಸೇವನೆಯ ಸಮಯಬೇಕು. ಸಮಾಧಾನಬೇಕು, ಇದನ್ನು ತಿಳಿಯುವ ಅರಿವು ಬೇಕು.

ರುಚಿಗಾಗಿ ಜಗಳ ಕಾಯುವವರನ್ನು ಕುರಿತು ಶರಣರು 'ಪ್ರಸಾದದಲ್ಲಿ ರುಚಿ ಯನರಸುವರೆ' ಎಂದು ಪ್ರಶ್ನಿಸಿ 'ರುಚಿಯೆಂಬೆನೆ ಜಿಹ್ವೆಯೆಂಜಲು ' ಎಂದು ಉತ್ತರಿಸಿ ನಾಲಿಗೆಯ ಅಜ್ಞಾನ ಕಳೆದಿದ್ದಾರೆ. ಹೀಗೆ ಶರಣ ಸಂತರ ವಂಶಜರೆನ್ನಿಸಿ ಕೊಳ್ಳುವ ಮಠ-ಮಾನ್ಯಗಳಾದರೂ ಸಂಪ್ರದಾಯಗಳನ್ನು ಬದಿಗೊತ್ತಿ ಅರಿವಿನ ಶಾಲೆಗಳನ್ನು ನಿರ್ಮಿಸುವ ಅವಶ್ಯಕತೆಯಿದೆ. ತನುವನ್ನು ಅನುಭವ ಮಂಟ ಪವನ್ನಾಗಿಸುವ ಅವಶ್ಯಕತೆಯೂ ಇದೆ.

**ಕೈಗಳು ಮುಟ್ಟಿದ ಪದಾರ್ಥ ಲಿಂಗಕ್ಕರ್ಪಿತವಲ್ಲ, ರೂಪು ರಸ ಗಂಧ ರುಚಿ ಸ್ಪರ್ಶವನು ಕೂಡಲ ಚೆನ್ನಸಂಗಯ್ಯಾ ನೀನರಿಯಲು ಪ್ರಸಾದವೆನೆಗೆ :**

ಕೈಗಳು (ಚರ್ಮ) ಮುಟ್ಟಿದ ಪದಾರ್ಥ ಲಿಂಗಕ್ಕರ್ಪಿತವಲ್ಲ. ಕಣ್ಣಿನ ರೂಪ, ಶಬ್ದದ ರಸ, ಗಂಧದ ವಾಸನೆ, ನಾಲಗೆಯ ರುಚಿ, ಚರ್ಮದ ಸ್ಪರ್ಶವನು ಕೂಡಲ ಚೆನ್ನಸಂಗಯ್ಯ ನೀನ ರಿಯಲು ಪ್ರಸಾದವೆನಗೆ.

**ಚರ್ಮ :** ಚೆನ್ನಬಸವಣ್ಣನವರು ತಮ್ಮ ಒಂದು ವಚನದಲ್ಲಿ ಚರ್ಮಕ್ಕೆ ತ್ವಙ್ಮಯವಾಗಿ ಹುದು ಓಂಕಾರ ಎಂದಿದ್ದಾರೆ. ರಕ್ತ ಮೂಳೆ ಮಾಂಸ ಮಜ್ಜಾ ಮೇದಸ್ಸು ಸೋರದಂತೆ ಸುಂದರ ವಾಗಿ ಪ್ಯಾಕ್ ಮಾಡಿದ ಚರ್ಮ ಓಂಕಾರವೇ ಸರಿ. ತನುವಿನ ಈ ಕವರ್‌ನಲ್ಲಿ ಜ್ಞಾನವೇ ತುಂಬಿದೆ. ಅಜ್ಞಾನವೂ ಆವರಿಸಿಕೊಂಡಿದೆ. ಅಜ್ಞಾನದಿಂದ ಸ್ಪರ್ಶಿಸಿದರೆ ಒಳಗಿದ್ದ ವಸ್ತುಗಳೆಲ್ಲ ಕುದಿ ಯುತ್ತವೆ. ಜ್ಞಾನದಿಂದ ಸ್ಪರ್ಶಿಸಿದರೆ ಆನಂದ.

ಎಡಗೈ ಬಲಗೈಗೆ ತಾಕಿದರೆ ಒಳಗಿದ್ದ ವಸ್ತುಗಳು ಕುದಿಯುವುದಿಲ್ಲ. ರಸಾಯನಿಕ ಕ್ರಿಯೆ ಉಂಟಾಗುವುದಿಲ್ಲ. ಕೈಗೆ ಮತ್ತೊಂದು ಕೈ ತಾಗಿದರೆ ಕಾಮದಿಂದ ವಿಕೃತವಾಗುತ್ತದೆ. ಬಡಿ ದರೆ ರೋಷ ಉಂಟಾಗುತ್ತದೆ. ವ್ರಣಭರಿತ ಕೈ ತಾಗಿದರೆ ವಾಕರಿಕೆ ಅಸಹ್ಯ ಉಂಟಾಗುತ್ತದೆ.

ಎಲ್ಲ ತನುಗಳ ಚರ್ಮ ಒಂದೇ, ಒಳಗಿರುವ ವಸ್ತುಗಳು ಒಂದೇ ಎನ್ನುವ ಜ್ಞಾನ ಚರ್ಮದ ಮರೆಯಲ್ಲಡಗಿದೆ. ಅಜ್ಞಾನಕ್ಕೆ ಈ ಸುಳುಹು ಹೊಳೆಯುವುದೇ ಇಲ್ಲ. ತನ್ನ ಕೆಲಸ ತನಗೆ, ಅವನ ಕೆಲಸ ಅವನಿಗೆ.

ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮದ ಮುಂಖಾತರ ಸ್ವೀಕರಿಸುವ ಪ್ರಸಾದ ತಾನು ತಿಳಿದರೆ ಅಜ್ಞಾನ. ಅವನು ತಿಳಿದರೆ ಪ್ರಸಾದ. ತನುವಿನಲ್ಲಿ ಅವನು ಎಂಬ ಜ್ಞಾನಿ ಇದ್ದಾನೆ. ನಾನು ಎಂಬ ಅಜ್ಞಾನ ಆವರಿಸಿದೆ. ತನುವು ಜ್ಞಾನಿಯ ಸೊತ್ತು. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಇವು ಅವನ ಜ್ಞಾನೇಂದ್ರಿಯಗಳು. ಅವನು ನೋಡುವ ನೋಟ ಸುಂದರ, ಅನಂತ, ಜಗದಗಲ, ಮುಗಿಲಗಲ. ಕಣ್ಣಿನಲ್ಲಿ ತುಂಬಿದ ಅವನ ಬೆಳಕು ವಸ್ತುವಿನ ಮೇಲೆ ಬಿದ್ದು ಅದರ ಸತ್ಯ ಗೋಚರಿಸುತ್ತದೆ. ಬೆಳಕಿಗೆ ವಸ್ತುವಿನ ಅವಶ್ಯಕತೆಯಿಲ್ಲ. ಯಾವ ಬೆಳಕು ಬೆಳಗಿದ ವಸ್ತು ವನ್ನು ಪಡೆಯುವುದಿಲ್ಲ. ಬೆಳಗುವುದೊಂದೇ ಕಣ್ಣಿನ ಕೆಲಸ.

ಅಜ್ಞಾನಿಯಾದ ನನಗೆ ಅವನು ಬೆಳಗಿದ ರೂಪ ಬೇಕು, ವಸ್ತು ಬೇಕು.

ಅವನು ಬೆಳಕಾದರೆ ನಾನು ಕತ್ತಲು. ಅವನು ಬ್ರಹ್ಮನಾದರೆ ನಾನು ಭ್ರಮೆ. ಜಪ ತಪ ಮಾಡಿದರೆ ಕತ್ತಲು ಕಳೆಯುವುದಿಲ್ಲ, ಆವರಿಸಿಕೊಂಡ ಭ್ರಮೆಯೂ ಅಳಿಯುವುದಿಲ್ಲ. ಕತ್ತಲು ಕಳೆಯಲು ಬೆಳಕು ಹಾಕಬೇಕು. ಆ ಬೆಳಕಿನಿಂದ ನೋಡಿದರೆ ನೋಡುವ ನೋಟವೆಲ್ಲ ಸುಂದರ ; ಕೇಳುವ ಶಬ್ದದಲ್ಲಿ ರಸದೌತಣ ; ವಾಸಿಸುವ ಗಂಧದಲ್ಲಿ ಆನಂದ ; ರುಚಿಸುವ ಪ್ರಸಾದದಲ್ಲಿ ಆಹ್ಲಾದ ; ಸ್ಪರ್ಶಿಸುವ ಚರ್ಮದಲ್ಲಿ ಸಂತೋಷ ! ನೀನು ಬೆಳಗುವ ಆ ಜ್ಞಾನದ ಬೆಳಕೇ ನನಗೆ ಪ್ರಸಾದ ಎಂದಿದ್ದಾರೆ ಚೆನ್ನಬವಸಣ್ಣನವರು.

□

# ಗುರು-ಶಿಷ್ಯರ ಸಂಗಮ

**ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು,**
**ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ,**
**ಏನೆಂಬೆನಯ್ಯಾ ಎರಡಿಲ್ಲದ ಘನವ !**
**ಏನೆಂಬೆನಯ್ಯಾ ಎರಡೊಂದಾದ ಘನವ !**
**ಕೂಡಲ ಚೆನ್ನಸಂಗಯ್ಯನಲ್ಲಿ ಗುರುಶಿಷ್ಯ ಸಂಬಂಧವಪೂರ್ವ**
**-ಚೆನ್ನಬಸವಣ್ಣ**

**ಶಿಷ್ಯನೆಂಬ ಪ್ರತಿಭಾವವಿಲ್ಲದ ಗುರು, ಗುರುವೆಂಬ ಪ್ರತಿಭಾವವಿಲ್ಲದ ಶಿಷ್ಯ :**

ದೇಹದ ಅಜ್ಞಾನ ಅಳಿದು ಅರಿವನ್ನು ತಿಳಿಯಲು ಗುರುವಿನ ಉಪದೇಶ ಪಡೆಯುವ ಸಂಪ್ರದಾಯ ರೂಢಿಯಲ್ಲಿದೆ. ಇದು ಪೂರ್ವಕಾಲದಿಂದಲೂ ಪ್ರಪಂಚದಾದ್ಯಂತ ಚಾಲನೆಯಲ್ಲಿದೆ. ಜ್ಞಾನ ಪ್ರಧಾನವಾದ ಭಾರತದೇಶದಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

ಶಿಷ್ಯ ಗುರುವಿನ ಉಪದೇಶ ಪಡೆದು ಇಡೀ ಜೀವನ ಪರ್ಯಂತ ಗುರುವಿಗೆ ಶಿಷ್ಯನಾಗಿ ಉಳಿಯುತ್ತಾನೆ. ಗುರುವಾದರೂ ಶಿಷ್ಯನಿಗೆ ಉಪದೇಶಿಸಿ ಜೀವನ ಪರ್ಯಂತ ಗುರುವಾಗಿ ಉಳಿಯುತ್ತಾನೆ. ಗುರುವಿನ ಎಂಜಲನ್ನೇ ಪ್ರಸಾದವೆಂದು ಭಾವಿಸಿ ಕಣ್ಣಿಗೆ ಒತ್ತಿಕೊಂಡು ಸೇವಿಸುವುದು. ಮನೆ ಮಂದಿಯೆಲ್ಲ ಆತನ ಆದೇಶ ಪಾಲಿಸುವುದು, ಅಕ್ಕ-ಪಕ್ಕ,ನೆರೆ- ಹೊರೆಯವರನ್ನೂ ಶಿಷ್ಯರನ್ನಾಗಿಸಲು ಪ್ರೇರೇಪಿಸುವುದು, ಗುರು ಪರಂಪರೆಯನ್ನು ಹೆಚ್ಚಿಸುವುದು. ಇದು ಶಿಷ್ಯರಾದವರ ಕೆಲಸವಾಗಿ ಪರಿಣಮಿಸಿದೆ.

ಉಪದೇಶ ನೀಡುವುದು ತಿಳಿದ ಮಂತ್ರ ಭೋದಿಸುವುದು, ಶಿಷ್ಯ ಪರಂಪರೆಯನ್ನು ಹೆಚ್ಚಿಸುವುದು ಗುರವಿನ ಕೆಲಸ.

ಗುರುವಿಗೆ, ತಾನು ಶ್ರೀಮಂತ ಮನೆತನದ ಶಿಷ್ಯರಿಗೆ ಗುರುವೆಂಬ ಅಹಂಕಾರ. ಶಿಷ್ಯನಿಗೆ , ತಾನು ಹೈಟೆಕ್ ಗುರುವಿನ ಶಿಷ್ಯನೆಂಬ ಅಹಂಕಾರ.

ಉಪದೇಶ ಮಾಡಿದ ಗುರು, ಮನೆತನದ ಗುರು ಎಂದು ಎರಡು ವರ್ಗ ಗಳಿರುತ್ತವೆ. ಚೆನ್ನಬಸವಣ್ಣನವರು ಹೇಳಿದ್ದು ಶಿಷ್ಯನೆಂಬ ಪ್ರತಿಭಾವ ಗುರುವಿಗಿರಬಾರದು, ಗುರುವೆಂಬ ಪ್ರತಿಭಾವ ಶಿಷ್ಯನಿಗಿರಬಾರದು.

ದೇಹದ ತೊಂದರೆಗಳನ್ನು ಕಳೆದುಕೊಂಡು ಅರಿವೆಂದರೇನೆಂದು ಗುರು ತಿಳಿದಿರುತ್ತಾನೆ. ಶಿಷ್ಯ ತನುವಿನ ಅಜ್ಞಾನ ಕಳೆದುಕೊಳ್ಳುವುದಕ್ಕಾಗಿ ಕಾತುರನಾಗಿರುತ್ತಾನೆ. ಇದನ್ನು ಬಳಕೆ ಮಾಡಿಕೊಂಡು ಅರಿವು ಕೊಡುವ ನೆಪದಲ್ಲಿ ಗುರುವಿನ ವ್ಯವಹಾರ ಪ್ರಾರಂಭವಾಗುತ್ತದೆ. ಉಪದೇಶ ಪಡೆದು ಅರಿವು ಸ್ವೀಕರಿಸುವ ನೆಪದಲ್ಲಿ ಶಿಷ್ಯನ ವ್ಯವಹಾರದ ಅಜ್ಞಾನ ಸಂಪ್ರದಾಯದಂತೆ ಮುಂದು ವರೆಯುತ್ತದೆ.

ಗುರುವಿನ ತನುವಿನಲ್ಲಿರುವ ಅರಿವು ಒಂದೇ ; ! ಶಿಷ್ಯನ ತನುವಿನಲ್ಲಿರುವ ಅರಿವು ಒಂದೇ. ಅರಿವೇ ಗುರು ! ಶಿಷ್ಯನ ತನುವಿನ ಅರಿವಿಗೆ ಗುರುವಾಗಲು ಬರುವುದಿಲ್ಲ ; ಭೋದೆಯ ಅವಶ್ಯಕತೆಯೂ ಇಲ್ಲ. ಅರಿವಿಗೆ ಭೋದೆ ಬೇಕಾಗಿಲ್ಲ.ಅಜ್ಞಾನಕ್ಕೆ ಭೋದೆ ನಿಲ್ಲುವುದಿಲ್ಲ. ಇದನ್ನು

ತಿಳಿದರೆ ಶಿಷ್ಯನೆಂಬ ಪ್ರತಿಭಾವ ಗುರುವಿಗೆ ಇರುವುದಿಲ್ಲ. ಗುರುವೆಂಬ ಪ್ರತಿಭಾವ ಶಿಷ್ಯನಿಗೂ ಇರುವುದಿಲ್ಲ. ಇಬ್ಬರೂ ಅರಿವಿನ ಕೆಲಸದಲ್ಲಿ ನಿರತರಾಗುತ್ತಾರೆ.

**ಏನೆಂಬೆನಯ್ಯಾ ಎರಡಿಲ್ಲದ ಘನವ ! ಏನೆಂಬೆನಯ್ಯಾ ಎರಡೊಂದಾದ ಘನವ:**

ಗುರು ಎನ್ನುವುದು ತನುವೇ, ಶಿಷ್ಯ ಎನ್ನುವುದು ತನುವೇ. ಇವೆರಡು ತನು ಗಳಲ್ಲಿರುವ ವಸ್ತುಗಳೂ ಒಂದೇ. ಇವರೆಡು ತನುಗಳಲ್ಲಿರುವ ಅರಿವೂ ಒಂದೇ. ಅರಿವು ತಿಳಿಯಲು ಹೋಗಿ ಶಿಷ್ಯನಾದ. ತಿಳಿಯ ಹೇಳುವ ನೆಪದಲ್ಲಿ ಗುರುವಾದ. ಗುರು ಶಿಷ್ಯರೆಂಬ ಅಜ್ಞಾನ ಕಳೆದರೆ ಎರಡೂ ಘನ ತನುಗಳೇ. ಎರಡೂ ಅರಿವಿನ ತನುಗಳೇ. ಅರಿವು ಅರಿವು ಕೂಡಿ ಒಂದಾದ ಘನವನ್ನು ಏನೆಂದು ಹೇಳುವುದು ! ಎರಡು ಉಪಮೆಗೆ ನಿಲುಕದ ವಸ್ತುಗಳು.

**ಕೂಡಲ ಚೆನ್ನಸಂಗಯ್ಯನಲ್ಲಿ ಗುರುಶಿಷ್ಯ ಸಂಬಂಧವಪೂರ್ವ:**

ಕೃಷ್ಣಾ ನದಿ ದೊಡ್ಡದು, ಭೀಮಾ ನದಿ ಚಿಕ್ಕದು. ಇದು ನೋಡುವುದಕ್ಕೆ ಸತ್ಯವೂ ಹೌದು. ಕೃಷ್ಣಾ ನದಿಯನ್ನು ಕೃಷ್ಣೆ ಎಂದು ಗುರುತಿಸುತ್ತೇವೆ. ಭೀಮಾನದಿಯನ್ನು ಭೀಮೆ ಎಂದು ಗುರುತಿಸುತ್ತೇವೆ. ಇವೆರಡೂ ನದಿಗಳು ಕೂಡಿ ಒಂದಾದ ಸ್ಥಳಕ್ಕೆ ಸಂಗಮವೆನ್ನುತ್ತೇವೆ. ಆ ಸಂಗಮದಲ್ಲಿ ಕೃಷ್ಣೆ ಎಂಬ ಗುರುವೂ ಇಲ್ಲ, ಭೀಮೆ ಎಂಬ ಶಿಷ್ಯನೂ ಇಲ್ಲ. ಎರಡೊಂದಾಗಿ ಸಂಗಮವೆಂಬ ಘನವಾಯಿತು.

ನೀರಿನ ಬಿಂದುವೂ ನೀರೇ, ನದಿ ಸಮುದ್ರ ಸಾಗರದಲ್ಲಿರುವ ನೀರೂ ನೀರೇ ! ಅಜ್ಞಾನದಿಂದ ನೀರಿನಲ್ಲಿ ಭೇದ ಹುಡುಕಿ ಹೆಸರಿಸಿದ್ದೇವೆ. ಹಾಗೆಯೇ ತನುಗಳೆಲ್ಲ ಒಂದೇ. ಅದರಲ್ಲಿರುವ ರಕ್ತ ಮೂಳೆ ಮಾಂಸ ಮಜ್ಜಾ ಮೇದಸ್ಸುಗಳು ಒಂದೇ. ಅವುಗಳನ್ನು ಪ್ಯಾಕ್ ಮಾಡಲ್ಪಟ್ಟ ಚರ್ಮವೂ ಒಂದೇ. ಆ ತನುವಿನ ತುಂಬಾ ತನ್ಮಯವಾಗಿ ಬೆರೆತ ಅರಿವೂ ಒಂದೇ! ಆ ಅರಿವು ತಿಳಿದು ತಾನೇ ಆ ಅರಿವಾದರೆ ಹೆಣ್ಣು ಗಂಡು ಜಾತಿ ಮತ ಪಂಥ ಬಡವ ಶ್ರೀಮಂತ ಅಧಿಕಾರಿ ನೌಕರನೆಂಬ ಅಜ್ಞಾನ ಅರಿವೆಂಬ ಸಂಗಮದಲ್ಲಿ ಐಕ್ಯವಾಗುತ್ತದೆ. ತಿಳಿಯಲು ಹೋದ ಗುರು ಶಿಷ್ಯರಿಬ್ಬರೂ ಜ್ಞಾನ ಸಂಗಮದಲ್ಲಿ ಬೆರೆತು ಅಪೂರ್ವ ಸಂಬಂಧಿಗಳಾಗುತ್ತಾರೆ.

□

**ಅರಿವಿನ ಪರಿಮಳ :**

- ಶಿಷ್ಯನ ತನುವಿನ ಅರಿವಿಗೆ ಗುರುವಾಗಲು ಬರುವುದಿಲ್ಲ.
- ಅರಿವು ತಿಳಿಯಲು ಹೋಗಿ ಶಿಷ್ಯನಾದ. ತಿಳಿಯ ಹೇಳುವ ನೆಪದಲ್ಲಿ ಗುರುವಾದ. ಗುರು ಶಿಷ್ಯರೆಂಬ ಅಜ್ಞಾನ ಕಳೆದರೆ ಎರಡೂ ಘನ ತನುಗಳೇ.
- ನೀರಿನ ಬಿಂದುವೂ ನೀರೇ, ನದಿ ಸಮುದ್ರ ಸಾಗರದಲ್ಲಿರುವ ನೀರೂ ನೀರೇ !

# ಹೇಳುವ ಕೇಳುವ ಅಂಗಗಳೆಲ್ಲ ಲಿಂಗಗಳೇ

**ಜ್ಞಾನ ಜ್ಞಾನವೆಂದು ಕೇಳಿದೆವಯ್ಯಾ ಗುರು ಹಿರಿಯರಿಂದ.**
**ಕೇಳಿದಲ್ಲಿ ಅಂಗವಾಗಲಿಲ್ಲ, ಕೇಳದೆ ಬಿಟ್ಟಲ್ಲಿ ಅಂಗವಾಯಿತ್ತು**
**ಇದೇನು ಕೌತುಕ ಕಪಿಲಸಿದ್ಧ ಮಲ್ಲಿಕಾರ್ಜುನಾ !**

**- ಸಿದ್ಧರಾಮ ಶಿವಯೋಗಿ**

**ಜ್ಞಾನ ಜ್ಞಾನವೆಂದು ಕೇಳಿದೆವಯ್ಯಾ ಗುರುಹಿರಿಯರಿಂದ. ಕೇಳಿದಲ್ಲಿ ಅಂಗವಾಗಲಿಲ್ಲ :**

ಗುರು ಹಿರಿಯರ ಹತ್ತಿರ ಜ್ಞಾನ ಕೇಳಲು ಹೋದಾಗ ಅವರು ನೀಡಿದ ಉಪನ್ಯಾಸ ಪ್ರವಚನಗಳನ್ನು ಆಲಿಸಿ ಅವರಂತೆಯೇ ತನ್ಮಯರಾಗುತ್ತೇವೆ. ಅವರ ಒಂದೊಂದು ಮಾತುಗಳನ್ನು ಕೇಳಿ ಪುಳಕಿತರಾಗುತ್ತೇವೆ. ಕೇಳುವವರು ಅನೇಕರಾದರೂ ಹೇಳುವವರು ಒಬ್ಬರೇ. ಹೇಳುವವರ ವೃತ್ತಿ ಒಂದೇ; ಅಭ್ಯಾಸ ಮಾಡುವುದು ಹೇಳುವುದು. ಕೇಳುವವರ ವೃತ್ತಿ ಅನೇಕ: ಒಬ್ಬ ಚಮ್ಮಾರ, ಮತ್ತೊಬ್ಬ ಕಮ್ಮಾರ, ಕೃಷಿಕ, ಟೇಲರ್. ಓದಿದವ ಒಬ್ಬನಾದರೆ ಏನೂ ಓದದವ ಮತ್ತೊಬ್ಬನಾಗಿರುತ್ತಾನೆ.

ಉಪನ್ಯಾಸ ನೀಡುವ ಗುರುಹಿರಿಯರು ಸತತ ಅಧ್ಯಯನ ಶೀಲರಾಗಿರುತ್ತಾರೆ. ಭಗವದ್ಗೀತೆ ಬೈಬಲ್ ವೇದ ಉಪನಿಷತ್ತು ರಾಮಾಯಣ ಮಹಾಭಾರತ ಮುಂತಾದ ಗ್ರಂಥಗಳನ್ನು ಓದಿ ಉದಾಹರಿಸುತ್ತಾರೆ. ಕೇಳುಗ ಅವೆಲ್ಲವುಗಳನ್ನು ಕೇಳಿ ತಲೆದೂಗುತ್ತಾನೆ. ಅರಿವಿನಿಂದ ಹೇಳಿದ ಅರಿವನ್ನು ಕೇಳುಗ ಅರಿವಿನಿಂದಲೇ ಕೇಳಿದ; ಅಂಗವಾಗಿ ಕೇಳಲಿಲ್ಲ. ವೃತ್ತಿ ಜಾತಿ ಮತ ಪಂಥ ಧರ್ಮ ಹೆಣ್ಣು ಗಂಡು ವಯೋಮಾನ ಅನಕ್ಷರತೆಗಳು ಕೇಳುಗನಿಗೆ ಅಡ್ಡಿಪಡಿಸಲಿಲ್ಲ. ಹೇಳುಗನಂತೆ ಕೇಳುಗನೂ ಅರಿವಾಗಿದ್ದ.

**ಕೇಳದೆ ಬಿಟ್ಟಲ್ಲಿ ಅಂಗವಾಯಿತ್ತು . ಇದೇನು ಕೌತುಕ ಕಪಿಲಸಿದ್ಧ ಮಲ್ಲಿಕಾರ್ಜುನಾ ! :**

ಜ್ಞಾನಿಗಳ ಸಭೆಗೆ ಅವರ ಉಪನ್ಯಾಸಕ್ಕನುಗುಣವಾಗಿ ಕೇಳುಗರು ಸೇರಿರುತ್ತಾರೆ. ಕೇಳುವವರ ಸಂಖ್ಯೆ ಒಮ್ಮೊಮ್ಮೆ 10 ರಿಂದ 50 ಸಾವಿರಕ್ಕೂ ಮಿಗಿಲಾಗಿರುತ್ತದೆ. ಜ್ಞಾನಿಗಳು ಉಪನ್ಯಾಸ ನೀಡುವಾಗ ಪಿನ್‌ಡ್ರಾಪ್ ಸೈಲೆನ್ಸ್. ಸೂಜಿ ಬಿದ್ದರೂ ಸದ್ದಾಗುವಷ್ಟು ನಿಶ್ಯಬ್ದ ಆವರಿಸಿ ಅವರ ಧ್ವನಿಯೊಂದೇ ಕೇಳುತ್ತಿರುತ್ತದೆ. ಉಪನ್ಯಾಸ ನಿಂತ ಮೇಲೆ ನೂಕು ನುಗ್ಗಲು, ಕೈ ಕಾಲು ಬಡಿದರೆ ಜಗಳ, ಜಾತಿ ನಿಂದನೆ. ಮನೆಗೆ ಹೋಗುವ ಕಾತುರದಲ್ಲಿ ಕಾಲ್ತುಳಿತ, ಸಾವು ನೋವುಗಳು ಸಂಭವಿಸುತ್ತವೆ. ಜ್ಞಾನದಿಂದ ಉಪನ್ಯಾಸ ಆಲಿಸಿದ ಮೇಲೆ ಅಂಗ ಲಿಂಗ (ಜ್ಞಾನ)ವೇ ಆಯಿತು. ಉಪನ್ಯಾಸ ನಿಂತ ಮೇಲೆ ಪುನಃ ಅಜ್ಞಾನದ ಗುಣಗಳು ಆವರಿಸಿದವು; ಇದೇನು ಕೌತುಕ ಎಂದಿದ್ದಾರೆ ಸಿದ್ಧರಾಮ ಶಿವಯೋಗಿಗಳು.

ಜೀವನ ಪರ್ಯಂತ ಓದಿ ತಿಳಿದು ಹೇಳುವ ಜ್ಞಾನವನ್ನು ಏನೂ ಕಲಿಯದ ಅನಕ್ಷರಸ್ಥರು ಆನಂದದಿಂದ ಕೇಳುತ್ತಾರೆ; ಆಗ ನನ್ನ ಜ್ಞಾನ ಅವರ ಜ್ಞಾನ ಒಂದೇ ಆಗಿರಬೇಕಲ್ಲ ಎನ್ನುವ ಕೌತುಕ ಉಪನ್ಯಾಸ ನೀಡುವವರಿಗೆ ಹೊಳೆಯಲಿಲ್ಲ. ಏನೂ ಕಲಿಯದಿದ್ದರೂ ಅವರು ಹೇಳಿದ್ದೆಲ್ಲ ತಿಳಿದೆನಲ್ಲ ಎನ್ನುವ ಕೌತುಕ ಕೇಳುಗನಿಗೂ ಹೊಳೆಯುವುದಿಲ್ಲ. ಜ್ಞಾನಿ ಉಪನ್ಯಾಸ ನೀಡುವ ವೃತ್ತಿಯಲ್ಲಿ ಲೀನವಾಗಿದ್ದ ; ಕೇಳುಗ ಕೇಳುವ ವೃತ್ತಿಯಲ್ಲಿ ಲೀನವಾಗಿದ್ದ. ಕೇಳುಗರು ಅಜ್ಞಾನಿಗಳು ಎಂದು

ತಿಳಿದು ಉಪನ್ಯಾಸ ಹೇಳಿ ಕಾಣಿಕೆ ಪಡೆದ. ಹೇಳುವವರು ಜ್ಞಾನಿಗಳು ಎಂದು ಕೇಳಿ ಕಾಣಿಕೆ ನೀಡಿ ಧನ್ಯರಾದರು ಕೇಳುಗರು.

ಹೇಳುವ-ಕೇಳುವ ತನುವಿನ ಜ್ಞಾನ ಒಂದೇ ಆಗಿರಬೇಕಲ್ಲ ಎನ್ನುವ ಕೌತುಕದ ಸುಳುಹು ಒಬ್ಬರಿಗೂ ಹೊಳೆಯಲಿಲ್ಲ. ಹೇಳುವ ಕೇಳುವ ಕ್ರಿಯೆಯನ್ನು ಸಾಕ್ಷಿಯಾಗಿ ನೋಡಿದ ಸಿದ್ಧರಾಮ ಶಿವಯೋಗಿಗಳಿಗೆ ಮಾತ್ರ ಹೊಳೆಯಿತು. ಶರಣರಿಗೆ ಜ್ಞಾನಿಗಳಿಗೆ ಮಾತ್ರ ಹೊಳೆಯಿತು. ಹೊಳೆದರೆ ಸಾಕು ಜ್ಞಾನ ಹೇಳುವವನು ಜ್ಞಾನಿಯೇ, ಜ್ಞಾನ ಕೇಳುವವನೂ ಜ್ಞಾನಿಯೇ. ಹೇಳುವುದನ್ನು ಕೇಳುವುದನ್ನು ಸಾಕ್ಷಿಯಾಗಿ ಕುತೂಹಲದಿಂದ ತಿಳಿದರೆ ಹೇಳುವ ಕೇಳುವ ಅಂಗಗಳೂ ಲಿಂಗಗಳೇ. □

**ಅರಿವಿನ ಪರಿಮಳ :**

□ ಜೀವನ ಪರ್ಯಂತ ಓದಿ ತಿಳಿದು ಹೇಳುವ ಜ್ಞಾನವನ್ನು ಏನೂ ಕಲಿಯದ ಅನಕ್ಷರಸ್ಥರು ಆನಂದದಿಂದ ಕೇಳುತ್ತಾರೆ; ಆಗ ನನ್ನ ಜ್ಞಾನ ಅವರ ಜ್ಞಾನ ಒಂದೇ ಆಗಿರಬೇಕಲ್ಲ ಎನ್ನುವ ಕೌತುಕ ಉಪನ್ಯಾಸ ನೀಡುವವರಿಗೆ ಹೊಳೆಯಲಿಲ್ಲ. ಏನೂ ಕಲಿಯದಿದ್ದರೂ ಅವರು ಹೇಳಿದ್ದೆಲ್ಲ ತಿಳಿದೆನಲ್ಲ ಎನ್ನುವ ಕೌತುಕ ಕೇಳುಗನಿಗೂ ಹೊಳೆಯುವುದಿಲ್ಲ.

# ಜ್ಞಾನ ಬಳಕೆ ಮಾಡಿಕೊಂಡರೆ ಶರಣ

**ಜಲದೊಳಗೆ ಭವಿಸಿತ್ತು ಜಲಕೆ ನಂದದ ಕಿಚ್ಚು**
**ಆ ಜಲಂಗಳು ಹಲವು; ಮತ್ತೆ ತನ್ನೊಳಗೆ ಜನನವು ಆ ಸ್ಥಳ.**
**ಜಲಕೆ ನೆಲೆಯಾದ ಸೀಮೆ ತಾನೆ ಆ ಸ್ಥಳವು?**
**ಸೀಮೆಯ ಮೀರಿ, ಒಲವೆ ಒಡಮನೆಯಾದ**
**ಕಪಿಲಸಿದ್ಧಮಲ್ಲಿಕಾರ್ಜುನಾ.**

**- ಸಿದ್ಧರಾಮ ಶಿವಯೋಗಿ**

**ಜಲದೊಳಗೆ ಭವಿಸಿತ್ತು ಜಲಕೆ ನಂದದ ಕಿಚ್ಚು:**

ಜಲಬಿಂದು ಗರ್ಭ ಸೇರಿ ಆ ಜಲದಿಂದಲೇ ತನುವಿನ ಸೃಷ್ಟಿಯಾಯಿತು. ಆ ತನುವಿನಿಂದಲೇ ಶಬ್ದದ ಸೃಷ್ಟಿಯಾಯಿತು. ತನುವಿನ ಶಬ್ದ ತನುವಿಗೆ ಬಡಿದರೆ ನಂದದ ಕಿಚ್ಚು ! ದ್ವೇಷ. ಜಲದ ತನುವಿಗೆ ಜಲ ಸುರಿದರೂ ತನುವಿನಲ್ಲಿ ಹುಟ್ಟಿದ ಕಿಚ್ಚು ನಿಲ್ಲುವುದಿಲ್ಲ; ದ್ವೇಷ ಅಸೂಯೆಗಳು ಶಮನಗೊಳ್ಳುವುದಿಲ್ಲ.

**ಆ ಜಲಂಗಳು ಹಲವು; ಮತ್ತೆ ತನ್ನೊಳಗೆ ಜನನವು ಆ ಸ್ಥಳ :**

ಎಲ್ಲಾ ಜಲಭರಿತ ತನುಗಳೇ; ತನುವಿನ ಶಬ್ದ ಎಲ್ಲ ತನುಗಳು ಕೇಳಿದವು. ಕೇಳಿದ ಎಲ್ಲ ತನುಗಳಲ್ಲಿ ಶಬ್ದ ಜಲವಾಯಿತು. ಶಬ್ದ ನುಡಿದ ತನುವಿನಲ್ಲಿ ಮತ್ತು ಸ್ವೀಕರಿಸಿದ ತನುವಿನಲ್ಲಿ ಮಾತ್ರ ಕಿಚ್ಚಾಯಿತು. ಜಲ ಸುರಿದಗೂ ನಂದದ ಕಿಚ್ಚಾಯಿತು.

**ಜಲಕೆ ನೆಲೆಯಾದ ಸೀಮೆ ತಾನೆ ಆ ಸ್ಥಳವು ? :**

ತನು, ಜಲಕೆ ನೆಲೆಯಾದ ಸೀಮೆ. ಜಲಜನಕದ ಎರಡು ಕಣ, ಆಮ್ಲಜನಕದ ಒಂದು ಕಣದಿಂದ ಜಲ ಬಿಂದುವಾಯಿತು. ಆ ಜಲದಲ್ಲಿ ಕಿಚ್ಚಿನ ಗುಣದ ಎರಡು ಜಲಜನಕದ ಕಣಗಳಿವೆ. ಅದನ್ನು ಎಂದೂ ನಂದದಂತೆ ಉರಿಸುವ ಒಂದು ಆಮ್ಲಜನಕದ ಕಣವೂ ಇದೆ. ಉರಿಯುವ ಕಿಚ್ಚಿಗೆ ಗಾಳಿ ಬೀಸಿದಂತೆ ! ಹೊರಗಿನ ಗಾಳಿ ನೆಪ ಮಾತ್ರ. ಅದಕ್ಕಾಗಿಯೇ ಸಿದ್ಧರಾಮ ಶಿವಯೋಗಿಗಳು ಜಲದೊಳಗೆ ಹುಟ್ಟಿತ್ತು ಜಲಕೆ ನಂದದ ಕಿಚ್ಚು ಎಂದಿದ್ದಾರೆ.

ಜಲಕೆ ನೆಲೆಯಾದ ಸೀಮೆ ತಾನೆ ಆ ಸ್ಥಳವು ? ಜಲದಿಂದ ಸೃಷ್ಟಿಯಾದ ಕಿಚ್ಚು ಜಲದಿಂದ ನಂದಲು ಸಾಧ್ಯವೇ ? ಎಂದು ಪ್ರಶ್ನಿಸಿದ್ದಾರೆ ಸಿದ್ಧರಾಮ ಶಿವಯೋಗಿಗಳು.

**ಸೀಮೆಯ ಮೀರಿ, ಒಲವೆ ಒಡಮನೆಯಾದ ಕಪಿಲಸಿದ್ಧ ಮಲ್ಲಿಕಾರ್ಜುನಾ :**

ತನು ಜಲದ ಮನೆ. ಜಲ ಸೀಮೆಯಿಂದಲೇ ನಿರ್ಮಾಣವಾದ ಮನೆ. ಜಲದಿಂದ ಹೊತ್ತಿದ ಕಿಚ್ಚು ಜಲದಿಂದ ನಂದದು. ಕ್ರಿಷ್ಣನ ಸಾಂತ್ವನದ ಮಾತುಗಳಿಂದ ದುರ್ಯೋಧನನಲ್ಲಿ ಹೊತ್ತಿದ ಕಿಚ್ಚು ಶಮನವಾಗಲಿಲ್ಲ. ಮಹಾಭಾರತದ ಯುದ್ಧ ನಿಲ್ಲಲಿಲ್ಲ. ಜಲಕೆ ನೆಲೆಯಾದ ಸೀಮೆ ತಾನೆ ಆ ಸ್ಥಳವು ? ಈ ಜಲಮನೆ ಸೀಮೆಯ ಮೀರುವುದು ಒಲವೆಂಬ ಒಡ ಮನೆಯ ಧೀರ ನಿಸ್ಸೀಮ ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ಮಾತ್ರ ಸಾಧ್ಯ !

ಜಲದ ಒಡಲಿನಲ್ಲಿ ಮನವೂ ಇದೆ ; ಜಲದೊಡೆಯನೂ ಇದ್ದಾನೆ; ಆತ ಒಲವಿನ ಒಡೆಯ.

ಒಬ್ಬ ಅಜ್ಞಾನಿ; ಮತ್ತೊಬ್ಬ ಜ್ಞಾನಿ! ಕ್ರಿಷ್ಣನದೂ ಒಡಲೇ. ದುರ್ಯೋಧನನದೂ ಒಡಲೇ. ಕ್ರಿಷ್ಣನ ಒಡಲಲ್ಲಿ ಅಜ್ಞಾನಿ ನಷ್ಟವಾಗಿ ಕ್ರಿಷ್ಣನೊಬ್ಬನೆ ಇದ್ದ. ದುರ್ಯೋಧನನ ಒಡಲಲ್ಲಿ ಜ್ಞಾನಿ ಬಳಕೆಗೆ ಬಾರದೆ ಅಜ್ಞಾನಿ ಮಾತ್ರ ಚಾಲ್ತಿಯಲ್ಲಿದ್ದ. ಕ್ರಿಷ್ಣ ಸಮಾಧಾನದಿಂದ ಆಲಿಸಿದ ದುರ್ಯೋಧನನ ಶಬ್ದ ಜ್ಞಾನವಾಯಿತು. ಆ ಶಬ್ದವೇ ತನುವಿನ ಜಲದಲ್ಲಿ ಕರಗಿ ಜಲವಾಯಿತು. ದುರ್ಯೋಧನನ ತನುವಿಗೆ ಬಡಿದ ಕ್ರಿಷ್ಣನ ಶಬ್ದ ಜ್ವಾಲೆಯಾಯಿತು. ತಣ್ಣನೆಯ ಸಾಂತ್ವಾನದ ಮಾತುಗಳೂ ಉರಿಯುವ ಕಿಚ್ಚನ್ನು ಶಮನಗೊಳಿಸಲಿಲ್ಲ.

ಜ್ಞಾನದಿಂದ ಜಲ ಸೃಷ್ಟಿಯಾಯಿತು. ಜಲದ ಜ್ವಾಲೆಯಿಂದ ಗಾಳಿಯಿಂದ ಮರೀಚಿಕೆ ಸೃಷ್ಟಿಯಾಯಿತು. ಆ ಮರೀಚಿಕೆಯೇ ಮನ ! ಮನ ಸ್ವೀಕರಿಸಿದ ಶಬ್ದ ಜಲಕ್ಕೆ ಬಡಿದು ಜ್ವಾಲೆಯಾಯಿತು. ಜ್ಞಾನ ಸ್ವೀಕರಿಸಿದ ಶಬ್ದ ಜಲಕ್ಕೆ ಬಡಿದು ಜಲವಾಯಿತು. ಇದು ಮಹಾಜ್ಞಾನಿ ಸಿದ್ಧರಾಮ ಶಿವಯೋಗಿಗಳ ಸೂತ್ರ. ತನುವಿನ ಜ್ಞಾನ ಬಳಕೆ ಮಾಡಿಕೊಂಡು ಆ ಜ್ಞಾನಕ್ಕೆ ಶರಣು ಹೋದರೆ ಶರಣ ! ಇಲ್ಲ, ದುರ್ಯೋಧನನಂತೆ ಮರಣ.

□

---

**ಅರಿವಿನ ಪರಿಮಳ :**

- □ ಜಲದಲ್ಲಿ ಕಿಚ್ಚಿನ ಗುಣದ ಎರಡು ಜಲಜನಕದ ಕಣಗಳಿವೆ. ಅದನ್ನು ಎಂದೂ ನಂದದಂತೆ ಉರಿಸುವ ಒಂದು ಆಮ್ಲಜನಕದ ಕಣವೂ ಇದೆ.
- □ ಕ್ರಿಷ್ಣನ ಒಡಲಲ್ಲಿ ಅಜ್ಞಾನಿ ನಷ್ಟವಾಗಿ ಕ್ರಿಷ್ಣನೊಬ್ಬನೆ ಇದ್ದ. ದುರ್ಯೋಧನನ ಒಡಲಲ್ಲಿ ಜ್ಞಾನಿ ಬಳಕೆಗೆ ಬಾರದೆ ಅಜ್ಞಾನಿ ಮಾತ್ರ ಚಾಲ್ತಿಯಲ್ಲಿದ್ದ.

# ಕಾರಣದೇಹ ಅತೀತ ಅನಂತಸಾಗರ

**ಸ್ಥೂಲ ದೇಹ ತೊಳೆದಡೇನು, ಸೂಕ್ಷ್ಮ ದೇಹ ಶುದ್ಧವಾದಡೇನು,**
**ಕಾರಣಾತೀತನಾಗದನ್ನಕ್ಕ?**
**ಎಲೆ ಕಪಿಲಸಿದ್ಧಮಲ್ಲಿಕಾರ್ಜುನಾ, ನಾ ಯೋಗಿಯಾದಡೇನು**
**ಮನವ್ಪೊಲಿದು ಚೆನ್ನಬಸವಣ್ಣ ಲಿಂಗವ ಕೂಡದನ್ನಕ್ಕ**

**-ಸಿದ್ಧರಾಮ ಶಿವಯೋಗಿ**

ಸ್ಥೂಲ,ಸೂಕ್ಷ್ಮ,ಕಾರಣ ಎಂದು ದೇಹದಲ್ಲಿ ಮೂರು ವಿಧ.

ಕಣ್ಣಿಗೆ ಕಾಣುವ ಸ್ಥೂಲ ದೇಹವನ್ನು ನಾನಾ ವಿಧದ ಸಾಬೂನುಗಳ ಮೂಲಕ ತೊಳೆದು ಸುಗಂಧ ದ್ರವ್ಯ ಸವರುತ್ತೇವೆ.

ಸ್ಥೂಲ ದೇಹದ ಮಲಿನಕ್ಕೆ ಕಾರಣವಾದ ಸೂಕ್ಷ್ಮ ದೇಹ ಎನ್ನುವ ಮನವನ್ನು ಜಪ,ತಪ, ಧ್ಯಾನ,ಮಂತ್ರ, ಗ್ರಂಥ ಪಠಣಗಳ ಮೂಲಕ, ಪುರಾಣ ಪ್ರವಚನ ಉಪನ್ಯಾಸಗಳನ್ನು ಕೇಳುವ ಮೂಲಕ , ಪುಣ್ಯ ಕ್ಷೇತ್ರಗಳ ದರ್ಶನ, ಮಠ ಮಂದಿರ ಚರ್ಚ್‌ಗಳಿಗೆ ಹೋಗಿ ಪ್ರಾರ್ಥನೆ ಸಲ್ಲಿಸುವುದರ ಮೂಲಕ ಶುದ್ಧ ವಾಗಿಡಲು ಪ್ರಯತ್ನಿಸುತ್ತೇವೆ.

ಸ್ಥೂಲದೇಹ ತೊಳೆದಡೇನು ಸೂಕ್ಷ್ಮ ದೇಹ ಶುದ್ಧವಾದಡೇನು ಅಸನ ವ್ಯಸನಗಳಿಗೆ ಕಾರಣವಾದ ಕ್ರಿಯೆ ನಿಲ್ಲಲಿಲ್ಲ.

ಸೂಕ್ಷ್ಮ ದೇಹವನ್ನು ಶುದ್ಧ ಮಾಡಬೇಕೆಂಬ ಸುಳುಹು ದೊರೆತಂತೆಲ್ಲ ಸ್ಥೂಲ ದೇಹದ ಆಚಾರಗಳು ಬಲಿಯುತ್ತವೆ. ದಿನಕ್ಕೆರಡು ಮೂರು ಸಲ ಸ್ನಾನ ಪೂಜೆ ಪುನಸ್ಕಾರಗಳು ಸಂಧ್ಯಾವಂದನೆಗಳು, ವಿಭೂತಿ ಕುಂಕುಮ ಗಂಧದ ತಿಲಕ,ಜನಿವಾರ,ಲಿಂಗ,ರುದ್ರಾಕ್ಷಿ ಧಾರಣೆ , ತಲೆಬೋಳಿಸುವುದು, ಗಡ್ಡ ಬಿಡುವುದು ಹೀಗೆ ಸೂಕ್ಷ್ಮ ದೇಹ ತಾನು ಶುದ್ಧವಾಯಿತೆಂದು ಸ್ಥೂಲದೇಹದ ಮೂಲಕ ವ್ಯಕ್ತಪಡಿಸುತ್ತದೆ.

ಸ್ಥೂಲದೇಹಕ್ಕೆ ಜನ ಮರುಳಾದಂತೆಲ್ಲ ಸೂಕ್ಷ್ಮ ದೇಹದ ಚಟುವಟಿಕೆಗಳು ಹೆಚ್ಚಾಗುತ್ತ ಸ್ಥೂಲ ದೇಹದ ಮುಖಾಂತರ ತನ್ನ ಶುದ್ಧತೆಯನ್ನು ವ್ಯಕ್ತಪಡಿಸುತ್ತಾ ಹೋಗುತ್ತದೆ. ಸೂಕ್ಷ್ಮ ದೇಹದಿಂದ ಸ್ಥೂಲದೇಹಕ್ಕೆ ಸುಖವೂ ಇದೆ ದುಃಖವು ಇದೆ. ಅದು ವಸ್ತುಗಳಿಂದ ಸುಖಪಡುತ್ತದೆ, ವಸ್ತುಗಳು ದಕ್ಕದೇ ಇದ್ದಾಗ ದುಃಖ ಪಡುತ್ತದೆ.

ಸ್ಥೂಲ ದೇಹ ಜನ್ಮ ಧರಿಸಿದ ಕಾರಣವೇನೆಂದು ಸೂಕ್ಷ್ಮ ದೇಹಕ್ಕೆ ಹೊಳೆಯುವುದಿಲ್ಲ. ಕಾರಣದೇಹಕ್ಕೆ ಇವೆರಡರ ಪರಿವೆಯೇ ಇಲ್ಲ. ಸೂಕ್ಷ್ಮ ದೇಹ ಶುದ್ಧತೆಯ ನೆಪದಲ್ಲಿ ಹಾಕಿಕೊಂಡ ಮುಖವಾಡವನ್ನು ಅನಾವರಣ ಮಾಡುವುದು ಕಾರಣದೇಹದ ಕರ್ತವ್ಯ.

ರಾಜಕಾರಣಿ,ಅಧಿಕಾರಿ,ಹೆಣ್ಣು,ಗಂಡು,ಬಡವ ಶ್ರೀಮಂತ ಸ್ವಾಮಿ, ಭಕ್ತ, ಗುರು ಶಿಷ್ಯ, ಮಠಾಧಿಪತಿ ಜಗದ್ಗುರು ಎನ್ನುವ ರೋಗಕ್ಕೆ ಸ್ಥೂಲ ದೇಹದೊಂದಿಗೆ ತುತ್ತಾದ ಮನದ ಮಲಿನವನ್ನು ಕಿತ್ತುವ ಕಾಯಕದಲ್ಲಿ ನಿರತವಾಗಿರುವುದೇ ಕಾರಣ ದೇಹ.

ಕಾರಣದೇಹ ಅತೀತ ಅನಂತ ! ಜಗದಗಲ ಮುಗಿದಗಲ ಅದರ ವಿಸ್ತಾರ !! ಇದಕ್ಕೆ

ಸುಖವೂ ಇಲ್ಲ ದುಃಖವೂ ಇಲ್ಲ ; ಸುಖ -ದುಃಖಗಳಿಂದ ಅತೀತವಾದ ನಿರಂತರ ಸುಖವಿದೆ. ವಸ್ತುಗಳಿಂದ ಮನಕ್ಕೆ ಸುಖ-ದುಃಖಗಳುಂಟಾದರೆ, ತನ್ನಿಂದ ಸೃಷ್ಟಿಯಾದ ವಸ್ತುಗಳು ತನ್ನಲ್ಲೆ ಲೀನವಾಗಿ ಅರ್ಥಕಳೆದುಕೊಳ್ಳುತ್ತವೆ. ಈ ಕೆಲಸ ಸ್ಥೂಲ ದೇಹವನ್ನು ಆವರಿಸಿಕೊಂಡ ಸೂಕ್ಷ್ಮದೇಹಕ್ಕೆ ಸಾಧ್ಯವಾಗುವುದಿಲ್ಲ. ಅದಕ್ಕಾಗಿಯೇ ಶುದ್ಧತೆಯ ಮುಖವಾಡ ಧರಿಸಿ ನಾಟಕವಾಡುತ್ತದೆ. ಇದು ನಾಟಕವೆಂದು ಅನ್ಯರು ತಿಳಿಯದಿದ್ದರೂ ಮುಖವಾಡ ಧರಿಸಿದ ಸೂಕ್ಷ್ಮ ದೇಹಕ್ಕೆ ಕಾರಣದೇಹವೇ ಪರಿಚಯ ಮಾಡಿಸುತ್ತದೆ.

ಸೂಕ್ಷ್ಮದೇಹ ಸ್ಥೂಲದೇಹವನ್ನು ಅರಮನೆಗೆ, ಸೆರೆಮನೆಗೆ ವೇಶ್ಯಾಗೃಹಕ್ಕೆ, ಬಾರಿಗೆ, ಜೂಜಿಗೆ, ರಾಜಕೀಯಕ್ಕೆ ಕರೆದುಕೊಂಡು ಹೋಗುತ್ತದೆ. ಕಾರಣ ದೇಹ ಈ ಯಾವ ಕೆಲಸಗಳಲ್ಲಿಯೂ ಭಾಗಿಯಾಗದೆ ತಾನು ನಿಂತು ನೋಡುತ್ತದೆ, ಖಂಡಿಸುತ್ತದೆ. ನಿರ್ಲೇಪದಂತೆ ದೂರವಿದ್ದು ಅನಂತವಾಗಿಯೇ ಉಳಿಯುತ್ತದೆ. ಹೌದು ಅಲ್ಲವಾದ ಕೆಲಸಗಳಲ್ಲಿ ಸ್ಥೂಲ ಸೂಕ್ಷ್ಮಗಳೆರಡೂ ಭಾಗಿಯಾದರೂ ಕಾರಣದೇಹ ತಾನು ಮಾತ್ರ ಅತೀತ;

ಅನಂತಸಾಗರ!

ಸಾಗರವೆಂದೂ ನದಿಯತ್ತ ಹರಿಯುವುದಿಲ್ಲ. ನದಿಗಳು ಕ್ರಮಿಸಿ ಸಾಗರದೊಂದಿಗೆ ಬೆರೆಯಬೇಕು. ಸಾಗರವೇ ಆಗ ಬೇಕು. ಅದಕ್ಕಾಗಿಯೇ ಸಿದ್ಧರಾಮಶರಣರು ನಾ ಯೋಗಿಯಾದಡೇನು ದೇಹಕ್ಕೆ ಕಾರಣವಾದ ಮಹಾಜ್ಞಾನ(ಲಿಂಗ)ಕ್ಕೆ ಮನವೂಲಿದು ಅದರಲ್ಲಿ ಕೂಡಿ ಅನಂತವಾಗದನ್ನಕ್ಕ ಎಂದಿದ್ದಾರೆ.

□

---

**ಅರಿವಿನ ಪರಿಮಳ :**

- ಸೂಕ್ಷ್ಮದೇಹವನ್ನು ಶುದ್ಧ ಮಾಡಬೇಕೆಂಬ ಸುಳುಹು ದೊರೆತಂತೆಲ್ಲ ಸ್ಥೂಲ ದೇಹದ ಆಚಾರಗಳು ಬಲಿಯುತ್ತವೆ.
- ಸೂಕ್ಷ್ಮದೇಹದಿಂದ ಸ್ಥೂಲದೇಹಕ್ಕೆ ಸುಖವೂ ಇದೆ ದುಃಖವು ಇದೆ.
- ಸೂಕ್ಷ್ಮದೇಪ ಶುದ್ಧತೆಯ ನೆಪದಲ್ಲಿ ಹಾಕಿಕೊಂಡ ಮುಖವಾಡವನ್ನು ಅನಾವರಣ ಮಾಡುವುದು ಕಾರಣದೇಹದ ಕರ್ತವ್ಯ.

# ಜ್ಞಾನದ ಟೂಲ್ ಬಳಕೆ ಮಾಡಿಕೊಳ್ಳುವ ಸೂತ್ರ

**ಉದಕವೆಲ್ಲ ಒಂದೆ:**
**ಈಚಲವ ಆಶ್ರಯಿಸಿ ಮದ್ಯಪಾನವೆನಿಸಿತ್ತು**
**ಸುರತರವ ಆಶ್ರಯಿಸಿ ಅಮೃತವೆನಿಸಿತ್ತು**
**ದೇಹವೆಲ್ಲ ಒಂದೆ :**
**ಅಂಗನೆಯರ ಆಶ್ರಯಿಸಿ ಭವಕ್ಕೆ ಬೀಜವಾಯಿತ್ತು**
**ಲಿಂಗವ ಆಶ್ರಯಿಸಿ ಭವಾರಣ್ಯಕ್ಕೆ ದಾವಾನಿಲವೆನಿಸಿತ್ತು ನೋಡಾ**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

**-ಸಿದ್ಧರಾಮ ಶಿವಯೋಗಿ**

ನೀರೆಲ್ಲ ಒಂದೇ. ಈಚಲು ಸೇರಿ ಹೆಂಡವಾಯಿತು.

ತೆಂಗಿನ ಮರ ಸೇರಿ ಅಮೃತವಾಯಿತು. ತಾಯಿ ಗರ್ಭ ಸೇರಿ ದೇಹವಾಯಿತು.

ದೇಹದಲ್ಲಿ ಎರಡು ಟೂಲ್ (ಉಪಕರಣ)ಗಳಿವೆ. ಒಂದು ಜ್ಞಾನ ಮತ್ತೊಂದು ಮನ.

ಮನ ಎಂಬ ಉಪಕರಣ ಬಳಸಿ ಈಚಲ ನೋಡಿದರೆ ಹೆಂಡವಾಗಿ ಕಾಣುತ್ತದೆ. ಹೆಂಡದ ರುಚಿ ಮನ ಬಯಸಿ ದೇಹಕ್ಕೆ ಕುಡಿಸುತ್ತದೆ. ಜೀವನ ಪರ್ಯಂತ ಹೆಂಡಕ್ಕೆ ದಾಸನಾಗುತ್ತದೆ. ಕುಡುಕ ಎನ್ನುವ ಪಟ್ಟ ನೀಡಿ ದೇಹವನ್ನು ದಂಡಿಸುತ್ತದೆ.

ಮನವೆಂಬ ಉಪಕರಣ ಬಳಸಿ ಅಂಗ ನೋಡಿದರೆ ಅಂಗನೆಯಂತೆ ಕಾಣುತ್ತಾಳೆ. ತಾನು ಅಂಗ; ನೋಡುವ ಅಂಗವೂ ಅಂಗ. ಆದರೂ ಅಂಗಕ್ಕೆ ಅಂಗದೊಂದಿಗೆ ಬೆರೆಯುವ ಆಸೆ. ಈ ಆಸೆಯಿಂದಲೇ ವಿಟ ವೇಶ್ಯೆಯೆಂಬ ಪಟ್ಟ, ಹಾದರಗಿತ್ತಿ, ಹಾದರಿಗ ವಿಷಯ ಲಂಪಟ ಎಂಬ ಪಟ್ಟ, ಇದು ಮನ ಎಂಬ ಟೂಲ್ ಬಳಕೆ ಮಾಡಿದ್ದಕ್ಕಾಗಿ ದೇಹಕ್ಕೆ ಈ ಶಿಕ್ಷೆ.

ಜ್ಞಾನ ಎಂಬ ಟೂಲ್ ಬಳಕೆ ಮಾಡಿ ನೋಡಿದರೆ ಈಚಲಿನಿಂದ ಒಸರುವ ನೀರು ನೀರೆ, ತೆಂಗಿನ ನೀರು ನೀರೇ. ಎರಡರಲ್ಲೂ ಭೇದವಿಲ್ಲ. ನೀರು ಉಂಡು ಈಚಲಾಯಿತು. ನೀರುಂಡು ತೆಂಗಾಯಿತು. ಎರಡಕ್ಕೂ ವ್ಯಸನಿಯಾಗಲಿಲ್ಲ. ಮಿತವಾಗಿ ಸೇವಿಸಿ ನಿರ್ಲೇಪಿಯಾದ.

ಅಂಗನೆಯದೂ ಅಂಗವೇ. ತನ್ನದೂ ಅಂಗವೇ. ನೀರಿನ ಬಿಂದು ಗರ್ಭಸೇರಿ ಅಂಗವಾಯಿತು. ಎಡಗೈಗೆ ಬಲಗೈ ತಾಗಿದರೆ ರಸಾಯನಿಕ ಕ್ರಿಯೆಯಿಲ್ಲ.ಹಾಗೆ ಜ್ಞಾನ ತಿಳಿಯುವ ಕ್ರಿಯೆಯಲ್ಲಿ ಭಾಗಿಯಾಗಿ ದೃಢ ನಿರ್ಧಾರಕ್ಕೆ ಬರುತ್ತದೆ. ದೇಹವನ್ನು ತಲ್ಲಣಗೊಳಿಸದೆ ಎಲ್ಲವನ್ನೂ ತನ್ನಂತೆ ನೋಡುತ್ತದೆ. ಜಾತಿ-ಮತ, ಪಂಥ,ಬಡವ-ಶ್ರೀಮಂತ, ಹೆಣ್ಣು,ಗಂಡೆನ್ನದೆ ಜಲಬಿಂದುವಿನಿಂದಾದ ಅಂಗಗಳೆಲ್ಲ ತನ್ನಂತೆ ಇರುವ ಲಿಂಗಗಳಾಗಿಯೇ ಕಾಣುತ್ತವೆ.

ಮನಕ್ಕೆ ಈಚಲ ಹೆಂಡವಾದರೆ ಜ್ಞಾನಕ್ಕೆ ನೀರು. ಮನಕ್ಕೆ ಅಂಗ ಅಂಗನೆಯಾದರೆ ಜ್ಞಾನಕ್ಕೆ *ಅಂಗ ತನ್ನಂತೇ ಇರುವ ಲಿಂಗ !* ಮನ ವಸ್ತುವನ್ನು ವಿರೂಪಗೊಳಿಸಿ ವಿಕೃತವಾಗಿ ಅನುಭವಿಸಿದರೆ, ಜ್ಞಾನ ವಸ್ತುವಿನ ಮೂಲ ಸತ್ಯವನ್ನು ನೋಡಿ ಆನಂದಿಸುತ್ತದೆ. ಜ್ಞಾನದ ಟೂಲ್ ಬಳಕೆ ಮಾಡಿಕೊಂಡು ಜಾಣನಾಗುವ ಸೂತ್ರವನ್ನು ಮನಕ್ಕೆ ವಿವರಿಸಿದ್ದಾರೆ ಸಿದ್ಧರಾಮ ಶರಣರು.

□

# ಜ್ಞಾನ ಸಂಪನ್ನ

**ಅಭ್ಯಾಸದ ಅನುಭಾವಿಗಳಿಗೆ ಅಧಿಕ ಭಕ್ತಿ ಎಂತಪ್ಪುದಯ್ಯಾ ?**
**ವಾಕ್ಯದಲ್ಲಿ ನುಡಿದು, ಕಾಯಕದಲ್ಲಿ ಮಾಡಲು**
**ಭಕ್ತಿಯಪ್ಪುದೆ ಮಾನಸವು ಮುಟ್ಟದನ್ನಕ್ಕರ?**
**ಮಾನಸ ಭಕ್ತಿ ಸಂಪನ್ನರಾದಡೆ ತಾವು ನೀನಪ್ಪುದೇನರಿದು?**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

**- ಸಿದ್ಧರಾಮಶಿವಯೋಗಿ**

ಶರಣರು ಮನದಿಂದ ನುಡಿಯಲಿಲ್ಲ. ಹರಿಯುವ ಮನವನ್ನು ಜ್ಞಾನದಲ್ಲಿರಿಸಿ ಜ್ಞಾನದಿಂದ ನುಡಿದರು. ಮನ ಮತ್ತು ಜ್ಞಾನ ತನುವಿನ ಸಾಧನಗಳು.

ಗ್ರಂಥಗಳನ್ನು ಅಭ್ಯಸಿಸಿ ಅನುಭವ ಪಡೆದ ಪಂಡಿತನಿಗೆ ವಾಕ್ಯದಲ್ಲಿ ನುಡಿದು ಕಾರ್ಯಗತಕ್ಕೆ ತರುವುದು ಸಾಧ್ಯವಾಗುವುದಿಲ್ಲ, ಏಕೆಂದರೆ ಮನ, ಜ್ಞಾನ ಮುಟ್ಟಿ ನುಡಿಯಲಿಲ್ಲ. ಪಂಡಿತ ಮನ ಸಂಪನ್ನನೇ ಹೊರತು ಜ್ಞಾನ ಸಂಪನ್ನನಲ್ಲ. ಜ್ಞಾನ ತಾನಾಗಿ ನುಡಿದವನು ಮಾತ್ರ ನುಡಿದಂತೆ ನಡೆಯಬಲ್ಲ. ಕಪಿಲ ಸಿದ್ಧ ಮಲ್ಲಿಕಾರ್ಜುನನು ತಾನೇ ಆಗಬಲ್ಲ. ಇದು ಸಿದ್ಧರಾಮ ಶರಣರ ಮಾತು

ಉದಾ: ಒಬ್ಬ ಹಸಿವಿನಿಂದ ಬಳಲುತ್ತಿದ್ದ. ಓಣಿಯಲ್ಲಿ ಯಾರೂ ಅವನಿಗೆ ಅನ್ನ ನೀಡಲಿಲ್ಲ. ಪಂಡಿತನೊಬ್ಬ ಹೊರ ಬಂದು ಹಸಿವಿನಿಂದ ಬಳಲುವವನನ್ನು ನೋಡಿದ. ಹರಕು ಬಟ್ಟೆ ಧರಿಸಿದ ಅವನು ಐದಾರು ದಿನಗಳಿಂದ ಊಟ ಮಾಡಿರಲಿಲ್ಲ. ಒಂದಿಷ್ಟು ಹಳೆ ಬಟ್ಟೆ ಊಟ ತಂದು ನೀರು ಕೊಟ್ಟ, ತೃಪ್ತಿಯಿಂದ ಉಂಡು ಬಾಯಿತುಂಬಾ ಹರಿಸಿದ. ಸ್ವಾಮಿ ಯಾವುದಾದರೂ ಕೆಲಸಕೊಡಿ ನಿಮ್ಮ ಸೇವೆ ಮಾಡಿಕೊಂಡಿರುವೆ ಎಂದ. ಆಯಿತು ಎಂದು ಮನೆಯಲ್ಲೇ ಇಟ್ಟುಕೊಂಡ ಪಂಡಿತ. ಓಣಿಯ ಜನ ಪಂಡಿತನ ಕೆಲಸಕ್ಕೆ ಮೆಚ್ಚುಗೆ ವ್ಯಕ್ತಪಡಿಸಿದರು.

ಎರಡು ದಿನ ಕಳೆಯಿತು. ಪಂಡಿತ ಹಸಿದ ವ್ಯಕ್ತಿಯನ್ನು ಮನಸಾರೆ ಬಡಿದು ಹೊರಹಾಕಿದ. ಓಣಿಯ ಜನ ನೋಡಿ ಮಾತನಾಡಿಕೊಂಡರು, ಹೀಗೇಕೆ ಎಂದು ಗೊಣಗಿದರು. ಹಸಿದ ವ್ಯಕ್ತಿಗೆ ಆಭರಣದ ಮೇಲೆಯೂ ಆಭರಣ ಹೊತ್ತ ತನುವಿನ ಮೇಲೆಯೂ ಹಸಿವಾಗಿತ್ತು. ಈ ಎರಡೂ ಹಸಿವುಗಳನ್ನು ಪಂಡಿತ ಸಹಿಸಲಿಲ್ಲ. ಹಸಿದ ವ್ಯಕ್ತಿಗೆ ಅನ್ನ ನೀಡಿ ಪುಣ್ಯ ಕಟ್ಟಿಕೊಂಡ ಎಂದು ಹೇಳಿ ಪಂಡಿತನನ್ನು ಹೊಗಳಿದ ಜನವೂ ಸಹಿಸಲಿಲ್ಲ.

ಹಸಿದವನಿಗೆ ಅನ್ನ ನೀಡಿದರೆ ಪುಣ್ಯ ಎಂದು ಓದಿ ಕೇಳಿ ತಿಳಿದು ಕೊಂಡಿದ್ದ, ತನ್ನಂತೆ ಇರುವ ವ್ಯಕ್ತಿಗೆ ಭಿಕ್ಷುಕನೆಂದು ಅನ್ನ ನೀಡಿದ್ದ. ನೀಡಿದ ತನ್ನನ್ನು ದಾನಿ ಎಂದುಕೊಂಡಿದ್ದ. ಅನ್ನದ ಹಸಿವು ನೀಗಿಸಿದ್ದ, ಆಭರಣ ಮತ್ತು ತನುವಿನ ಹಸಿವಿನ ತೃಪ್ತಿ ಅಡಗಿಸುವುದು ಸಾಧ್ಯವಾಗಲಿಲ್ಲ.

ಅನ್ನವೂ ತನ್ನದಲ್ಲ, ಅದು ಬೆಳೆದ ಭೂಮಿಯೂ ತನ್ನದಲ್ಲ, ಭೂಮಿಯೊಳಡಗಿದ್ದ ಚಿನ್ನವೂ ತನ್ನದಲ್ಲ, ಅನ್ನ ಭೂಮಿ ಚಿನ್ನ ಹಾಗೂ ತನುವಿನ ಮೇಲೆ ಬೆಳೆದ(ವಿಷಯ)ಆಸೆಯೂ ತನ್ನದಲ್ಲ. ಇವು ಜಗಕ್ಕಿಕ್ಕಿದ ವಿಧಿ. ತನ್ನದೆಂಬುದು ಜ್ಞಾನ ರತ್ನ ಕಾಣಾ ಎಂದು ಹೇಳಿದ ಅಲ್ಲಮ ಪ್ರಭುಗಳ ಸೂತ್ರ ಪಂಡಿತನ ಅನುಭಾವಕ್ಕೆ ಬರಲಿಲ್ಲ. ವೇದಿಕೆಗೆ ಮಾತ್ರ ಬಳಕೆಯಾಗಿ ಮನ ಸಂಪನ್ನನಾದ. ಜ್ಞಾನ ಸಂಪನ್ನನಾಗಲಿಲ್ಲ.

**ಮಾನಸ ಭಕ್ತಿ ಸಂಪನ್ನರಾದಡೆ ತಾವು ನೀನಪ್ಪುದೇನರಿದು? ಕಪಿಲ ಸಿದ್ಧ ಮಲ್ಲಿಕಾರ್ಜುನಾ:**

ಅಭ್ಯಾಸ ಪಂಡಿತರು, ಓದಿ ಕೇಳಿ ನೋಡಿ ತಿಳಿದ ಅನುಭವಿಗಳು ಮನ ಮನಸಂಪನ್ನರೇ ಹೊರತು ಜ್ಞಾನ ಸಂಪನ್ನರಲ್ಲ. ಮನವೂ ತನ್ನದೇ, ಜ್ಞಾನವೂ ತನ್ನದೇ, ತನುವೂ ತನ್ನದೇ. ಮನ ಜ್ಞಾನದೆಡೆಗೆ

ವಾಲಿದರೆ ಜ್ಞಾನದ ತನು. ಮನ ವಸ್ತುವಿನೆಡೆಗೆ ವಾಲಿದರೆ ಮನದ ತನು. ಮನದ ತನುವಿಗೆ ವಸ್ತುವೇ ಪ್ರಧಾನ. ಜ್ಞಾನದ ತನುವಿಗೆ ವಸ್ತುವಿನ ಸತ್ಯವೇ ಪ್ರಧಾನ. ಮನದಿಂದ ಭಕ್ತಿ ಸಂಪನ್ನರಾದವರಿಗೆ ನಿನ್ನ (ಜ್ಞಾನ)ನ್ನು ತಿಳಿದು ನೀನಾಗಲು ಬರುವುದೇ? ಕಪಿಲ ಸಿದ್ಧ ಮಲ್ಲಿಕಾರ್ಜುನ (ಜ್ಞಾನ) ತಾನೇ ಆಗಲು ಬರುವುದೇ? ಎಂದು ಪ್ರಶ್ನಿಸುತ್ತ ಜ್ಞಾನ ತಾನಾಗುವ ಸರಳ ಮಾರ್ಗದ ಸೂತ್ರ ಹೇಳಿದ್ದಾರೆ ಸಿದ್ಧರಾಮ ಶರಣರು.

□

---

**ಅರಿವಿನ ಪರಿಮಳ :**

□ ಮನ ಜ್ಞಾನದೆಡೆಗೆ ವಾಲಿದರೆ ಜ್ಞಾನದ ತನು. ಮನ ವಸ್ತುವಿನೆಡೆಗೆ ವಾಲಿದರೆ ಮನದ ತನು. ಮನದ ತನುವಿಗೆ ವಸ್ತುವೇ ಪ್ರಧಾನ. ಜ್ಞಾನದ ತನುವಿಗೆ ವಸ್ತುವಿನ ಸತ್ಯವೇ ಪ್ರಧಾನ.

# ತನುವೆಂಬುದು ಜ್ಞಾನದ ಮಣಿ

**ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ**
**ವಿಶುದ್ಧಿ ಆಜ್ಞೆ ಎಂದೆಂಬರು.**
**ಈ ಆರಬಲ್ಲಡೆ ನೀವು ಹೇಳಿರೇ.**
**ಆದಿಯನುಳ್ಳುದೆ ಆಧಾರ ;**
**ಆಧಾರವ ಕೂಡಿಪ್ಪುದೇ ಸ್ವಾಧಿಷ್ಠಾನ;**
**ಮಣಿಯ ಬೆಳಗಿನಲ್ಲಿಪ್ಪುದೇ ಮಣಿಪೂರಕ ;**
**ಆಸೆಯಿಲ್ಲದುದೆ ಅನಾಹತ ;**
**ಅಲ್ಲ ಅಹುದೆಂಬುದನತಿಗಳೆದಿಹುದೆ ವಿಶುದ್ಧಿ ;**
**ಸರ್ವ ಜೀವಂಗಳಲ್ಲಿ ದಯವನುಳ್ಳುದೆ ಆಜ್ಞೆ ;**
**ಇಂತಪ್ಪುದೀಗ ಶಿವಯೋಗ.**
**ಉಳಿದ ಅಭ್ಯಾಸಯೋಗಿಗಳ ಕಂಡು ನಗುತಿರ್ದನಯ್ಯಾ ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .**

**-ಸಿದ್ಧರಾಮ ಶಿವಯೋಗಿ**

**ಆಧಾರ ಸ್ವಾಧಿಷ್ಠಾನ ಮಣಿಪೂರಕ ಅನಾಹತ ವಿಶುದ್ಧಿ ಆಜ್ಞೆ ಎಂದೆಂಬರು. ಈ ಆರ ಬಲ್ಲಡೆ ನೀವು ಹೇಳಿರೇ:**

ಆಂಧ್ರಪ್ರದೇಶದ ವೀರಬ್ರಹ್ಮನ್ನ ಎಂಬ ಮಹಾಸಂತರೊಬ್ಬರು ಕಾಲಜ್ಞಾನದ ವಚನಗಳನ್ನು ಬರೆದಿದ್ದಾರೆ. ಅವರು ಒಂದು ಹಳ್ಳಿಯಲ್ಲಿ ತನುವಿನಲ್ಲಿಯ ಆರು ಚಕ್ರಗಳ ಬಗ್ಗೆ ವಿವರಿಸಿ ಉಪನ್ಯಾಸ ನೀಡಿದರು. ಕೇಳಿದ ಒಬ್ಬ ಹಾದಿಯಲ್ಲಿ ಕುಡಿದು ಮನೆಗೆ ಹೋಗುತ್ತಾನೆ. ಹೆಂಡತಿ ಮಲಗಿರುತ್ತಾಳೆ. ಅವನಿಗೆ ವೀರಬ್ರಹ್ಮನ್ನ ಹೇಳಿದ ಚಕ್ರಗಳ ಬಗ್ಗೆ ನೆನಪು ಬಂದು ಕುಡುಗೋಲಿನಿಂದ ಹೆಂಡತಿಯ ತನುವನ್ನು ಆರು ಭಾಗದಲ್ಲಿ ಸೀಳುತ್ತಾ ಹೋಗುತ್ತಾನೆ. ಚಕ್ರಗಳು ಕಾಣುವುದೇ ಇಲ್ಲ. ಹೆಂಡತಿ ಸತ್ತು ಹೋಗುತ್ತಾಳೆ. ಕುಡಿದ ನಶೆ ಇಳಿದ ಮೇಲೆ ತನ್ನ ಅಪರಾಧ ಗೊತ್ತಾಗಿ ಗೋಗರೆಯುತ್ತಾನೆ. ಜನ ಸೇರುತ್ತಾರೆ.

ವೀರಬ್ರಹ್ಮನ್ನ ಗುರುಗಳು ಬಂದು ಪುನಃ ಅವನಿಗೆ ವಿವರಿಸಿದಾಗ ಜ್ಞಾನವಾಗುತ್ತದೆ. ಜ್ಞಾನಕ್ಕಾಗಿ ತನ್ನ ತನುವಿನಲ್ಲಿ ನೋಡಿಕೊಳ್ಳಬೇಕಾದ ಚಕ್ರಗಳನ್ನು ಹೆಂಡತಿಯ ತನುವಿನಲ್ಲಿ ನೋಡಹೋಗಿ ವೃಥಾ ಸತಿಯ ಪ್ರಾಣ ಕಳೆಯುತ್ತಾನೆ. ಸಿದ್ಧರಾಮ ಶರಣರು ತಮ್ಮ ವಚನದಲ್ಲಿ ತನುವಿನಲ್ಲಿರುವ ಆರು ಚಕ್ರಗಳನ್ನು ಹೀಗೆ ವಿವರಿಸಿದ್ದಾರೆ.

**ಆದಿಯನುಳ್ಳುದೆ ಆಧಾರ :**

ಜಲಬಿಂದು ಗರ್ಭ ಸೇರಿ ಪಿಂಡವಾಗಿ ಪ್ರಾಣವಾಗಿ ತನುವಾದುದೇ ಆದಿ. ಈ ಆದಿಯನುಳ್ಳದೆ ಆಧಾರ.

ಆಧಾರವೆಂಬ ತನುವಿನ ಕಣಕಣದಲ್ಲಿ ಅನಾದಿಯೆಂಬ ಮಹಾಜ್ಞಾನ ಕೂಡಿಪ್ಪುದೇ

ಸ್ವಾಧಿಷ್ಠಾನ:

ಆ ಮಹಾ ಜ್ಞಾನವೆಂಬ ಮಣಿಯ ಬೆಳಗಿನಲ್ಲಿಪ್ಪುದೇ ಮಣಿಪೂರಕ. ತನುವು ಜ್ಞಾನದ ಮಣಿಯೂ ಹೌದು. ಪ್ರತಿಯೊಂದು ವಸ್ತುವನ್ನು ಜ್ಞಾನದಿಂದ ನೋಡಿ ಮುಟ್ಟಿ, ಕೇಳಿ, ರುಚಿಸಿ, ವಾಸಿಸಿ ಪಂಚೇಂದ್ರಿಯಗಳ ಆಸೆ ಕಳೆದು ಕೊಳ್ಳುವುದೇ ಅನಾಹತ.

ಅಲ್ಲ-ಅಹುದೆನ್ನುವ ಅಜ್ಞಾನ ಕಳೆದುಕೊಳ್ಳುವುದೇ ವಿಶುದ್ಧಿ.

ಸರ್ವ ಜೀವಿಗಳು ತನ್ನಂತೆ ಪ್ರಾಣ ಉಳ್ಳವುಗಳೆಂದು ಜ್ಞಾನದಿಂದ ತಿಳಿದು ಅವುಗಳ ಮೇಲೆ ದಯೆ ತೋರುವುದೇ ಆಜ್ಞೆ. ಇದೇ ಶಿವಯೋಗ. ಈ ಆಚಾರ ಉಳ್ಳವನೇ ಶಿವಯೋಗಿ.

**ಉಳಿದ ಅಭ್ಯಾಸಯೋಗಿಗಳ ಕಂಡು ನಗುತಿರ್ದನಯ್ಯಾ ಕಪಿಲಸಿದ್ಧಮಲ್ಲಿಕಾರ್ಜುನಯ್ಯ :**

ನುರಿತ ಗುರುಗಳಿಂದ 12 ವರ್ಷಗಳವರೆಗೆ ಈ ಚಕ್ರಗಳ ಅಭ್ಯಾಸ ಮಾಡಿದರೆ ಭೂಮಿ ಬಿಟ್ಟು ತನು ಮೇಲೆ ನಿಲ್ಲುತ್ತದೆ ಎಂದು ಹೇಳುತ್ತಾರೆ. ಹಲವಾರು ಶಿಷ್ಯರು ಈ ಅಭ್ಯಾಸದಲ್ಲಿ ಸತ್ತದ್ದೂ ಉಂಟು. ಈ ಅಭ್ಯಾಸಕ್ಕಾಗಿಯೇ ಹಲವರು ಮನೆ ಬಿಡುವುದೂ ಉಂಟು.

ವಿಮಾನದಲ್ಲಿ ಕುಳಿತರೆ ಮನುಷ್ಯ ಈ ದೇಶದಿಂದ ಮತ್ತೊಂದು ದೇಶಕ್ಕೆ ಹಾರುತ್ತಾನೆ. ಅದಕ್ಕೆ ಕೆಲವು ಗಂಟೆಗಳು ಸಾಕು.

ತನುವಿನ ಮನ ಕಳೆದುಕೊಂಡು ಜ್ಞಾನ ತನುವಾಗಿಸುವುದೇ ಪ್ರಧಾನ. ಅದೇ ಶಿವಯೋಗ, ಅವನೇ ಶಿವಯೋಗಿ ಎನ್ನುತ್ತಾರೆ ಸಿದ್ಧರಾಮ ಶರಣರು.

□

# ವಸುಧೆಯೆಲ್ಲವು ಹೆಣ್ಣು ಜ್ಞಾನ ಗಂಡು

ದೆಸೆ ದಿಗ್ವಲಯದಲ್ಲಿ ಪಸರಿ ಪರ್ಬಿತ್ತು ನಿನ್ನ ನಾಮ
ವಸುಧೆಯೆಲ್ಲವು ಹೆಣ್ಣು, ನೀನು ಗಂಡು.
ಬಸವಾಕ್ಷರ ತ್ರಯದಿಂದುದ್ಭವಿಸಿ ಸಕಲ ಬ್ರಹ್ಮಾಂಡಗಳಾದವಯ್ಯಾ,
ಕಪಿಲ ಸಿದ್ಧ ಮಲ್ಲಿಕಾರ್ಜುನಾ

-ಸಿದ್ಧರಾಮ ಶಿವಯೋಗಿ

**ದೆಸೆದಿಗ್ವಲಯದಲ್ಲಿ ಪಸರಿ ಪರ್ಬಿತ್ತು ನಿನ್ನ ನಾಮ:**

ಇಡೀ ಪ್ರಪಂಚದಲ್ಲಿ ನಿನ್ನ ನಾಮ ಹಬ್ಬಿದೆ. ನಿನ್ನನ್ನು ಕುರಿತು ಹಾಡುವವರು ಅನೇಕ. ನೀನಿರುವಿ ಎಂದು ಹಾಡುವವರು ; ನೀನಿಲ್ಲವೆಂದು ಹಾಡುವವರು, ನೀನಿರುವಿ ಇಲ್ಲವೆಂದು ಹಾಡುವವರ ಸೃಷ್ಟಿಯೂ ನಿನ್ನಿಂದಲೇ. ದೇವನೆಂದು, ದೈವವೆಂದು, ಸತ್ಯ, ಚೇತನವೆಂದು, ಬೆಳಕೆಂದು, ಬಯಲೆಂದು, ಗಂಡನೆಂದು ಒಂದೇ ಎರಡೇ ಅನಂತ ಹೆಸರುಗಳಿಂದ ಅನೇಕ ಭಾಷೆಗಳಲ್ಲಿ ಕರೆದರೂ ಎಲ್ಲೆಲ್ಲೂ ನಿನ್ನ ನಾಮವೇ, ಎಲ್ಲರಲ್ಲಿಯೂ ನಿನ್ನ ನಾಮವೇ. ಧ್ವನಿಸುವ ಭಾಷೆ ವೇಷ ಹಲವಾದರೇನು; ಚರ್ಮ ಒಂದೇ, ಒಳಗಿರುವ ವಸ್ತುವೊಂದೇ, ಕೂಗಿ ಕರೆಯುವ ಶಬ್ದವೊಂದೇ ಅದರ ಭಾವವೊಂದೇ ! ಎಲ್ಲೆಲ್ಲೂ ನಿನ್ನ ನಾಮ; ದೆಸೆ ದಿಕ್ಕುಗಳಲ್ಲೂ ನಿನ್ನ ನಾಮ !

**ವಸುಧೆಯೆಲ್ಲವು ಹೆಣ್ಣು, ನೀನು ಗಂಡು :**

ಕೂಗಿ ಕರೆಯುವ ತನು ಹೆಣ್ಣು; ಅದರ ಧ್ವನಿ ಗಂಡು ! ತನುವಿನ ರೂಪ ಹೆಣ್ಣು ಅದರ ನಿರೂಪ ಗಂಡು. ನಿರೂಪವಿಲ್ಲದ ರೂಪ ಶವ. ಕಾಣುವ ನೀರು ಆವಿಯಾಗಿ ನಿನ್ನನ್ನು ಬೆರೆತಂತೆ ! ಮತ್ತೆ ನೀರಾಗಿ ಭೂಮಿಗೆ ಬಿದ್ದಂತೆ. ಬಿದ್ದ ನೀರು ಶಿವ ಜಟೆಯಲ್ಲಿ ಧರಿಸಿ ಗಂಗಾಧರನಾದಂತೆ; ಅರ್ಧ ನಾರೀಶ್ವರನಾದಂತೆ; ಸತಿ ಪತಿಗಳೊಂದಾಗಿ ಭಕ್ತಿ ಮೆರೆದಂತೆ.

ಜಲಬಿಂದು ಗರ್ಭ ಸೇರಿ ಪಾಕವಾಗಿ ಪಿಂಡವಾಗಿ ರಕ್ತ ಮೂಳೆ ಮಾಂಸ ಮಜ್ಜೆ ಮೇದಸ್ಸು ಚರ್ಮವಾಗಿ ತನುವಾದಂತೆ. ಹೀಗೆ ತನುವಾದದ್ದು ಜಲವಲ್ಲವೇ? ಈ ಜಲವನ್ನು ಜಟೆಯಲ್ಲಿ ಧರಿಸಿದವನು ಗಂಗಾಧರನಲ್ಲವೇ ? ಅರ್ಧನಾರೀಶ್ವರ ನಲ್ಲವೇ ? ಈ ಜಲರಾಶಿಯೇ ಗಟ್ಟಿಗೊಂಡು ತನುವೆಂಬ ರೂಪ ಪಡೆದು ಸತಿ ಯಾಯಿತು, ಹೆಣ್ಣಾಯಿತು. ಸತಿ ಎಂಬ ರೂಪದಲ್ಲಿ ಪತಿ ಎಂಬ ನಿರೂಪ ಬೆರೆತು ಸತಿ ಪತಿ ಒಂದಾಗಲಿಲ್ಲವೇ ? ತನುವಿನಲ್ಲಿ ಅವನು ಬೆರೆತು ಬೇರಾಗದ ಲೀಲೆಗೆ ಹಿತವಾಗಲಿಲ್ಲವೇ? ನಾನು ಹೆಣ್ಣಾದರೆ ನನ್ನಲ್ಲಿ ಬೆರೆತ ಅವನು ಗಂಡಾಗಲಿಲ್ಲವೇ ? ವಸುಧೆಯೆಲ್ಲವು ಹೆಣ್ಣು ಅವನು ಗಂಡು! 16 ಸಾವಿರ ಹೆಂಡರಿಗೆ ಶ್ರೀ ಕೃಷ್ಣನೊಬ್ಬನೇ ಗಂಡನಾಗಲಿಲ್ಲವೇ?

**ಬಸವಾಕ್ಷರ ತ್ರಯದಿಂದುದ್ಭವಿಸಿ ಸಕಲ ಬ್ರಹ್ಮಾಂಡಗಳಾದವಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ:**

ಬ್ರಹ್ಮಾಂಡವಿದ್ದರೂ ಅದೇನೆಂದು ತಿಳಿಯಲಿಲ್ಲ. ಅದರ ಹುಟ್ಟು ಸಾವುಗಳ ಪರಿಚಯವೂ ಆಗಲಿಲ್ಲ. ಅದನ್ನು ಗೆಲ್ಲಬೇಕೆಂದು ಅನೇಕ ರಾಜ ಮಹಾರಾಜರು ಯುದ್ಧ ಮಾಡಿದರು. ರಕ್ತದ

ಕಾಲುವೆ ಹರಿಸಿದರು. ಬ್ರಹ್ಮಾಂಡ ಒಲಿಯಲಿಲ್ಲ; ಅದನ್ನು ಗೆಲ್ಲಲೂ ಆಗಲಿಲ್ಲ. ಹಲವಾರು ಋಷಿ ಮುನಿಗಳು ಜೀವನ ಪರ್ಯಂತ ಜಪ ತಪ ಮಾಡಿದರೂ ಬ್ರಹ್ಮಾಂಡ ಒಲಿಯಲಿಲ್ಲ. ಅದಕ್ಕೆ ಅಧಿಪತಿಗಳಾಗಲಿಲ್ಲ.

ಕಲ್ಯಾಣದಲ್ಲಿ ಸಕಲ ಶರಣರಿಗೆ ಬಸವಣ್ಣನವರು ಬ್ರಹ್ಮಾಂಡದ ಪರಿಚಯವನ್ನು ಸರಳವಾಗಿ ತಮ್ಮ ತಮ್ಮ ತನುಗಳಲ್ಲಿಯೇ ಮಾಡಿಸಿಕೊಟ್ಟರು. ಹೆಣ್ಣು ಗಂಡೆಂಬ ಭ್ರಮೆ ಕಳೆದರು, ಜಾತಿಮತ ಪಂಥವೆಂಬ ಭ್ರಮೆ ಕಳೆದರು, ಬಡವ ಶ್ರೀಮಂತ, ರಾಜ ಕಾಲಾಳು ಎಂಬ ಭ್ರಮೆ ಕಳೆದರು. ದೇಶ ಕೋಶ ಭೂಮಿ ಎಂಬ ಭ್ರಮೆ ಕಳೆದರು. ನೆಲವೊಂದೆ ಹೊಲೆಗೇರಿ ಶಿವಾಲಯಕ್ಕೆ ಜಲವೊಂದೆ ಶೌಚಾಚಮನಕ್ಕೆ ಎಂಬ ಅರಿವು ತನುವಿನಲ್ಲಿ ಮೂಡಿಸಿದರು. ಭ್ರಮೆ ಕಳೆದುಕೊಂಡ ತನುವೇ ಬ್ರಹ್ಮವಾಯಿತು. ಬ್ರಹ್ಮಾಂಡವಾಯಿತು ಎಂದು ಸಿದ್ದರಾಮ ಶರಣರು ಬಸವಣ್ಣನಲ್ಲಿ ಕಪಿಲ ಸಿದ್ಧ ಮಲ್ಲಿಕಾರ್ಜುನನ್ನೇ ಕಂಡಿದ್ದಾರೆ.

□

---

**ಅರಿವಿನ ಪರಿಮಳ :**

□ ಕೂಗಿ ಕರೆಯುವ ತನು ಹೆಣ್ಣು; ಅದರ ಧ್ವನಿ ಗಂಡು ! ತನುವಿನ ರೂಪ ಹೆಣ್ಣು ಅದರ ನಿರೂಪ ಗಂಡು.

□ ಕಾಣುವ ನೀರು ಆವಿಯಾಗಿ ನಿನ್ನನ್ನು ಬೆರೆತಂತೆ ! ಮತ್ತೆ ನೀರಾಗಿ ಭೂಮಿಗೆ ಬಿದ್ದಂತೆ.

□ ಭ್ರಮೆ ಕಳೆದುಕೊಂಡ ತನುವೇ ಬ್ರಹ್ಮವಾಯಿತು. ಬ್ರಹ್ಮಾಂಡವಾಯಿತು

# ಅದಿರು ಕದ್ದ ಕಳ್ಳ, ಜ್ಞಾನ ಕದ್ದ ಕಳ್ಳ

**ಕ್ರಿಯೆ ಎಂಬುದು ಪಿಪೀಲಿಕನ ಗುಣ.**
**ಜ್ಞಾನವೆಂಬುದು ವಿಹಂಗದ ಗುಣ.**
**ಮೆಲ್ಲಮೆಲ್ಲನೆ ತಿಳಿದಲ್ಲಿ ಕ್ರಿಯೆ ಎನಿಸಿತ್ತು ;**
**ಏಕಕಾಲಕ್ಕಳವಟ್ಟಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ ಮನೆಯ**
**ಸೂರೆಗೊಂಬ ತಸ್ಕರಜ್ಞಾನವೆನಿಸಿತ್ತು , ಮರುಳಶಂಕರಯ್ಯಾ .**

**– ಸಿದ್ಧರಾಮ ಶಿವಯೋಗಿ**

**ಕ್ರಿಯೆ ಎಂಬುದು ಪಿಪೀಲಿಕನ ಗುಣ. ಜ್ಞಾನವೆಂಬುದು ವಿಹಂಗದ ಗುಣ:**

ಮರದಲ್ಲಿಯ ಹಣ್ಣು ಪಕ್ಷಿಯ ವಾಸನೆ ಮತ್ತು ನೋಟಕ್ಕೆ ಗುರಿಯಾಗಿ ಕ್ಷಣಾರ್ಧದಲ್ಲಿ ಹಾರಿ ಹಣ್ಣು ತಿಂದು ಸಂತೋಷ ಪಡೆಯಿತು. ಇದು ಜ್ಞಾನ ಮಾರ್ಗ. ವಿಹಂಗದ ಪಕ್ಷಿ ಗುಣ.

ಮರದಲ್ಲಿಯ ಹಣ್ಣು ಇರುವೆಯ ವಾಸನೆಗೆ ಗುರಿಯಾಗಿ ಏರಿಳಿತಗಳಿಗೆ ಸಿಕ್ಕು ಮೆಲ್ಲಮೆಲ್ಲನೆ ಹತ್ತಿ ಪಡೆಯಿತು. ಇದು ಪಿಪೀಲಿಕನ (ಇರುವೆ) ಗುಣ. ಕ್ರಿಯಾ ಮಾರ್ಗ.

ಮನುಷ್ಯ ಗುರಿ ಮುಟ್ಟಿ ನಿರಂತರ ಸುಖ ಪಡುವುದಕ್ಕಾಗಿ ಎರಡು ಮಾರ್ಗಗಳನ್ನು ಆಯ್ಕೆ ಮಾಡಿಕೊಂಡಿದ್ದಾನೆ.

ಸ್ನಾನ ಪೂಜೆ ಭಜನೆ ಅರ್ಚನೆ; ಮಡಿ ಮಾಡುವುದು, ದೇವರನ್ನು ಅರ್ಚಿಸಿ, ಪೂಜಿಸಿ, ಭಜಿಸುವುದು. ತಾನು ತಿನ್ನುವ ಪದಾರ್ಥಗಳನ್ನು (ಹೋಳಿಗೆ ಮಾಂಸ ಮದ್ಯ) ದೇವರ ಮುಂದಿಟ್ಟು ನೈವೇದ್ಯ ಮಾಡಿ ತಿನ್ನುವುದು. ಕೆಲಸಕ್ಕೆ ಹೋಗುವುದು. ಕೆಲಸದಲ್ಲಿ ಅತಿ ಲಾಭ ಬಂದರೆ ತಾನು ಪೂಜಿಸುವ ದೇವರಿಗೆ ದೇವಸ್ಥಾನ ಕಟ್ಟುವುದು. ಉಡುಗೆ ತೊಡುಗೆಗಳನ್ನು ನೀಡುವುದು. ಚಿನ್ನ ಕಳಸ, ಬೆಳ್ಳಿ ಪಾದುಕೆಗಳನ್ನು ಮಾಡಿಸಿ ವಜ್ರದ ಕಿರೀಟವಿಟ್ಟು ಸಂಭ್ರಮ ಪಡುವುದು.

ಕುಂಕುಮಾರ್ಚನೆ, ಪುಷ್ಪಾರ್ಚನೆ, ಬಿಲ್ವಾರ್ಚನೆಯಿಂದ ದೇವರನ್ನು ಪೂಜಿಸಿ, ಛತ್ರಿ ಚಾಮರಗಳನ್ನು ಬೀಸಿ, ನಾನಾ ರೀತಿಯ ವಾಹನಗಳಿಂದ ಮೆರವಣಿಗೆ ಮಾಡುವುದು, ಮಾಂಗಲ್ಯ ತಂದು ದೇವರಿಗೆ ಮದುವೆ ಮಾಡಿ ಶಯನ ಗೃಹಕ್ಕೆ ಕಳುಹಿಸಿ ಶೋಬಾನೆ ಪದ ಹಾಡುವುದು.

ದೇವರನ್ನು ಪೂಜಿಸುವ ನೆಪದಲ್ಲಿ ಅನ್ನದಾನ ಮಾಡುವುದು, ಉಚಿತ ಮದುವೆಗಳನ್ನು ಮಾಡುವುದು. ಬೆಳ್ಳಿ ಚಿನ್ನದ ರಥಗಳನ್ನು ಎಳೆದು ಪ್ರದಕ್ಷಿಣೆ ಹಾಕುವುದು. ಯಾಕೆ ಹೀಗೆ ಮಾಡುತ್ತೇನೆ ಎನ್ನುವುದನ್ನು ಮರೆತು ಜೀವನ ಪರ್ಯಂತ ಮಾಡುವುದು ಪೂಜಿಸುವುದು. ಇದೊಂದು ರೀತಿಯ ಕ್ರಿಯಾ ವಿಧಾನ.

ಮೃತ್ಯುಂಜಯ ಜಪ, ಗಾಯತ್ರಿ ಜಪ ಹೀಗೆ ಅನೇಕ ಜಪಗಳನ್ನು ಜಪಿಸಿ ಸಂಧ್ಯಾ ವಂದನೆಗಳನ್ನು ಮಾಡುವುದು. ಹಿಮಾಲಯ ಹರಿದ್ವಾರ ಕೇದಾರಗಳಿಗೆ ಹೋಗುವುದು. ಯೋಗಾಸನಗಳನ್ನು ಮಾಡಿ ಉಸಿರಾಟದ ನಾನಾ ಕ್ರಿಯೆಗಳಲ್ಲಿ ತೊಡಗುವುದು. ಇದೊಂದು ರೀತಿಯ ಕ್ರಿಯಾ ವಿಧಾನ.

ಒಬ್ಬ ಸಚಿವ ಸಾವಿರಾರು ಕೋಟಿ ರೂಪಾಯಿಗಳ ಅದಿರು ಮಾರಿದ, ಬಂದ ಲಾಭದಿಂದ

ವೆಂಕಟೇಶನಿಗೆ 40 ಕೋಟಿ ರೂ.ಗಳ ಚಿನ್ನದ ಕಿರೀಟ ಮಾಡಿಸಿದ.

ಜನ ಸಚಿವನನ್ನು ಹೊಗಳಿದರು. ಮನ ತನುವನ್ನು ಖುಷಿ ಪಡಿಸಿತು. ಅಕ್ರಮ ಅದಿರು ಮಾರಿ ಸಿಕ್ಕಿ ಬಿದ್ದಾಗ ಜನ ಸಚಿವನನ್ನು ಉಗುಳಿದರು. ಮನ ತನುವನ್ನು ದುಃಖ ಪಡಿಸಿತು. ಇವೆರಡೂ ಕ್ರಿಯೆಗಳಿಗೆ ಕಾರಣವಾದ ಮನ ಸೇಫ್. ಇವೆರಡೂ ಕ್ರಿಯೆಗಳನ್ನು ಸಾಕ್ಷಿಯಾಗಿ ನೋಡುವ ಜ್ಞಾನವೂ ಸೇಫ್. ಇವೆರಡೂ ಕ್ರಿಯೆಗಳಿಗೆ ಮುನ್ನ ಜ್ಞಾನ ಬಳಕೆಯಾಗಿದ್ದರೆ ತನು ಸೇಫಾಗಿ ಉಳಿಯುತ್ತಿತ್ತು. ಅದಿರು ಮಾರುತ್ತಿರಲಿಲ್ಲ; ಕಿರೀಟ ಕೊಡುತ್ತಿರಲಿಲ್ಲ. ಎರಡೂ ಕ್ರಿಯೆಗಳನ್ನು ಸಾಕ್ಷಿಯಾಗಿ ನೋಡುತ್ತಿದ್ದ ತನುವಿನ ಮನ ಯಾವ ಸಂಕಟಕ್ಕೂ ಗುರಿಯಾಗದೆ ಜ್ಞಾನದಲ್ಲಿ ಸಿಲುಕಿ ಜ್ಞಾನ ತನುವಾಗುತ್ತಿತ್ತು.

**ಮೆಲ್ಲಮೆಲ್ಲನೆ ತಿಳಿದಲ್ಲಿ ಕ್ರಿಯೆ ಎನಿಸಿತ್ತು ; ಏಕಕಾಲಕ್ಕಳವಟ್ಟಲ್ಲಿ ಕಪಿಲಸಿದ್ಧ ಮಲ್ಲಿಕಾರ್ಜುನನ ಮನೆಯ ಸೂರೆಗೊಂಬ ತಸ್ಕರ ಜ್ಞಾನವೆನಿಸಿತ್ತು. ಮರುಳ ಶಂಕರಯ್ಯಾ**

ಮೆಲ್ಲಮೆಲ್ಲನೆ ತಿಳಿಯುವ ಕ್ರಿಯೆಯಿಂದ ತಿಳಿದರೆ ತಿಳಿಯುತ್ತದೆ ; ಇಲ್ಲದಿದ್ದರೆ ಇಲ್ಲ. ಮಣ್ಣು ಅಗೆದು ಅದಿರು ಮಾರಿ ಚಿನ್ನ ಗಳಿಸುವ ಕ್ರಿಯೆಯಲ್ಲಿ ಮನಕ್ಕೂ ಸುಖವಿದೆ. ಜ್ಞಾನದ ತನುವನ್ನು ಮನ ದುರ್ಬಳಕೆ ಮಾಡಿಕೊಂಡು ಅಜ್ಞಾನದ ಕ್ರಿಯೆಗಳಲ್ಲಿ ತೊಡಗಿಸುತ್ತದೆ. ಅದಿರು ಮತ್ತು ಚಿನ್ನ ನೋಡುವ ಮನ ಒಮ್ಮೆ ಜ್ಞಾನದೆಡೆಗೆ ವಾಲಿದರೆ ಸಾಕು ಎರಡೂ ಅದಿರುಗಳೇ. ಒಂದು ಕಪ್ಪು ಅದಿರು ಮತ್ತೊಂದು ಹಳದಿ ಅದಿರು !

ಹೇರಳವಾದ ಕಪ್ಪು ಅದಿರು ಮಾರಿ ವಿರಳವಾದ ಹಳದಿ ಅದಿರು ಕೊಳ್ಳುವುದು, ಅದಿರಿನಿಂದಲೇ ಕೀರಿಟ ಮಾಡಿಸಿ ಕಲ್ಲಿನ ಮೂರ್ತಿಗೆ ಧರಿಸಿ ದೇವರೆಂದು ಆರಾಧಿಸಿ ಸಂತೋಷಪಡುವುದು. ಜನರಿಂದ ಮೆಚ್ಚುಗೆ ಗಳಿಸುವುದು. ಹಗಲಿರುಳೂ ಅದಿರಿಗಾಗಿ ಬಡಿದಾಡಿ ತನ್ನಂತೆ ಇರುವ ಚೇತನಗಳನ್ನು ಕೊಲೆ ಮಾಡುವುದು. ರಾಜ ಕಿರೀಟದ ಆಸೆಗಾಗಿ ತನ್ನಂತೆ ಇರುವ ಮತ್ತೊಬ್ಬ ರಾಜನನ್ನು ಕೊಂದಂತೆ. ಪ್ರಧಾನಿ, ಸೇನಾಧಿಪತಿ ಸೈನಿಕರನ್ನು ತನಗಾಗಿ ತನ್ನ ಸುಖಕ್ಕಾಗಿ ಬಲಿ ತೆಗೆದು ಕೊಂಡಂತೆ.

ಹೀಗೆ ಜ್ಞಾನತನುವನ್ನೇ ಅಸ್ತ್ರ ಮಾಡಿಕೊಂಡ ಮನವೆಂಬ ಕಳ್ಳನಿಗೆ ಕ್ರಿಯೆಯ ಮೂಲಕ ಮೆಲ್ಲಮೆಲ್ಲನೆ ಜ್ಞಾನಕ್ಕೆ ಹೋಗುವುದು ಸಾಧ್ಯವಾಗುವುದೇ ಇಲ್ಲ. ಏಕೆಂದರೆ ಮಾಡುವ ಕ್ರಿಯೆಗಳೆಲ್ಲ ತನುವಿನ ಮನದಿಂದಲೇ ಸೃಷ್ಠಿಯಾಗಿವೆ. ಜ್ಞಾನವೂ ತನುವಿನಲ್ಲಿಯೇ ಇದೆ. ಹೊರ ಕ್ರಿಯೆಗಳಲ್ಲಿ ಭಾಗಿಯಾದ ಮನವೆಂಬ ಕಳ್ಳ (ಕಪಿಲಸಿದ್ಧ ಮಲ್ಲಿಕಾರ್ಜುನನ ಮನೆಯ) ತನ್ನ ತನುವಿನ ಜ್ಞಾನಕ್ಕೆ ಸೂರೆಗೊಂಡರೆ ತಸ್ಕರ ಜ್ಞಾನವೆನಿಸಿತ್ತು ಎನ್ನುತ್ತಾರೆ ಸಿದ್ಧರಾಮ ಶರಣರು. ವಸ್ತುಗಳನ್ನು ಕದಿಯುವ (ತಸ್ಕರ)ಕಳ್ಳ ತನುವಿನ ಜ್ಞಾನ ಕದಿಯಲು ಹೋಗಿ ಆ ಜ್ಞಾನವೇ ತಾನಾಗುತ್ತಾನೆ. ತನುವಿನ ಜ್ಞಾನ ಏಕಕಾಲಕ್ಕೆ ತತಕ್ಷಣ ಅಳವಟ್ಟು ಕಪ್ಪು ಅದಿರೂ ಅದಿರೇ. ಹಳದಿ ಅದಿರೂ ಅದಿರೇ ಆಗಿ ಕಂಡು ಎರಡನ್ನೂ ಮುಟ್ಟದೇ ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ. ಮೆಲ್ಲಮೆಲ್ಲನೆ ತಿಳಿಯುವ ಕ್ರಿಯೆಗೆ ಕತ್ತರಿ ಬಿದ್ದು ಕೂಡಲೇ ತಿಳಿದು ಜ್ಞಾನಿಯಾಗುತ್ತಾನೆ.

□

---

**ಅರಿವಿನ ಪರಿಮಳ :**

□ ರಾಜ ಕಿರೀಟದ ಆಸೆಗಾಗಿ ತನ್ನಂತೆ ಇರುವ ಮತ್ತೊಬ್ಬ ರಾಜನನ್ನು ಕೊಂದಂತೆ. ಪ್ರಧಾನಿ, ಸೇನಾಧಿಪತಿ ಸೈನಿಕರನ್ನು ತನಗಾಗಿ ತನ್ನ ಸುಖಕ್ಕಾಗಿ ಬಲಿ ತೆಗೆದು ಕೊಂಡಂತೆ.

# ಕಲ್ಪನೆ ಎಂಬುದು ಅಜ್ಞಾನ, ವಸ್ತುವೆಂಬುದೆ ಜ್ಞಾನ

**ವಸ್ತು ಒಂದರಲ್ಲಿ ಕಲ್ಪಿತದ್ವಯವಾದುವು ನೋಡಾ.**
**ಹಗ್ಗವಲ್ಲ ಸರ್ಪವೆಂಬುದೆ ಅಧ್ಯಾರೋಪ;**
**ಸರ್ಪವಲ್ಲ ಹಗ್ಗವೆಂಬುದೆ ಅಪವಾದ.**
**ವಸ್ತುವಲ್ಲ ಮಾಯೆಯೆಂಬುದೆ ಅವಿದ್ಯೆ ;**
**ಮಾಯೆಯಲ್ಲ ವಸ್ತುವೆಂಬುದೆ ವಿದ್ಯೆಯಯ್ಯಾ ,**
**ಕಪಿಲಸಿದ್ಧ ಮಲ್ಲಿಕಾರ್ಜುನಾ.**

**- ಸಿದ್ಧರಾಮ ಶಿವಯೋಗಿ**

ಕಣ್ಣು ಕಂಡರೂ ವಸ್ತುವಿನ ನಿಜರೂಪ ಅರಿಯದ ಕುರುಡುತನ ಮನುಷ್ಯನಲ್ಲಿ ನಿರ್ಮಾಣವಾಗಿದೆ. ಒಂದೆಡೆ ವಿಜ್ಞಾನ ಮತ್ತೊಂದೆಡೆ ಮೌಢ್ಯ ಇವೆರಡೂ ಆವರಿಸಿಕೊಂಡಿವೆ. ಮನುಷ್ಯ ಜ್ಞಾನಿಯಾದರೂ ವಸ್ತುವಿನ ಸತ್ಯ ತಿಳಿಯಲು ಎಷ್ಟೊಂದು ಗ್ರಂಥಗಳನ್ನು ಓದುತ್ತಾನೆ. ಆದರೂ ವಸ್ತುವಿನ ಸತ್ಯ ನಿಲುಕುವುದೇ ಇಲ್ಲ. ಓದಿದ ಗ್ರಂಥಗಳು ಕೇಳಿದ ಪ್ರವಚನಗಳು ಕಣ್ಣಿನ ಪೊರೆ ಹರಿಯಲಾರವೆಂದು ನಿರ್ಧರಿಸಲು ಇನ್ನೂ ಸಾಧ್ಯವಾಗಿಲ್ಲ.

ಸಿದ್ಧರಾಮ ಶರಣರು ವಸ್ತುವಿನ ಸತ್ಯ ತಿಳಿಯಲು ಒಂದು ಚಿಕ್ಕ ಸೂತ್ರವನ್ನು ಐದು ಸಾಲುಗಳಲ್ಲಿ ಬಂಧಿಸಿದ್ದಾರೆ.

**ವಸ್ತು ಒಂದರಲ್ಲಿ ಕಲ್ಪಿತದ್ವಯವಾದುವು ನೋಡಾ:**

ಭೂಮಿ ಅಗೆದಾಗ ಲೋಹ ದೊರೆಯಿತು. ಆದನ್ನು ಆಯಾ ಬಣ್ಣದಿಂದ ಗುರುತಿಸಿ ಹೆಸರಿಡಲಾಯಿತು. ಲೋಹ ಒಂದೇ ಆದರೂ ಅದಕ್ಕೆ ಚಿನ್ನ ಎನ್ನುವ ಹೆಸರು ಸೇರಿ ಲೋಹ ಇಲ್ಲವಾಯಿತು. ಲೋಹ, ಬಣ್ಣ ಅದರ ಮಾಟದಿಂದ ಕಣ್ಣಿನಲ್ಲಿ ತನಗೆ ತಿಳಿಯದ ಪೊರೆ ನಿರ್ಮಾಣವಾಯಿತು. ವಸ್ತುವಿನಲ್ಲಿಯ ಕಲ್ಪನೆಗೆ ಬಲ ಬಂತು. ಚಿನ್ನಕ್ಕಾಗಿ ಯುದ್ಧಗಳಾದವು. ರಾಜ ಮಹಾರಾಜರು ಸತ್ತರು. ರಕ್ತದ ಕಾಲುವೆ ಹರಿಯಿತು. ತಾಯಿ ಮಗನನ್ನು ಗಂಡ ಹೆಂಡತಿಯನ್ನು ಕೊಲ್ಲುವುದಕ್ಕೆ ಹೇಸಲಿಲ್ಲ. ವಿಜ್ಞಾನದ ಯುಗದಲ್ಲಿಯೂ ವಸ್ತುವು ವಸ್ತುವಾಗಿ ಉಳಿಯಲಿಲ್ಲ. ಚಿನ್ನದ ಕಲ್ಪನೆಗೆ ಅಧಿಕ ಬಲ ಬಂದು,ಲೋಹವೆಂಬ ಸತ್ಯ ಗೌಣವಾಯಿತು.

ಕಲ್ಲು ಎನ್ನುವ ವಸ್ತು ಕೂಡಾ ಒಂದೇ; ಕಟೆದು ಕಟ್ಟಿದರೆ ಕಟ್ಟಡವಾಯಿತು. ಮಸೀದಿ ಮಂದಿರ ಚರ್ಚಾಯಿತು. ಕೆತ್ತಿದರೆ ಬಸವ ಬುದ್ಧ ಅಂಬೇಡ್ಕರ್ ಗಾಂಧಿ ವೆಂಕಟರಮಣ ಏಸುವಾಯಿತು. ರಾಘವೇಂದ್ರ ಸ್ವಾಮಿಯಾಯಿತು. ಮಂದಿರ, ಪೂಜೆ , ಜಾತ್ರೆ , ಸರ್ಕಲ್‌ಗಳು ನಿರ್ಮಾಣವಾದವು. ದೇವರು ಎಂಬ ಕಲ್ಪನೆಗೆ ಬಲ ಬಂದು ಕಲ್ಲು ಗೌಣವಾಯಿತು.

**ಹಗ್ಗವಲ್ಲ ಸರ್ಪವೆಂಬುದೆ ಅಧ್ಯಾರೋಪ;ಸರ್ಪವಲ್ಲ ಹಗ್ಗವೆಂಬುದೆ ಅಪವಾದ.**

ಸಂಜೆ ಕತ್ತಲ ಪ್ರಯಾಣದಲ್ಲಿ ಎಲ್ಲರ ಕಣ್ಣಿಗೂ ಹಾವು ಕಂಡಿತು. ಕಚ್ಚಿದರೆ ಸಾಯುವ ಭಯ ಭ್ರಮೆಯಾಗಿ ಪರಿವರ್ತನೆಯಾಯಿತು. ಒಬ್ಬ ಹಾವಿನ ಮೇಲೆ ಬೆಳಕು ಚೆಲ್ಲಿದ. ಬೆಳಕಿನಲ್ಲಿ ಹಾವು ಹಗ್ಗವಾಯಿತು. ಮತ್ತೆ ಭಯವಾಗಲಿಲ್ಲ. ಹಾವಿನ ಭ್ರಮೆ ದೂರವಾಯಿತು. ವಸ್ತುವಿನ ಸತ್ಯ

ಗೋಚರವಾಯಿತು. ಹಾವಿನ ಮೇಲೆ ಬಿದ್ದ ಬ್ಯಾಟರಿ ಬೆಳಕಿನಂತೆ; ವಸ್ತುವಿನ ಮೇಲೆ ಕಣ್ಣಿನ ಬೆಳಕು ಬಿದ್ದರೆ ಕಲ್ಪನೆ ಎಂಬ ಭ್ರಮೆ ಹರಿಯುತ್ತದೆ. ವಸ್ತು ಮಾತ್ರ ಉಳಿಯುತ್ತದೆ.

**ವಸ್ತುವಲ್ಲ ಮಾಯೆಯೆಂಬುದೆ ಅವಿದ್ಯೆ ;ಮಾಯೆಯಲ್ಲ**
**ವಸ್ತುವೆಂಬುದೆ ವಿದ್ಯೆಯಯ್ಯಾ :**

ದೇಹವೊಂದೆ ದೇಹದಲ್ಲಿರುವ ವಸ್ತುಗಳೊಂದೆ ಆಹಾರ ನಿದ್ರೆ ಭಯ ಮೈಥುನ ಜ್ಞಾನವೊಂದೆ. ಆದರೂ ಹೆಣ್ಣು ಗಂಡು ಜಾತಿ ಮತ ಪಂಥ ದೇಶ ಭಾಷೆ ಶ್ರೀಮಂತ ಬಡವ ಪಂಡಿತ ಅಜ್ಞಾನಿ ಗುರು ಶಿಷ್ಯ ಎನ್ನುವ ಭೇದ ಜ್ಞಾನವಾಯಿತು. ಸತ್ಯ ನೋಡಲಿಲ್ಲ. ರೂಪಕ್ಕೆ ಮರುಳಾಯಿತು. ಜಾತಿ-ಮತ ಪಂಥಕ್ಕೆ ಮರುಳಾಯಿತು. ಕಣ್ಣಿನಲ್ಲಿ ಉಂಟಾದ ಪೊರೆಗೆ ಮಾಯೆ ಅವಿದ್ಯೆ ಎಂದರು. ಈ ಅವಿದ್ಯೆ ಕಳೆಯಲು ಅನೇಕ ಗ್ರಂಥಗಳು ಹುಟ್ಟಿದವು. ಬರೆದವನು ಪೂಜ್ಯನಾದ, ಗ್ರಂಥಗಳು ಶ್ರೇಷ್ಠವಾದವು.

**ಅರಿವಿನ ಪರಿಮಳ :**

- ಭೂಮಿ ಅಗೆದಾಗ ಲೋಹ ದೊರೆಯಿತು. ಆದನ್ನು ಆಯಾ ಬಣ್ಣದಿಂದ ಗುರುತಿಸಿ ಹೆಸರಿಡಲಾಯಿತು. ಲೋಹ ಒಂದೇ ಆದರೂ ಅದಕ್ಕೆ ಚಿನ್ನ ಎನ್ನುವ ಹೆಸರು ಸೇರಿ ಲೋಹ ಇಲ್ಲವಾಯಿತು. ಲೋಹ, ಬಣ್ಣ ಅದರ ಮಾಟದಿಂದ ಕಣ್ಣಿನಲ್ಲಿ ತನಗೆ ತಿಳಿಯದ ಪೊರೆ ನಿರ್ಮಾಣವಾಯಿತು.
- ಕಲ್ಲು ಎನ್ನುವ ವಸ್ತು ಕೂಡಾ ಒಂದೇ; ಕಟೆದು ಕಟ್ಟಿದರೆ ಕಟ್ಟಡವಾಯಿತು. ಮಸೀದಿ ಮಂದಿರ ಚರ್ಚಾಯಿತು. ಕೆತ್ತಿದರೆ ಬಸವ ಬುದ್ಧ ಅಂಬೇಡ್ಕರ್ ಗಾಂಧಿ ವೆಂಕಟರಮಣ ಏಸುವಾಯಿತು. ರಾಘವೇಂದ್ರ ಸ್ವಾಮಿಯಾಯಿತು. ಮಂದಿರ, ಪೂಜೆ , ಜಾತ್ರೆ, ಸರ್ಕಲ್‌ಗಳು ನಿರ್ಮಾಣವಾದವು. ದೇವರು ಎಂಬ ಕಲ್ಪನೆಗೆ ಬಲ ಬಂದು ಕಲ್ಲು ಗೌಣವಾಯಿತು.

# ಮನೆಯೊಳಗೊಬ್ಬರಿದ್ದಡೂ ಸೈರಿಸದ ಅರಿವಿನ ನಲ್ಲ

**ಎಮ್ಮ ನಲ್ಲ ಮನೆಯೊಳಗೆ ಏಕಾಂತಂಬೊಕ್ಕಹನು**
**ಬೇಗ ಬೇಗ ಹೊರಹೊಂಡಿಹರಣ್ಣಗಳಿರಾ.**
**ನೀವಿದ್ದಡೆ ಮೃತ್ಯು ಬಪ್ಪುದು ;**
**ಆತ ಮನೆಯೊಳಗೊಬ್ಬರಿದ್ದಡೂ ಸೈರಿಸ**
**ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ನಲ್ಲನು.**

**- ಸಿದ್ಧರಾಮ ಶಿವಯೋಗಿ**

**ಎಮ್ಮ ನಲ್ಲ ಮನೆಯೊಳಗೆ ಏಕಾಂತಂಬೊಕ್ಕಹನು :**

ದೇಹವೆಂಬುದು ಒಂದು ಸುಂದರ ಮನೆ. ಅದು ದೇವಾಲಯವೂ ಹೌದು. ಆ ದೇವಾಲಯದ ಒಡೆಯ ಅರಿವಿನ ದೇವರು. ಆ ದೇವರಿಗೆ ಸಿದ್ಧರಾಮ ಶರಣರು ಕಪಿಲಸಿದ್ಧ ಮಲ್ಲಿಕಾರ್ಜುನ ಎಂದು ನಾಮಕರಣ ಮಾಡಿದರು. ಶರಣರು ಹೆಂಡತಿಯಾದರು; ಕಪಿಲಸಿದ್ಧ ಮಲ್ಲಿಕಾರ್ಜುನ ಗಂಡನಾದ. ಹೆಂಡತಿಗೆ ನೆಂಟರು ಜಾಸ್ತಿ. ತವರಿನ ನಂಟರು ಗಂಡನ ಮನೆಗೂ ಬಂದರು. ಗಂಡನ ಮನೆಯಲ್ಲೇ ಬೀಡು ಬಿಟ್ಟರು. ಗಂಡ ಹೆಂಡಿರನ್ನು ಕೂಡಲೂ ಬಿಡುತ್ತಿಲ್ಲ. ಹೆಂಡತಿಗೆ ಗಂಡನನ್ನು ಸೇರುವ ಬಯಕೆ. ನಂಟರಿಗೆ ಆಕೆಯನ್ನು ತಮ್ಮೊಂದಿಗೆ ಕರೆದುಕೊಂಡು ಹೋಗುವ ಬಯಕೆ.

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಮತ್ತು ಇವರಿಗೆ ಸಂಬಂಧಿಸಿದವರೆಲ್ಲ ನೆಂಟರೆ. ಹೆಂಡತಿಯ ಸಂಸಾರ ಕೆಡಿಸುವುದೇ ನೆಂಟರ ಗುರಿ. ಒಮ್ಮೆ ನೆಂಟರನ್ನು ಕೊಡವಿ ಗಂಡನ ತೋಳ್ತೆಕ್ಕೆಯಲ್ಲಿ ಬಿದ್ದರೆ ಸಾಕು. ಗಂಡನ ಒಂದೇ ಒಂದು ನೋಟಕ್ಕೆ ಹೆಂಡತಿಯ ನೆಂಟರೆಲ್ಲ ಸುಟ್ಟು ಬೂದಿಯಾಗುತ್ತಾರೆ. ಆದರೆ ಹೆಂಡತಿಗೆ ನೆಂಟರನ್ನು ಕೊಡವಲು ಸಾಧ್ಯವಾಗುವುದೇ ಇಲ್ಲ. ನೆಂಟರಿದ್ದ ಹೆಂಡತಿಯನ್ನು ಕೂಡವ ಬಯಕೆ ಗಂಡನಿಗೆ ಆಗುವುದೇ ಇಲ್ಲ. ನೆಂಟರಿದ್ದ ಹೆಂಡತಿ ಗರತಿಯಲ್ಲ. ಗರತಿಯಾದರೆ ಕೊಡವಿ ಗಂಡನನ್ನು ಕೂಡುತ್ತಾಳೆ. ಕೂಡಿದ ಆನಂದ ಪರಮಾನಂದ. ನದಿ ಸಮುದ್ರ ಸೇರಿದಂತೆ. ಹೂವಿನೊಳಗೆ ಮಕರಂದ ಬೆರೆತಂತೆ. ಸಸಿಯ ಮೇಲೆ ಸಾಗರವೇ ಹರಿದಂತೆ. ಸಾಗರ ಆವಿಯಾಗಿ ಹನಿಯಾಗಿ ಸಸಿಯ ಮೇಲೆ ಸುರಿದಂತೆ. ಬೆಳಕು ಕತ್ತಲು ಕೂಡಿ ಬೆಳಕೇ ಆದಂತೆ. ಗಂಡ ಬೆಂಕಿಯಾದರೆ ಹೆಂಡತಿ ಕಟ್ಟಿಗೆ; ಬೆಂಕಿ ಕೂಡಿದ ಕಟ್ಟಿಗೆಯೂ ಬೆಂಕಿಯೇ. ಬೆಂಕಿಯ ಸಮೀಪ ನೆಂಟರು ಬಂದರೆ ಅವರು ಕೂಡಾ ಸುಟ್ಟು ಬೂದಿಯೇ ಆಗುತ್ತಾರೆ.

ದೇಹವೆಂಬುದು ಜ್ಞಾನದ ಮನೆ. ಜ್ಞಾನವೆ (ಅರಿವು) ಮನೆಯ ಒಡೆಯ. ಮನವೇ ಹೆಂಡತಿ. ಮನಕ್ಕೆ ಕುಡಿಯುವ ಬಯಕೆಯಾದರೆ ದೇಹವನ್ನು ಕರೆದೊಯ್ದು ಕುಡಿಸುತ್ತದೆ. ಕಳುವಿನ ಬಯಕೆಯಾದರೆ ದೇಹದೊಂದಿಗೆ ಕಳುವು ಮಾಡುತ್ತದೆ.ಹಾದರದ ಬಯಕೆಯಾದರೆ ದೇಹದೊಂದಿಗೆ ಹಾದರ ಮಾಡುತ್ತದೆ. ಅರಿವು ತಿಳಿ ಹೇಳಿದರೂ ಮನ ಕೇಳುವುದಿಲ್ಲ. ಅರಿವಿನ ಮನೆಯೊಂದಿಗೆ ಮನದ ಪಯಣ. ಕುಡಿತ ಜೂಜು ಹಾದರ ಕಳುವು ಜಗಳದಲ್ಲಿ ಅರಿವು ಭಾಗಿಯಲ್ಲ. ಅರಿವಿನ ಪಾಠ ಮನಕ್ಕೆ ಮುಟ್ಟುವುದಿಲ್ಲ. ಅರಿವಿನ ದೇಹದೊಂದಿಗೆ ಮನ ಎಂಜಾಯ್ ಮಾಡಿ ಸುಖಿಸುತ್ತದೆ. ಜನ ಗುರುತಿಸುವುದು ದೇಹವನ್ನು; ಶಿಕ್ಷಿಸಿ ಜೇಲಿಗೆ ತಳ್ಳುವುದು ಕೂಡಾ ದೇಹವನ್ನೇ. ಅದು ನಿರಪರಾಧಿ.

ಮನದ ಹಾದರ, ಅಪರಾಧ ಜನಕ್ಕೂ ಪೊಲೀಸರಿಗೂ ಕೋರ್ಟಿಗೂ ಗೋಚರಿಸುವುದೇ ಇಲ್ಲ. ಅರಿವಿನ ದೇಹಕ್ಕೆ ಶಿಕ್ಷೆ; ಅರಿವಿನ ದೇಹಕ್ಕೆ ಮೃತ್ಯು ದಂಡವಿಧಿಸುತ್ತಾರೆ. ಅರಿವು ಅನಂತ. ಅದು ಜಗದಗಲ ಮುಗಿಲಗಲ.

ಮನದ ಕತೆ ಬೇಲಿಯೇ ಎದ್ದು ಹೊಲ ಮೇದಂತೆ, ಏರಿ ನೀರುಂಡಂತೆ, ತಾಯಿ ಮೊಲೆ ಹಾಲು ನಂಜಾದಂತೆ ! ಇದನ್ನರಿತ ಸಿದ್ಧರಾಮಶರಣರು ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ನೆಂಟರನ್ನು ಹೊರಗೆ ತಳ್ಳಿದರು. ಕಪಿಲಸಿದ್ಧಮಲ್ಲಿಕಾರ್ಜುನನೆಂಬ ಗಂಡನ ಮನೆಯಲ್ಲಿ ಗಂಡನೊಂದಿಗೆ ಮಲಗಿದರು. ಗಂಡ ತಾನು ಒಂದಾಗಿ ಅರಿವಿನ ಬೆಳೆ ಬೆಳೆದರು. ತಾವು ಬೆಳೆದ ಬೆಳೆಯ ಬೆಳಸು ಜಗಕೆಲ್ಲ ನೀಡಿದರು.



□

# ತನುವಿನಂತೆ ಇರುವ ತನುವಿಗೆ ನಿಂದೆ ಬೇಡ

**ಆಳುವ ಅರಸನ ಹೆಂಡತಿಯ ಹಾದರಗಿತ್ತಿಯೆಂದಡೆ**
**ಆಳುವ ಅರಸು ಕೈಕಾಲನು ತರಿಸದೆ ಬಿಡುವನೆ ?**
**ಶರಣ ಸತಿ ಲಿಂಗ ಪತಿಯಪ್ಪ ಶಿವಭಕ್ತನ ಅಂತವನಿಂತವನೆಂದಡೆ,**
**ಅಘೋರ ನರಕದಲಿಕ್ಕುವನವ್ವಾ, ನಮ್ಮ ಕಪಿಲಸಿದ್ಧಮಲ್ಲಿನಾಥ.**

**- ಸಿದ್ದರಾಮ ಶಿವಯೋಗಿ**

**ಆಳುವ ಅರಸನ ಹೆಂಡತಿಯ ಹಾದರಗಿತ್ತಿಯೆಂದಡೆ ಆಳುವ ಅರಸು ಕೈಕಾಲನು ತರಿಸದೆ ಬಿಡುವನೆ ?**

ದೇಹವೆಲ್ಲ ಒಂದೇ . ಒಂದು ದೇಹ ಮತ್ತೊಂದು ದೇಹವನ್ನು ನಿಂದೆ ಮಾಡಲು ಸಾಧ್ಯವೆ? ನಿಂದೆ ಮಾಡಿದರೆ ದೇಹವನ್ನು ಆಳುವ ಅರಸ ಕೈಕಾಲನು ತರಿಸದೆ ಬಿಡುವನೆ ? ಎನ್ನುತ್ತಾರೆ ಸಿದ್ದರಾಮ ಶರಣರು.

ಇದು ಬಹಳ ಸೂಕ್ಷ್ಮವಾದ ವಿಚಾರ. ಬಾಲ್ಯದಲ್ಲಿಯೇ ಪ್ರಾಥಮಿಕ ಶಿಕ್ಷಣದ ಮೂಲಕ ಈ ಸೂತ್ರ ಅರಿವಿಗೆ ಬಂದರೆ ಇಡೀ ಪ್ರಪಂಚದಲ್ಲಿಯೆ ಯುದ್ದಗಳು ಇರುವುದೇ ಇಲ್ಲ. ಮನೆಗಳಲ್ಲಿ ಕೂಡಾ ತನು ತನುವನ್ನು ನಿಂದೆ ಮಾಡುವುದಿಲ್ಲ. ತನ್ನ ತನುವಿನಂತೆಯೇ ಗೌರವಾದರಗಳು ಇತರ ತನುವಿಗೂ ದೊರೆಯುತ್ತದೆ.

ಮನ ಕಾರ್ಯನಿರತವಾದಾಗ ತನುವಿದೆ ಎನ್ನುವ ಭಾವ ಮನಕ್ಕೆ ಬರುವುದಿಲ್ಲ. ಹಾಗೆಯೆ ಮನ ಇದೆಯೆಂಬ ಭಾವ ಅರಿವಿಗೆ ಬರುವುದಿಲ್ಲ. ಅರಿವು ಇದೆಯೆಂಬ ಭಾವ ನುಡಿಯುವ ನುಡಿಯೊಳಗೂ ಬರುವುದಿಲ್ಲ. ಒಂದಕ್ಕೊಂದು ಸಂಬಂಧವಿಲ್ಲದಂತೆ ಕಾರ್ಯನಿರ್ವಹಿಸುತ್ತವೆ. ತನು ಮನ ಅರಿವು ತನುವಿನಲ್ಲಿ ಕೆಲಸ ಮಾಡುವ ವಿಧಾನ ಪರಿಚಯವಾಗಬೇಕು. ನಂತರ ಪ್ರಾಯೋಗಿಕವಾಗಿ ತನು ಮನ ಅರಿವು ಏಕಾರ್ಥವಾಗಬೇಕು.

ಇಲ್ಲದಿದ್ದಲ್ಲಿ ಮನ ಕಳವು, ಹಾದರ, ನಿಂದೆ, ಜಗಳದಲ್ಲಿ ತೊಡಗುತ್ತದೆ. ಬೆಕ್ಕು ಕಣ್ಣು ಮುಚ್ಚಿಕೊಂಡು ಹಾಲು ಕುಡಿದಂತೆ. ಅರಿವು ಎಚ್ಚರಿಸುತ್ತದೆ. ಕಳ್ಳ ಹಾದರಿಗ ನಾಯಿ ಎಂದು ಮೂದಲಿಸಿ ನೆನಪಿಸಿ ನೆನಪಿಸಿ ತನುವಿರುವವರೆಗೆ ಮನಕ್ಕೆ ಅರಿವಾಗುವವರೆಗೆ ಅರಿವಿನಲ್ಲಿ ಲೀನವಾಗುವವರೆಗೆ ಶಿಕ್ಷೆ ನೀಡುತ್ತಲೇ ಇರುತ್ತದೆ. ಜನ ಮನ ಮಾಡಿದ ತಪ್ಪನ್ನು ತನುವಿನಿಂದಲೇ ನೋಡುತ್ತಾರೆ. ಮನಕ್ಕೆ ಅರಿವಿನ ಪರಿಚಯವಾದರೆ ಪರ ತನುವು ತನ್ನ ತನುವೂ ಒಂದೇ. ನಿಂದೆ ಮಾಡುವ ಮನದ ಮೇಲೆ ಅರಿವಿನ ಬೆಳಕು ಬಿದ್ದು ನಿಂದೆಯ ಶಬ್ದ ಅರಿವಾಗುತ್ತದೆ; ಮನ ಘನಮನವಾಗುತ್ತದೆ.

ತನುವಿನ ಮನದ ಅಪರಾಧ ಸಕಲರಿಗೂ ತಿಳಿಯಲೆಂದು ಬಸವಣ್ಣನವರು ''ವಿಷಯವೆಂಬ ಹಸುರನೆನ್ನ ಮುಂದೆ ತಂದು ಪಸರಿಸದಿರಯ್ಯಾ ಪಶುವೇನು ಬಲ್ಲದು ಹಸುರೆಂದೆಳಿಸುವುದು '' ಎಂದು ತನುವಿನ ಮೇಲೆ ಕನಿಕರಪಟ್ಟು ಮನವೆಂಬ ಪಶುವಿಗೆ ಪಶುಪತಿಯಾಗು ಎಂದು ಅರಿವಿಗೆ ಆಮಂತ್ರಣವಿತ್ತಿದ್ದಾರೆ. ''ಪಶುವಾನು ಪಶುಪತಿ ನೀನು ತುಡುಗುಣಿಯೆಂದು ಹಿಡಿದು ಬಡಿಯದ ಮುನ್ನ ತಂದೆ ನಿನ್ನ ಬಯ್ಯದಂತೆ ಮಾಡು ''ಎಂದು ಸಂಗಮನಾಥನನ್ನು (ಅರಿವು) ಪ್ರಾರ್ಥಿಸಿದ್ದಾರೆ.

**ಶರಣಸತಿ ಲಿಂಗಪತಿಯಪ್ಪ ಶಿವಭಕ್ತನ ಅಂತವನಿಂತವನೆಂದಡೆ ಅಘೋರ ನರಕದಲ್ಲಿ ಕುಕ್ಕುವನವ್ವಾ, ನಮ್ಮ ಕಪಿಲಸಿದ್ಧ ಮಲ್ಲಿನಾಥ:**

ತನುವಿಗಾವರಿಸಿದ ಮನ ಅರಿವಿನಲ್ಲಿ ಲೀನವಾದರೆ ಮನ ಘನಮನವಾಗುವುದು. ಆ ಘನ ಮನವೇ ಶರಣನೆಂಬ ಸತಿ; ಆ ಅರಿವೇ ಲಿಂಗವೆಂಬ ಪತಿ. ಶರಣಸತಿ ಲಿಂಗಪತಿಯಪ್ಪ ಶಿವ ಭಕ್ತನ ತನುವಿಗೆ ಕಾಣುವ ತನುಗಳೆಲ್ಲ ಅರಿವುಳ್ಳ ತನುಗಳೇ ಆಗುತ್ತವೆ. ಅಂತಹ ತನುಗಳನ್ನು ಅಂತವನಿಂತವನೆಂದು ನಿಂದೆ ಮಾಡಿದರೆ; ನಿಂದೆ ಮಾಡಿದ ತನುವಿನ ಅರಿವು ತನ್ನ ತನುವನ್ನೇ ಸಂಕಟಕ್ಕೀಡು ಮಾಡಿ ನರಕ ಯಾತನೆ ಅನುಭವಿಸುವಂತೆ ಮಾಡುತ್ತದೆ ಎಂದಿದ್ದಾರೆ ಸಿದ್ಧರಾಮ ಶರಣರು.

□

**ಅರಿವಿನ ಪರಿಮಳ :**

- ಜನ ಮನ ಮಾಡಿದ ತಪ್ಪನ್ನು ತನುವಿನಿಂದಲೇ ನೋಡುತ್ತಾರೆ. ಮನಕ್ಕೆ ಅರಿವಿನ ಪರಿಚಯವಾದರೆ ಪರ ತನುವು ತನ್ನ ತನುವೂ ಒಂದೇ. ನಿಂದೆ ಮಾಡುವ ಮನದ ಮೇಲೆ ಅರಿವಿನ ಬೆಳಕು ಬಿದ್ದು ನಿಂದೆಯ ಶಬ್ದ ಅರಿವಾಗುತ್ತದೆ; ಮನ ಘನಮನವಾಗುತ್ತದೆ.

# ನಾ ಮುನಿದಡೆ ನೀ ಮುನಿಯೆ ನೋಡಯ್ಯಾ

ನದಿಯ ನೀರು ಹೋದುವಯ್ಯಾ ಸಮುದ್ರಕ್ಕೆ ,
ಸಮುದ್ರದ ನೀರು ಬಾರವಯ್ಯಾ ನದಿಗೆ ,
ನಾನು ಹೋದೆನಯ್ಯಾ ಲಿಂಗದ ಕಡೆಗೆ ,
ಲಿಂಗ ಬಾರದು ನೋಡಯ್ಯಾ ನನ್ನ ಕಡೆಗೆ .
ಮಗ ಮುನಿದಡೆ ತಂದೆ ಮುನಿಯನು ,
ನಾ ಮುನಿದಡೆ ನೀ ಮುನಿಯೆ ನೋಡಯ್ಯಾ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯಾ .

– ಸಿದ್ದರಾಮ ಶಿವಯೋಗಿ

ಸಿದ್ದರಾಮ ಶರಣರು ಈ ವಚನದಲ್ಲಿ ನದಿ –ಸಮುದ್ರ , ಮಗ – ತಂದೆ , ನಾನು ಮತ್ತು ನೀನು ಪದಗಳನ್ನು ಬಳಸಿದ್ದಾರೆ.

ನಾನು ಮುನಿದಡೆ ನೀ ಮುನಿಯೆ ನೋಡಯ್ಯಾ ಕಪಿಲಸಿದ್ಧ ಮಲ್ಲಿಕಾರ್ಜುನಾ ಎನ್ನುವ ಕೊನೆಯ ಸಾಲಿಗಾಗಿ ಮೇಲಿನ ಎಲ್ಲಾ ಉಪಮೆಗಳನ್ನು ಕೊಟ್ಟಿದ್ದಾರೆ. ನದಿಯ ನೀರು ಹರಿದು ಸಮುದ್ರ ಸೇರುತ್ತದೆ. ಸಮುದ್ರದ ನೀರು ನದಿಗೆ ಬರುವುದಿಲ್ಲ. ಬಸವಳಿದು ಹರಿದು ಸಮುದ್ರ ಸೇರಿ ಅನಂತವಾಗಬೇಕು ಎನ್ನುವ ಬಯಕೆ ನದಿಗೆ.

ಲಿಂಗವಿದ್ದ ಸ್ಥಳಕ್ಕೆ ನಾನು ಹೋಗುತ್ತೇನೆ , ನಾನಿದ್ದೆಡೆಗೆ ಲಿಂಗ ಬರುವುದಿಲ್ಲ. ಇದು ವಾಸ್ತವವೂ ಅಲ್ಲ.

ಮಗನಿಗೆ ಸಿಟ್ಟು ಬಂದರೆ ತಂದೆಗೆ ಸಿಟ್ಟು ಬರುವುದಿಲ್ಲ . ಹುಡುಗನ ಸ್ವಭಾವ ಎಂದು ತಿಳಿ ಹೇಳಿ ಮಗನ ಸಿಟ್ಟು ಶಮನ ಮಾಡುವುದು ತಂದೆಯ ಕರ್ತವ್ಯ .

ನಾ ಮುನಿದಡೆ ನೀ ಮುನಿಯೆ ನೋಡಯ್ಯಾ , ಇಲ್ಲಿ ನಾನು ಎಂದರೆ ಸಿದ್ದರಾಮ ಶರಣರು. ನೀನು ಎಂದರೆ ಕಪಿಲಸಿದ್ಧ ಮಲ್ಲಿಕಾರ್ಜುನ. ನಾನು ಎಂದರೆ ಓದುಗ, ನೀನು ಎಂದರೆ ದೇವರು. ನಾನು ಎನ್ನುವುದು ಪರಿಚಯವಿದೆ, ನೀನು ಎನ್ನುವುದು ಪರಿಚಯವಿಲ್ಲ, ಅದು ಕಲ್ಪನೆ ಎನ್ನುವುದು ಗಮನಿಕ್ಕಿದೆ. ದೇವರು ಎನ್ನುವ ವಸ್ತುವನ್ನು ನೋಡಿದವರು ಯಾರೂ ಇಲ್ಲ. ಪುಣ್ಯಕ್ಷೇತ್ರಗಳಲ್ಲಿದ್ದ ದೇವರನ್ನು ನೋಡಿದ್ದೇವೆ. ಖಚಿತವಾಗಿ ಅದೇ ದೇವರೆಂದು ಹೇಳಲು ವಿಶ್ವಾಸ ಸಾಲುತ್ತಿಲ್ಲ. ಅಲ್ಲದೆ ನನಗೆ ಸಿಟ್ಟು ಬಂದಾಗ, ವ್ಯಗ್ರನಾದಾಗ,ಆ ದೇವರು ಸಿಟ್ಟಾಗುವುದಿಲ್ಲ. ನನ್ನನ್ನು ಸಂತೈಸುವ ಗುಣವೂ ಪುಣ್ಯಕ್ಷೇತ್ರದ ದೇವರಿಗಿಲ್ಲ.

ಹಿಂದೆ ಕಲ್ಲಿತ್ತು . ಕಟೆದು ಮೂರ್ತಿ ಮಾಡಲು ದೇವರಾಯಿತು. ಗರ್ಭಗುಡಿ, ಪೌಳಿ ಕಟ್ಟಲು ಚಂದಾ ಕೊಟ್ಟೆ. ಅರಿತು ನೋಡಿದರೆ ಅದು ಕಲ್ಲು, ಮಾತನಾಡುವುದಿಲ್ಲ. ಆದರೆ ಶರಣರು ಹೇಳಿದ ದೇವರು ಮಾತನಾಡುತ್ತಾನೆ. ನನಗೂ ಅವನಿಗೂ ಅವಿನಾಭಾವ ಸಂಬಂಧ. ಅವನಿಲ್ಲದಿರೆ ನಾನಿಲ್ಲ. ನದಿಯಾಗಿ ಪಯಣಿಸಿ ಸಮುದ್ರ ಸೇರಬೇಕಷ್ಟೆ.

ನನಗೆ ಸಿಟ್ಟು ಬಂದರೆ ಅವನಿಗೆ ಸಿಟ್ಟು ಬರುವುದಿಲ್ಲ. ಕಾರಣ ಕೇಳಿ ಸಮಾಧಾನ ಪಡಿಸುತ್ತಾನೆ.

ನಾನು ಜೂಜಾಡಿದರೆ ಅವನು ಆಡುವುದಿಲ್ಲ; ನಾನು ಹಾದರ ಮಾಡಿದರೆ ಅವನು ಮಾಡುವುದಿಲ್ಲ; ತಡೆದು ನಾಯಿ ಎಂದು ಮೂದಲಿಸುತ್ತಾನೆ. ನಾನು ಕುಡಿದರೆ ಅವನು ಕುಡಿಯುವುದಿಲ್ಲ; ಕುಡಿಯುವ ಮುನ್ನ ತಡೆದು ನಂತರ ಕುಡಿಯಬೇಡವೆಂದು ಸಂತೈಸುತ್ತಾನೆ. ನಾನು ಕಳ್ಳನಾದರೆ ಅವನು ಕಳ್ಳನಲ್ಲ ನನ್ನ ಕಳುವನ್ನು ಖಂಡಿಸುತ್ತಾನೆ. ನನಗೆ ಜೇಲಾದರೆ ಅವನಿಗದು ಸ್ವರ್ಗ ! ನನಗೆ ಅವನಿಗೆ ಅವಿನಾಭಾವ ಸಂಬಂಧ. ನಾನು ಕ್ರಮಿಸಿ ಅವನ ಸೇರಬೇಕಷ್ಟೆ.

ನಾನು ಭ್ರಮಾಧೀನ ಅವನು ಬ್ರಹ್ಮ. ಸಕಲ ಪುಸ್ತಕಗಳು ಅವನಿಂದಲೇ ಮುದ್ರಣ. ನಾನು ಅಕ್ಷರಸ್ಥ; ಅವನು ಅಕ್ಷರೋತ್ತಮ. ನದಿ ಸಮುದ್ರ ಸೇರಿದಂತೆ ನಾನು ಅವನ ಸೇರಬೇಕು. ನದಿಯ ನೀರು ನೀರೇ; ಸಮುದ್ರದ ನೀರೂ ನೀರೇ. ನದಿ ಸಮುದ್ರದತ್ತ ವಾಲಿದರೆ ಸಮುದ್ರ ತನ್ನಂತೆ ಮಾಡಿಕೊಳ್ಳುತ್ತದೆ.

ಮಾತುಗಳಿಂದ ಸಿಟ್ಟು ಬರುತ್ತದೆ. ಮಾತುಗಳು ತನುವಿಗೆ ಯಾತನೆಯನ್ನುಂಟು ಮಾಡುತ್ತವೆ. ತನುವಿನಲ್ಲಿ ತನ್ಮಯವಾದ (ಅವನಿಗೆ) ಅರಿವಿಗೆ ಸಿಟ್ಟು ಬರುವುದಿಲ್ಲ. ಆ ಅರಿವೇ ಗುರು, ಆ ಗುರುದೇವನೇ ಸದಾಶಿವ, ಕಪಿಲಸಿದ್ಧ ಮಲ್ಲಿಕಾರ್ಜುನ. ಆತನಿದ್ದಲ್ಲಿಗೆ ನಾನು ಹೋದರೆ ಆತನಂತೆ ನಾನೂ ಅನಂತ!

□

---

**ಅರಿವಿನ ಪರಿಮಳ :**

□ ಮಾತುಗಳಿಂದ ಸಿಟ್ಟು ಬರುತ್ತದೆ. ಮಾತುಗಳು ತನುವಿಗೆ ಯಾತನೆಯನ್ನುಂಟು ಮಾಡುತ್ತವೆ. ತನುವಿನಲ್ಲಿ ತನ್ಮಯವಾದ (ಅವನಿಗೆ) ಅರಿವಿಗೆ ಸಿಟ್ಟು ಬರುವುದಿಲ್ಲ. ಆ ಅರಿವೇ ಗುರು, ಆ ಗುರುದೇವನೇ ಸದಾಶಿವ,

# ತಿಳಿಜಲದ ತನು

ತಿಳಿನೀರೆಂಬೆ ತಿಳಿನೀರೆಂಬೆ,
ತಿಳಿನೀ ಎಂದು ಒಂದು ದಿನ ಅಂದಿಲ್ಲೆಲೆ ಮಾನವಾ
ಕ್ಷಣಕ್ಕೆ ಕ್ಷಣಕ್ಕೆ ತಿಳಿ ನೀ ಎಂದಡೆ,
ತಳುಹದೆ ತನ್ನ ನಿಜವ ಕೊಡನೆ ಕಪಿಲಸಿದ್ಧಮಲ್ಲೇಂದ್ರ ?

-ಸಿದ್ಧರಾಮ ಶಿವಯೋಗಿ

ನೀರಲ್ಲಿ ಏನು ಬೆರಸಿದರೂ ಸ್ವಲ್ಪ ಸಮಯದಲ್ಲಿ ತಿಳಿಗೊಂಡು ಮತ್ತೆ ತನ್ನ ನಿಜ ರೂಪ ತೋರಿಸುತ್ತದೆ. ಜಲ ಏನನ್ನು ತನ್ನ ಗರ್ಭದಲ್ಲಿ ಇಟ್ಟುಕೊಳ್ಳುವುದಿಲ್ಲ.

ನೀರ ಬಿಂದು ಗರ್ಭ ಸೇರಿ ತನುವಾಗಿ ಗಟ್ಟಿಗೊಂಡ ಜಲ ರಾಶಿ! ಆ ತನು ಕೂಡಾ ತನ್ನ ಗರ್ಭ ದಲ್ಲಿ ಏನನ್ನೂ ಇಟ್ಟುಕೊಳ್ಳುವುದಿಲ್ಲ. ಒಂದು ಚಿಕ್ಕ ಮುಳ್ಳು ಸಿಬುರು ಚುಚ್ಚಿದರೂ ಅದು ಹೊರಗೆ ಬರುವವರೆಗೆ ತನುವಿಗೆ ಸಮಾಧಾನ ವಿರುವುದಿಲ್ಲ. ತನ್ನ ಸ್ವಚ್ಛತೆಯನ್ನು ತಾನು ಕಾಪಾಡಿಕೊಳ್ಳುವುದೇ ಜಲದ ಗುಣ. ತನುವಿನ ಗುಣ ಕೂಡಾ.

ನೀರು ಗಟ್ಟಿಗೊಂಡು ನೀರೇ ತುಂಬಿರುವ ತನುವಿನಲ್ಲಿ ತಿಳಿಯುವಂಥದ್ದು ಏನೂ ಇಲ್ಲ. ಆದರೂ ಕ್ಷಣ ಕ್ಷಣಕ್ಕೆ ತಿಳಿಯಬೇಕಿದೆ. ತನುವಿನಲ್ಲಿಯೇ ತಿಳಿಯಬೇಕಿದೆ. ತಿಳಿದರೆ ತಪ್ಪದೆ ತನ್ನ ನಿಜ ರೂಪ ದಕ್ಕುತ್ತದೆ ಎನ್ನುತ್ತಾರೆ ಶರಣರು.

ಶಬ್ದಕ್ಕೂ, ಸ್ಪರ್ಶಕ್ಕೂ, ವಾಸನೆಗೂ, ದೃಶ್ಯಕ್ಕೂ, ರುಚಿಗೂ ಸಂಕಟಪಡುವ ತನುವಿನಲ್ಲಿ ಕ್ಷಣ ಕ್ಷಣಕ್ಕೂ ತಿಳಿಯಬೇಕಿದೆ. ಶಬ್ದದಿಂದ ತನುವಿನ ಜಲ ಕಲಕಿ ತಿಳಿಗೊಳ್ಳಬೇಕಾದರೆ ಶ್ರೀ ರಾಮನಿಗೆ 14 ವರ್ಷ ಬೇಕಾಯಿತು. ಅದೇ ಶಬ್ದದಿಂದ ತನುವಿನ ಜಲ ಕಲಕಿ ತಿಳಿಗೊಳ್ಳಬೇಕಾದರೆ ಪಾಂಡವರಿಗೆ 13 ವರ್ಷ ಬೇಕಾ ಯಿತು. ಬದುಕಿ ಬಾಳಬೇಕಾದ 18 ಅಕ್ಷೋಹಿಣಿ ತನುಗಳು ಮಹಾಭಾರತ ಯುದ್ಧದಲ್ಲಿ ಬಲಿಯಾದವು.

ಜಲ ಗಟ್ಟಿಗೊಂಡ ತನುವು ನೋಡಿ ಕೇಳಿ ಮುಟ್ಟಿ ವಾಸಿಸಿ ರುಚಿಸಿ ಸುಖಿಸುತ್ತದೆ. ಹಾಗೆಯೇ ನುಡಿದು ಆನಂದ ಪಡುವ ಶಕ್ತಿಯೂ ಇದೆ. ಇವುಗಳಲ್ಲಿ ವ್ಯತ್ಯಾಸವಾದರೆ ಸಂಕಟಪಡುವ ಗುಣವನ್ನು ಕೂಡಾ ತನು ಹೊಂದಿದೆ.

ಸ್ಪರ್ಶಿಸಿದರೆ ತನುವಿನಲ್ಲಿ ಸುಖ ಉಂಟಾಗುತ್ತದೆ. ಸ್ಪರ್ಶ ಸುಖಕ್ಕಾಗಿ ತನು ಹಾತೊರೆಯು ತ್ತದೆ. ದೊರೆಯದಿದ್ದರೆ ಯಾತನೆ ಅನುಭವಿಸುತ್ತದೆ. ಹೀಗೇಕೆ ಕ್ಷಣ ಕ್ಷಣಕ್ಕೂ ಬದಲಾವಣೆಯಾಗುತ್ತದೆ ಎಂದು ಕ್ಷಣ ಕ್ಷಣಕ್ಕೂ ತನುವಿನಲ್ಲಿಯೇ ತಿಳಿಯಬೇಕು. ಆದರೆ ತಿಳಿಯುವುದಿಲ್ಲ.

ರಾವಣ ಸೀತಾದೇವಿಯ ರೂಪ ಕಣ್ಣಿನಿಂದ ಅನುಭವಿಸಿ ಸುಖ ಪಟ್ಟ, ಸ್ಪರ್ಶಿಸಿ ಸುಖಿಸಬೇ ಕೆಂದು ಬಯಸಿದ. 14 ವರ್ಷಗಳು ಕಳೆದರೂ ಬಯಕೆ ಈಡೇರಲಿಲ್ಲ. ಇಡೀ ರಾಜ್ಯಕ್ಕೆ ಒಡೆಯನಾ ದವ ತನ್ನದೇ ಆದ ಕಣ್ಣು ಮತ್ತು ಚರ್ಮದಲ್ಲಿ ಉಂಟಾದ ದೋಷಗಳನ್ನು ತಿಳಿಯದೆ ಹಗಲಿರುಳೂ ದುಃಖಿಸಿ ಕೊನೆಗೂ ರಾಮನ ಬಾಣಕ್ಕೆ ಬಲಿಯಾದ.

ರಾವಣನದು ತನುವೇ, ಹೆಂಡತಿ ಮಂಡೋದರಿಯದೂ ತನುವೇ, ಸೀತಾದೇವಿಯದೂ ತನುವೇ, ರಾವಣನ ಸುಖಕ್ಕಾಗಿ ತನುವಿದ್ದರೂ ಪರ ತನುವಿಗಾಗಿ ಮೋಹಗೊಂಡ. ದೊರೆಯದಿದ್ದ

ಕ್ಕಾಗಿ ಹಗಲಿರುಳೂ ಯಾತನೆ ಪಟ್ಟ. ತನ್ನ ತನುವಿನ ಸುಖ ದುಃಖಗಳ ಯಾತನೆ ತನಗೆ ತಿಳಿಯಲಿಲ್ಲ. ತಿಳಿಯುವ ಗೋಜಿಗೆ ಹೋಗಲಿಲ್ಲ.

ರಾವಣ ತನ್ನ ಹೆಂಡತಿ ಮಂಡೋದರಿಯ ಕೂಡುವ ಮುನ್ನ ಸುಖದ ದ್ರವ ಹೋಗಿದ್ದರೆ ಮತ್ತೆ ಕೂಡುತ್ತಿರಲಿಲ್ಲ. ರಂಭೆ ಊರ್ವಶಿಯರು ಬಂದರೂ ರಾವಣ ಸೇರುತ್ತಿರಲಿಲ್ಲ. ಸುಖ ತನ್ನ ತನುವಿನಲ್ಲಿತ್ತೋ ಮಂಡೋದರಿಯ ತನುವಿನಲ್ಲಿತ್ತೋ ಎಂದು ರಾವಣ ತಿಳಿಯಲಿಲ್ಲ. ಮಂಡೋದರಿಯೂ ತಿಳಿಸಿ ಹೇಳಲಿಲ್ಲ. ಸೀತಾದೇವಿಗೂ ತಿಳಿಹೇಳುವ ಆ ಜಾಣತನದ ಮಾತುಗಳು ಬಂದಿರಲಿಕ್ಕಿಲ್ಲ. ತನ್ನ ತನುವಿನಲ್ಲಿದ್ದ ಸುಖ ತನ್ನ ತನುವಿಗೆ ತಿಳಿಯದೆ ರಾವಣ ವ್ಯರ್ಥವಾಗಿ ರಾಮನ ಬಾಣಕ್ಕೆ ಗುರಿಯಾದ. ರಾವಣನ ಸೈನಿಕರು, ವಾನರರೂ ಹತರಾದರು.

ಜಲ ತನುವನ್ನು ತಿಳಿಯಲು ಬುದ್ಧನೊಂದಿಗೆ ನಾಲ್ಕೈದು ಜನ ಹೋಗಿದ್ದರು. ಕೊನೆಯವರೆಗೂ ಆನಂದ ಮಾತ್ರ ಜೊತೆಗಿದ್ದ. ಬುದ್ಧ ಮಾಡಿದ ಉಪನ್ಯಾಸ ಬರೆಯುವುದರಲ್ಲಿಯೇ ಕಾಲ ಕಳೆದ ಆನಂದ ನಿರ್ವಾಣ ಹೊಂದಿರಲಿಲ್ಲ. ಇನ್ನೂ ಮುಕ್ತಿ ಸಿಗಲಿಲ್ಲ, ಜ್ಞಾನವಾಗಲಿಲ್ಲವೆಂಬ ಯಾತನೆಯಲ್ಲಿ ಆನಂದ ಬಳಲುತ್ತಿದ್ದ.

ಒಮ್ಮೆ ಬುದ್ಧ ಆನಂದನಿಗೆ ಕುಡಿಯಲು ನೀರು ತರಲು ಹೇಳಿದ. ಹೊಂಡದಲ್ಲಿಯ ನೀರು ಕಲುಷಿತಗೊಂಡಿತ್ತು. ಪ್ರಾಣಿಗಳು ಕುಡಿದು ರಾಡಿಮಾಡಿವೆ. ನೀರು ಸರಿಯಿಲ್ಲವೆಂದು ಹೇಳಿದ. ಬುದ್ಧನ ದಾಹ ಅತಿಯಾಯಿತು. ನೀರು ನೀರು ಎಂದು ಮಲಗಿಯೇ ಬಿಟ್ಟ. ಆನಂದನಿಗೆ ತಡೆಯಲಾಗಲಿಲ್ಲ. ಪುನಃ ನೀರು ತರಲು ಹೊಂಡಕ್ಕೆ ಹೋದ. ನೀರು ನೋಡುತ್ತಾ ಅಲ್ಲಿಯೇ ಕುಳಿತ. ಸಮಯ ಕಳೆಯಿತು. ನೀರಲ್ಲಿ ಬೆರೆತ ಮಣ್ಣು ನಿಧಾನವಾಗಿ ಕೆಳಗಿಳಿಯುವುದನ್ನು ಬೆರಗುಗಣ್ಣಿನಿಂದ ನೋಡಿದ. ನೀರು ಸಂಪೂರ್ಣ ತಿಳಿಯಾಯಿತು. ಆನಂದ, ಪರಮಾನಂದದಿಂದ ಕುಣಿದಾಡಿದ. ಬರೆದುಕೊಂಡಿದ್ದ ಬುದ್ಧನ ಉಪನ್ಯಾಸಗಳೆಲ್ಲಾ ಬರಿದಾಗಿದ್ದವು. ಆನಂದ ಬುದ್ಧನಾಗಿದ್ದ. ಬುದ್ಧನಿಗೆ ನೀರು ನೆಪವಾಗಿತ್ತು. ತಿಳಿ ಜಲದೊಂದಿಗೆ ಬಂದ ಬುದ್ಧನನ್ನು ಬುದ್ಧ ಸವಿದ. ಸಕಲ ತನುಗಳು ತಿಳಿ ಜಲದ ತನುಗಳೇ. ತಿಳಿಯಬೇಕಷ್ಟೆ.

□

**ಅರಿವಿನ ಪರಿಮಳ :**

- □ ಶಬ್ದಕ್ಕೂ, ಸ್ಪರ್ಶಕ್ಕೂ, ವಾಸನೆಗೂ, ದೃಶ್ಯಕ್ಕೂ, ರುಚಿಗೂ ಸಂಕಟಪಡುವ ತನುವಿನಲ್ಲಿ ಕ್ಷಣ ಕ್ಷಣಕ್ಕೂ ತಿಳಿಯಬೇಕಿದೆ.
- □ ಶಬ್ದದಿಂದ ತನುವಿನ ಜಲ ಕಲಕಿ ತಿಳಿಗೊಳ್ಳಬೇಕಾದರೆ ಶ್ರೀ ರಾಮನಿಗೆ 14 ವರ್ಷ ಬೇಕಾಯಿತು. ಅದೇ ಶಬ್ದದಿಂದ ತನುವಿನ ಜಲ ಕಲಕಿ ತಿಳಿಗೊಳ್ಳಬೇಕಾದರೆ ಪಾಂಡವರಿಗೆ 13 ವರ್ಷ ಬೇಕಾಯಿತು. ಬದುಕಿ ಬಾಳಬೇಕಾದ 18 ಅಕ್ಷೋಹಿಣಿ ತನುಗಳು ಮಹಾಭಾರತ ಯುದ್ಧದಲ್ಲಿ ಬಲಿಯಾದವು.
- □ ರಾವಣ ಸೀತಾದೇವಿಯ ರೂಪ ಕಣ್ಣಿನಿಂದ ಅನುಭವಿಸಿ ಸುಖ ಪಟ್ಟ, ಸ್ಪರ್ಶಿಸಿ ಸುಖಿಸಬೇಕೆಂದು ಬಯಸಿದ. 14 ವರ್ಷಗಳು ಕಳೆದರೂ ಬಯಕೆ ಈಡೇರಲಿಲ್ಲ. ಇಡೀ ರಾಜ್ಯಕ್ಕೆ ಒಡೆಯನಾದವ ತನ್ನದೇ ಆದ ಕಣ್ಣು ಮತ್ತು ಚರ್ಮದಲ್ಲಿ ಉಂಟಾದ ದೋಷಗಳನ್ನು ತಿಳಿಯದೆ ಹಗಲಿರುಳೂ ದುಃಖಿಸಿ ಕೊನೆಗೂ ರಾಮನ ಬಾಣಕ್ಕೆ ಬಲಿಯಾದ.
- □ ರಾವಣನದು ತನುವೇ, ಹೆಂಡತಿ ಮಂಡೋದರಿಯದೂ ತನುವೇ, ಸೀತಾದೇವಿಯದೂ ತನುವೇ, ರಾವಣನ ಸುಖಕ್ಕಾಗಿ ತನುವಿದ್ದರೂ ಪರ ತನುವಿಗಾಗಿ ಮೋಹಗೊಂಡ. ದೊರೆಯದಿದ್ದಕ್ಕಾಗಿ ಹಗಲಿರುಳೂ ಯಾತನೆ ಪಟ್ಟ. ತನ್ನ ತನುವಿನ ಸುಖ ದುಃಖಗಳ ಯಾತನೆ ತನಗೆ ತಿಳಿಯಲಿಲ್ಲ. ತಿಳಿಯುವ ಗೋಜಿಗೆ ಹೋಗಲಿಲ್ಲ.
- □ ರಾವಣ ತನ್ನ ಹೆಂಡತಿ ಮಂಡೋದರಿಯ ಕೂಡುವ ಮುನ್ನ ಸುಖದ ದ್ರವ ಹೋಗಿದ್ದರೆ ಮತ್ತೆ ಕೂಡುತ್ತಿರಲಿಲ್ಲ. ರಂಭೆ ಊರ್ವಶಿಯರು ಬಂದರೂ ರಾವಣ ಸೇರುತ್ತಿರಲಿಲ್ಲ. ಸುಖ ತನ್ನ ತನುವಿನಲ್ಲಿತ್ತೋ ಮಂಡೋದರಿಯ ತನುವಿನಲ್ಲಿತ್ತೋ ಎಂದು ರಾವಣ ತಿಳಿಯಲಿಲ್ಲ. ಮಂಡೋದರಿಯೂ ತಿಳಿಸಿ ಹೇಳಲಿಲ್ಲ. ಸೀತಾದೇವಿಗೂ ತಿಳಿಹೇಳುವ ಆ ಜಾಣತನದ ಮಾತುಗಳು ಬಂದಿರಲಿಕ್ಕಿಲ್ಲ.

# ದುಷ್ಕರ್ಮ-ಸತ್ಕರ್ಮ

**ದುಷ್ಕರ್ಮಂಗಳ ಮಾಡುವರನಂತರುಂಟು**
**ಸತ್ಕರ್ಮಂಗಳ ಮಾಡುವರೊಬ್ಬರೂ ಇಲ್ಲ ನೋಡಯ್ಯಾ.**
**ದುಷ್ಕರ್ಮವೆಂದಡೆ ವಿಷಯವಾಸನೆ,**
**ಸತ್ಕರ್ಮವೆಂದಡೆ ಕಪಿಲ ಸಿದ್ಧಮಲ್ಲಿಕಾರ್ಜುನನ ಕೂಡವ ವಾಸನೆ.**

**-ಸಿದ್ಧರಾಮ ಶಿವಯೋಗಿ**

ತನುವಿನಲ್ಲಿ ಸತ್ಕರ್ಮ ಮಾತ್ರ ಇದೆ. ದುಷ್ಕರ್ಮ ಎನ್ನುವುದು ಇಲ್ಲವೇ ಇಲ್ಲ. ಬಾಹ್ಯ ವಸ್ತುಗಳ ಬೇಡಿಕೆಯ ವಿಷಯ ವಾಸನೆಯಿಂದ ದುಷ್ಕರ್ಮಿ ಎನ್ನುವ ಹೆಸರು ತನು ಪಡೆದಿದೆ.

ತನುವಿನ ಐದೂ ಇಂದ್ರಿಯಗಳು ಜ್ಞಾನೇಂದ್ರಿಯಗಳೇ. ಆದರೆ ವಸ್ತು ನೋಡುವ ಕಣ್ಣಿನಲ್ಲಿ ಪಡೆದು ಸುಖಿಸಬೇಕು ಎನ್ನುವ ದುಷ್ಕರ್ಮಿ ಆವರಿಸಿಕೊಂಡಿದ್ದಾನೆ. ಇಡೀ ತನುವನ್ನೇ ವ್ಯಾಕುಲ ಗೊಳಿಸುತ್ತಾನೆ. ನೋಡಿದ ವಸ್ತುವನ್ನು ಕಳುವಿನಿಂದ, ಹಗಲಿರುಳು ದುಡಿದು, ಉಪನ್ಯಾಸ ನೀಡಿ, ಪೂಜಿಸಿ, ಜೂಜು, ಹಾದರ, ನಾನಾ ಕೆಲಸಗಳನ್ನು ಮಾಡಿ ಪಡೆಯುತ್ತಾನೆ. ಕಳುವು ಮಾಡುವಾಗ ಸಿಕ್ಕರೆ ದುಷ್ಕರ್ಮಿ ಎನ್ನಿಸಿಕೊಳ್ಳುತ್ತಾನೆ. ವಸ್ತು ನೋಡಿದ ಕಣ್ಣು ಕಳ್ಳನೆನ್ನಿಸಿಕೊಳ್ಳುವುದಿಲ್ಲ. ಪಡೆದ ದೇಹಕ್ಕೆ ಕಳ್ಳನ ಪಟ್ಟ ಕಟ್ಟಿ ದುಷ್ಕರ್ಮಿ ಎಂದು ಜನ ಜರಿಯುತ್ತಾರೆ.

ಚರ್ಮ ಸತ್ಕರ್ಮ, ಚರ್ಮಕ್ಕಾವರಿಸಿದ ವಿಷಯ ವಾಸನೆ ದುಷ್ಕರ್ಮ. ಚರ್ಮ, ತನ್ನಂತೆ ಇರುವ ಚರ್ಮದ ಸ್ಪರ್ಷಕ್ಕಾಗಿ ಹಾತೊರೆಯುತ್ತದೆ. ಸ್ಪರ್ಶ ಸುಖ ಪಡೆಯಲು ಹೋಗಿ ದುಷ್ಕರ್ಮಿ ಎನ್ನುವ ಪಟ್ಟ ತನುವಿಗೆ ಕಟ್ಟುತ್ತದೆ.

ಕಿವಿ ಸತ್ಕರ್ಮ, ಕಿವಿಗಂಟಿದ ಶಬ್ದ ವಾಸನೆ ದುಷ್ಕರ್ಮ, ಕೇಳಿದ ಶಬ್ದವನ್ನು ವಿಪರೀತವಾಗಿ ತಿಳಿದು ತನುವನ್ನು ಜಗಳಕ್ಕೆ ಹಚ್ಚುತ್ತದೆ. ದುಷ್ಕರ್ಮ ಎನ್ನುವ ಪಟ್ಟ ತನುವಿಗೆ ಕಟ್ಟಿ ತಾನು ಸೇಫಾಗಿ ಉಳಿಯುತ್ತದೆ.

ನಾಲಿಗೆ ಸತ್ಕರ್ಮ, ನಾಲಿಗೆಗಂಟಿದ ರುಚಿ ದುಷ್ಕರ್ಮ, ಪದಾರ್ಥದಲ್ಲಿ ರುಚಿಯ ಹುಡುಕಹೋಗಿ ತನುವಿಗೆ ಸಂಕಟವನ್ನುಂಟು ಮಾಡುತ್ತದೆ. ಆ ದೋಷ ತನುವಿಗೆ ಹಚ್ಚಿ ತನುವಿನೊಂದಿಗೆ ಜಗಳ ಕಾದು ದುಷ್ಕರ್ಮದ ಪಟ್ಟ ತನುವಿಗೆ ಕಟ್ಟುತ್ತದೆ.

ವಾಸನಾ ಸುಖ ಅನುಭವಿಸುವ ಜ್ಞಾನ ಮೂಗಿಗಿದೆ. ತನುವಿಗೆ ಆ ಜ್ಞಾನ ರವಾನಿಸುವ ಶಕ್ತಿಯೂ ಇದೆ. ನಾಸಿಕಕ್ಕೆ ಅಜ್ಞಾನ ಆವರಿಸಿಕೊಂಡಿರುವುದರಿಂದ ವಾಸನೆಗಾಗಿ ಜಗಳ ಕಾದು ತನುವಿಗೆ ದುಷ್ಕರ್ಮದ ಪಟ್ಟ ಕಟ್ಟುತ್ತದೆ.

ಜ್ಞಾನ ತನುವಿನಲ್ಲಿ ಸತ್ಕರ್ಮಗಳನ್ನು ಮಾಡುವ ಒಂದು ಇಂದ್ರಿಯವೂ ಇಲ್ಲದಂತಾಗಿದೆ. ನೋಡುವ,ಕೇಳುವ, ಮುಟ್ಟುವ, ವಾಸಿಸುವ ರುಚಿಸುವ ತನುವಿನ ಇಂದ್ರಿಯಗಳೆಲ್ಲ ಅತೀಂದ್ರಿಗಳೆ. ಆ ಅತೀಂದ್ರಿ ಎಂಬ ಸತ್ಪುರುಷರಿಗೆ ವಿಷಯ ವಾಸನೆ ಎಂಬ ದುಷ್ಕರ್ಮಿಗಳು ಆವರಿಸಿಕೊಂಡು ಇಡೀ ತನುವನ್ನು ತಮ್ಮಂತೆ ಮಾಡಿಕೊಂಡಿವೆ.

ವಿಷಯ ವಾಸನೆಯೆಡೆಗೆ ವಾಲಿದ ದುಷ್ಕರ್ಮಿಗಳಿಗೆ ಒಮ್ಮೆ ಕಪಿಲಸಿದ್ಧ ಮಲ್ಲಿಕಾರ್ಜುನ

ನೆಂಬ ಜ್ಞಾನಿಯ ಕೂಡುವ ವಾಸನೆ ಉಂಟಾದರೆ ಸಾಕು ದುಷ್ಕರ್ಮಿಗಳ ನಿರ್ನಾಮವಾಗುತ್ತದೆ.

ಚಿನ್ನದಲ್ಲಿ ಹಳದಿ ಲೋಹ ನೋಡುವವ ಸತ್ಕರ್ಮಿ ಇವನಿಗೆ ಆಭರಣ ಕಾಣುವುದೇ ಇಲ್ಲ. ಚಿನ್ನ, ಚಿನ್ನದ ಬಣ್ಣ, ಆಭರಣದ ಮಾಟಕ್ಕೆ ಮರುಳಾ ಗುವುದಿಲ್ಲ. ಕಾರಣ ಚಿನ್ನ ಖರೀದಿಸುವುದಿಲ್ಲ. ಕಳುವು ಮಾಡುವುದಿಲ್ಲ. ಇದು ಜ್ಞಾನಿಗೆ ಮಾತ್ರ ಸಾಧ್ಯ! ಹಳದಿ ಲೋಹದಲ್ಲಿಯ ಆಭರಣ, ಮಾಟ, ಬಣ್ಣಕ್ಕೆ ಮರುಳಾಗಿ ಖರೀದಿಸುವ ಮತ್ತು ಕಳ್ಳತನದ ವ್ಯವಹಾರದಲ್ಲಿ ಭಾಗಿಯಾದ ಈತ ದುಷ್ಕರ್ಮಿ. ಜ್ಞಾನ ತನುವನ್ನು ಪಂಚ ಜ್ಞಾನೇಂದ್ರಿಯಗಳನ್ನು ಆವರಿಸಿಕೊಂಡು ವಿಷಯ ವಾಸನೆಯತ್ತ ತನುವನ್ನು ಕರೆದುಕೊಂಡು ಹೋಗಿ ತನುವಿನೊಂದಿಗೆ ಭೋಗಿಸಿ, ದುಷ್ಕರ್ಮಿ ಎಂದು ಜ್ಞಾನ ತನುವಿಗೆ ಪಟ್ಟ ಕಟ್ಟುತ್ತಾನೆ.

□

---

**ಅರಿವಿನ ಪರಿಮಳ :**

- □ ನೋಡುವ ಕಣ್ಣಿನಲ್ಲಿ ಪಡೆದು ಸುಖಿಸಬೇಕು ಎನ್ನುವ ದುಷ್ಕರ್ಮಿ ಆವರಿಸಿಕೊಂಡಿದ್ದಾನೆ. ಇಡೀ ತನುವನ್ನೇ ವ್ಯಾಕುಲ ಗೊಳಿಸುತ್ತಾನೆ.
- □ ಚರ್ಮ, ತನ್ನಂತೆ ಇರುವ ಚರ್ಮದ ಸ್ಪರ್ಷಕ್ಕಾಗಿ ಹಾತೊರೆಯುತ್ತದೆ. ಸ್ಪರ್ಶ ಸುಖ ಪಡೆಯಲು ಹೋಗಿ ದುಷ್ಕರ್ಮಿ ಎನ್ನುವ ಪಟ್ಟ ತನುವಿಗೆ ಕಟ್ಟುತ್ತದೆ.
- □ ಕಿವಿ ಸತ್ಕರ್ಮ, ಕಿವಿಗಂಟಿದ ಶಬ್ದ ವಾಸನೆ ದುಷ್ಕರ್ಮ, ಕೇಳಿದ ಶಬ್ದವನ್ನು ವಿಪರೀತವಾಗಿ ತಿಳಿದು ತನುವನ್ನು ಜಗಳಕ್ಕೆ ಹಚ್ಚುತ್ತದೆ. ದುಷ್ಕರ್ಮ ಎನ್ನುವ ಪಟ್ಟ ತನುವಿಗೆ ಕಟ್ಟಿ ತಾನು ಸೇಫಾಗಿ ಉಳಿಯುತ್ತದೆ.
- □ ನಾಲಿಗೆ ಸತ್ಕರ್ಮ, ನಾಲಿಗೆಗಂಟಿದ ರುಚಿ ದುಷ್ಕರ್ಮ, ಪದಾರ್ಥದಲ್ಲಿ ರುಚಿಯ ಹುಡುಕಹೋಗಿ ತನುವಿಗೆ ಸಂಕಟವನ್ನುಂಟು ಮಾಡುತ್ತದೆ. ಆ ದೋಷ ತನುವಿಗೆ ಹಚ್ಚಿ ತನುವಿನೊಂದಿಗೆ ಜಗಳ ಕಾದು ದುಷ್ಕರ್ಮದ ಪಟ್ಟ ತನುವಿಗೆ ಕಟ್ಟುತ್ತದೆ.

# ತನುವಿನ ಬಯಕೆಯ ಕಿಚ್ಚು

ಉದಕದೊಳಗೆ ಬಯ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು ;
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು ;
ನನೆಯೊಳಗಣ ಪರಿಮಳ ದಂತಿದ್ದಿತ್ತು ;
ಕೂಡಲಸಂಗಮದೇವರ ನಿಲುವು
ಕನ್ಯೆಯ ಸ್ನೇಹದಂತಿದ್ದಿತ್ತು .

-ಬಸವಣ್ಣ

ಉದಕದೊಳಗೆ ಕಿಚ್ಚು ಬಚ್ಚಿಟ್ಟುಕೊಂಡಿದೆ. ಆ ಕಿಚ್ಚು ಗಮನಕ್ಕೆ ಬರುವುದಿಲ್ಲ. ಉದಕದಿಂದಾದ ತನುವು ಕೂಡಾ ಗಮನಕ್ಕೆ ಬರುವುದಿಲ್ಲ. ಶಬ್ದ ಬಡಿದಾಗ ತನುವು ಸೀಳಿದಂತೆ ಭಾಸವಾಗುತ್ತದೆ. ಉದಕದೊಳಗಿದ್ದ ಕಿಚ್ಚು ಸುಡುವುದಿಲ್ಲ. ತನುವಿನೊಳಗಿದ್ದ ಕಿಚ್ಚು ಸುಡದೆ ಬಿಡುವುದಿಲ್ಲ. ಶಬ್ದದಿಂದ ತನು ಸುಡುವಾಗ; ಉದಕ ತನುವಿನೊಳಗಿಳಿದರೂ ತನು ಸುಡುವುದು ನಿಲ್ಲುವುದೇ ಇಲ್ಲ. ಏಕೆಂದರೆ ಕಿಚ್ಚು ತನ್ನ ಬಯಕೆಯಿಂದ ಉದಕದೊಳಗೆ ಅವಿತುಕೊಂಡಿದ್ದಕ್ಕಾಗಿ ನೀರು ರೂಪ ತಾಳಿದೆ. ಕಿಚ್ಚಿಲ್ಲದಿರೆ ನೀರಿಲ್ಲ.

ಜಲಜನಕದ ಎರಡು ಕಣಗಳು ಆಮ್ಲಜನಕದ ಒಂದು ಕಣ ಸೇರಿ ಉದಕ ಜನ್ಮತಳೆದಿದೆ. ಜಲಜನಕ ಕಿಚ್ಚಾದರೆ, ಆಮ್ಲಜನಕ ಜಲಜನಕದೊಂದಿಗೆ ಬೆರೆತು ನೀರು ಆಗಿದೆ. ನೀರಲ್ಲಿದ್ದ ಕಿಚ್ಚು ವಾಯುವಿನ ಬಯಕೆಯ ಕಿಚ್ಚಾಗಿದೆ. ಕಿಚ್ಚಿಲ್ಲದೆ ವಾಯುವಿಲ್ಲ: ವಾಯುವಿಲ್ಲದೆ ಕಿಚ್ಚಿಲ್ಲ; ಇವೆರಡೂ ಇಲ್ಲದೆ ಉದಕವಿಲ್ಲ.

ವಾಯು ಮತ್ತು ಜಲಜನಕದ ವಾಸ ಬಯಲಿನಲ್ಲೇ! ಬಯಲು ವಾಯು ಮತ್ತು ಜಲಜನಕ ಇವೆರಡನ್ನು ಸೇರಿಸಿ ನೀರು ಮಾಡಿ ತಾನು ಅದರೊಳಡಗಿದೆ.

ಬಯಲು, ಮೂರ್ತರೂಪದಲ್ಲಿ ಕಾಣುವ ಕಾತುರದಿಂದ ಜಲಬಿಂದುವಿನ ಮೂಲಕ ತನುವಿನ ಗರ್ಭ ಸೇರಿ; ಕಿಚ್ಚಿನ ಸಹಾಯದಿಂದ ಪಾಕವಾಗಿ ಪಿಂಡವಾಯಿತು. (ಆಮ್ಲಜನಕ+ ಜಲಜನಕ+ಬಯಲು=ನೀರ ಬಿಂದು) ಉದಕದ ಬಿಂದುವೇ ಗಟ್ಟಿಗೊಂಡು ಎಲುಬಾಯಿತು. ರಕ್ತ, ಮಾಂಸ ಮಜ್ಜೆ ಮೇದಸ್ಸು, ಚರ್ಮವಾಗಿ ರೂಪತಾಳಿ ತಾಯಿ ಗರ್ಭದಿಂದ ಹೊರಬಂದು ತನುವಾಯಿತು. ಜಲ ಗಟ್ಟಿಗೊಂಡ ಉದಕವೇ ತನುವು.

ತನುವಿನ ಕಣ ಕಣದಲ್ಲಿ ಬಯಲಿರುವುದರಿಂದ ತನು ಜ್ಞಾನದಿಂದ ಕೂಡಿದೆ. ತನುವಿಗೆ ಬಡಿದ ಶಬ್ದ ಬಯಲು ಸ್ವೀಕರಿಸಿದರೆ ಶಬ್ದವೆಲ್ಲ ಜ್ಞಾನವೆ ಆಗಿ; ತನುವು ಆನಂದದಿಂದ ಪುಳಕಿತಗೊಳ್ಳುತ್ತದೆ. ಶಬ್ದ ಕಿಚ್ಚು ಸ್ವೀಕರಿಸಿದರೆ ತನುವೆಲ್ಲ ಬೆಂಕಿಯಾಗಿ ಕತ ಕತನೆ ಕುದಿಯುತ್ತದೆ. ಶಬ್ದ ನುಡಿದ ತನುವನ್ನು ಕೊಂದುಹಾಕಲು ತನುವಿಗೆ ಆದೇಶ ನೀಡುತ್ತದೆ.

ಕಿಚ್ಚು-ಗಾಳಿಯನ್ನು ಒಂದೆಡೆ ಸೇರಿಸಿ ತಾನೂ ಅದರಲ್ಲಿ ಬೆರೆತ ಬಯಲು; ಬಯಲ ಬಯಕೆಗನುಗುಣವಾಗಿ ಕಿಚ್ಚು ಕಾರ್ಯನಿರ್ವಹಿಸುತ್ತದೆ. ಬಯಲೊಂದಿಗಿದ್ದ ಕಿಚ್ಚು ಸದಾ ಆನಂದದ ಕಿಚ್ಚು. ತನುವಿನೊಳಗಿದ್ದು ಸುಡದ ಕಿಚ್ಚು.

**ಸಸಿಯೊಳಗಣ ರಸದ ರುಚಿಯಂತಿದ್ದಿತ್ತು ;**

ಉದಕದ ಮಹಿಮೆ ಅನಂತ. ಕಬ್ಬಿನ ಸಸಿಯೊಳಗೆ ಸೇರಿ ಸಿಹಿಯಾಯಿತು. ಬೆಳ್ಳುಳ್ಳಿಯಲ್ಲಿ ಸೇರಿ ಘಾಟಾಯಿತು. ಈರುಳ್ಳಿ ಸಸಿಯಲ್ಲಿ ಸೇರಿ ಕಾಕು ಆಯಿತು. ಮೆಣಸಿನ ಸಸಿಯಲ್ಲಿ ಸೇರಿ ಕಾರವಾಯಿತು. ಹೀಗೆ ಉದಕ ವಿವಿಧ ಸಸಿಯಲ್ಲಿ ಸೇರಿ ಆಯಾ ರುಚಿಯಾಗಿ ಮಾರ್ಪಟ್ಟಿತು. ನೋಡಲು ಉದಕ ಒಂದೇ ಆದರೂ ಅನಂತ ರುಚಿ. ಆಯಾ ಸಸಿಯೊಳಗಣ ರಸದ ರುಚಿಯಾಗಿ ಉದಕ ಮಾರ್ಪಾಟುಗೊಂಡಿತು. ತನ್ನ ನಿಜ ನಾಮವನ್ನು ಕಳೆದುಕೊಂಡು ರುಚಿಯಾಗಿ ಮೆರೆಯಿತು.

**ನನೆಯೊಳಗಣ ಪರಿಮಳದಂತಿದ್ದಿತ್ತು :**

ಪರಿಮಳ ಸೂಸುವ ಸಸಿಗಳಿಗೆರೆದ ಉದಕ ನಾನಾ ವಿಧದ ಮೊಗ್ಗುಗಳಲ್ಲಿ ಬಂಧಿಯಾಯಿತು. ಮೊಗ್ಗುಗಳು ಅನೇಕ; ಅದರ ಪರಿಮಳವೂ ನಾನಾ ವಿಧ. ಮೊಗ್ಗಿನಲ್ಲಿ ಸೊಗಸಿದೆ; ಹೂವಿನಲ್ಲಿ ಪರಿಮಳವೂ ಸೌಂದರ್ಯವೂ ಇದೆ. ಉದಕ ಸಸಿಯೂ ಹೌದು, ಮರವೂ ಹೌದು (ನನೆ) ಮೊಗ್ಗೂ ಹೌದು, ಹೂ ಹೌದು ಅದರ ಪರಿಮಳವೂ ಹೌದು.

**ಕೂಡಲಸಂಗಮದೇವರ ನಿಲುವು ಕನ್ನೆಯ ಸ್ನೆಹದಂತಿದ್ದಿತ್ತು :**

ಅಗ್ನಿ ವಾಯು ಬಯಲು ಸೇರಿ ಜಲ ಬಿಂದುವಾಗಿ ಆ ಜಲಬಿಂದುವೇ ಗರ್ಭಸೇರಿ ಅಂಗವಾಗಿ; ಆ ಅಂಗದಲ್ಲಿ ಅರಿವೆಂಬ ಲಿಂಗ ಬೆರೆತು ಲಿಂಗಾಂಗವಾಗಿ, ಅಂಗ ಲಿಂಗ ಬೆರೆತ ಕೂಟ ಕನ್ನೆಯ ಸ್ನೇಹದಂತಿದ್ದಿತ್ತು. ಮೊಗ್ಗಿನೊಳಗಣ ಪರಿಮಳದಂತಿದ್ದಿತ್ತು. ಸಸಿಯೊಳಗಣ ರಸದ ರುಚಿಯಂತಿದ್ದಿತ್ತು. ಅಂಗದಲ್ಲಿ ಲಿಂಗ ಬೆರೆತ ಕೂಡಲ ಸಂಗಮದೇವರ ಕೂಟ ಎಂದಿದ್ದಾರೆ ಬಸವಣ್ಣ.

□

---

**ಅರಿವಿನ ಪರಿಮಳ :**

- ಉದಕ ಒಂದೇ ಆದರೂ ಅನಂತ ರುಚಿ. ಆಯಾ ಸಸಿಯೊಳಗಣ ರಸದ ರುಚಿಯಾಗಿ ಉದಕ ಮಾರ್ಪಾಟು ಗೊಂಡಿತು. ತನ್ನ ನಿಜ ನಾಮವನ್ನು ಕಳೆದುಕೊಂಡು ರುಚಿಯಾಗಿ ಮೆರೆಯಿತು.
- ಪರಿಮಳ ಸೂಸುವ ಸಸಿಗಳಿಗೆರೆದ ಉದಕ ನಾನಾ ವಿಧದ ಮೊಗ್ಗುಗಳಲ್ಲಿ ಬಂಧಿಯಾಯಿತು. ಮೊಗ್ಗುಗಳು ಅನೇಕ; ಅದರ ಪರಿಮಳವೂ ನಾನಾ ವಿಧ. ಮೊಗ್ಗಿನಲ್ಲಿ ಸೊಗಸಿದೆ; ಹೂವಿನಲ್ಲಿ ಪರಿಮಳವೂ ಸೌಂದರ್ಯವೂ ಇದೆ. ಉದಕ ಸಸಿಯೂ ಹೌದು, ಮರವೂ ಹೌದು (ನನೆ) ಮೊಗ್ಗೂ ಹೌದು, ಹೂ ಹೌದು ಆದರ ಪರಿಮಳವೂ ಹೌದು.

# ಗುರು ಕರುಣದಿಂದ ತನುವಿಗೆ ಬಂದ ಜ್ಞಾನ

□ ಜನಿತವಿಲ್ಲದೆ ನಿರ್ಜನಿತವಾದೆ.
ಸ್ಥೂಲ ಸೂಕ್ಷ್ಮದಲ್ಲಿ ನಿತ್ಯನಾದೆ.
ನಿಮ್ಮ ಘನವ ನೋಡಲ್ಕೆ ನಿಗಮಕ್ಕಭೇದ್ಯನು.
ಗುರುಕರುಣದಿಂದ ಎನ್ನ ಕರಸ್ಥಲಕ್ಕೆ ಬಂದೆ
ಕಪಿಲಸಿದ್ಧ ಮಲ್ಲಿಕಾರ್ಜುನಾ.

- ಸಿದ್ಧರಾಮ ಶಿವಯೋಗಿ

**ಜನಿತವಿಲ್ಲದೆ ನಿರ್ಜನಿತವಾದೆ. ಸ್ಥೂಲ ಸೂಕ್ಷ್ಮದಲ್ಲಿ ನಿತ್ಯನಾದೆ:**

ಸ್ಥೂಲ ಸೂಕ್ಷ್ಮ ಕಾರಣ ತನುವೆಂದು ಮೂರು ವಿಧ. ಸ್ಥೂಲ, ಸೂಕ್ಷ್ಮ ತನುವಿಗೆ ಕಾರಣವಾದ ಕಾರಣ ತನುವಿನ ಅರಿವು ಸ್ಥೂಲ ಮತ್ತು ಸೂಕ್ಷ್ಮದಲ್ಲಿ ಬೆರೆತು ನಿತ್ಯ ಸತ್ಯವಾಗಿ ಪ್ರಜ್ವಲಿಸುತ್ತಲಿದೆ. ಅಂಗದಲ್ಲಿ ಬೆರೆತು ಅಂಗ ಘನಾಂಗವಾಗಿದೆ, ಲಿಂಗವಾಗಿದೆ!

**ನಿಮ್ಮ ಘನವ ನೋಡಲ್ಕೆ ನಿಗಮಕ್ಕ ಭೇದ್ಯನು:**

ತನುವಿನ ಮಹಿಮೆ ಅಪಾರ, ವರ್ಣಿಸಲು ಅಸಾಧ್ಯ! ಕಪಿಲಸಿದ್ಧ ಮಲ್ಲಿಕಾರ್ಜುನನ ವಾಸಸ್ಥಾನವದು. ವರ್ಣಿಸಲು ಹೋದರೆ ತನುವಿಗೂ ಅಭೇದ್ಯವಾಗಿ ನಿಲ್ಲುತ್ತದೆ. ತನುವು ಎಳೆಯ; ತನುವನ್ನು ಸೃಷ್ಟಿ ಮಾಡಿದ ಆತ ಹಳೆಯ. ಜನಿತವಿಲ್ಲದ ನಿರ್ಜನಿತ. ಹುಟ್ಟಿಲ್ಲದ ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಚೆಲುವ. ಸ್ಥೂಲ ಸೂಕ್ಷ್ಮ ತನುವಿನಲ್ಲೂ ನಿತ್ಯನು.

**ಗುರುಕರುಣದಿಂದ ಎನ್ನ ಕರಸ್ಥಲಕ್ಕೆ ಬಂದೆ ಕಪಿಲಸಿದ್ಧ ಮಲ್ಲಿಕಾರ್ಜುನಾ:**

ಚೆನ್ನಬಸವಣ್ಣನ ಅನುಗ್ರಹದಿಂದ ಎನ್ನ ತನುವಿಗೆ ಬಂದ ಕಪಿಲಸಿದ್ಧ ಮಲ್ಲಿಕಾರ್ಜುನ ನೀನು. ತನುವಿನಲ್ಲಿ ಅಪಾರವಾದ ಜ್ಞಾನವಿದ್ದರೂ ಗುರುಕರುಣವಾಗದ ಮುನ್ನ ಅರಿವಿಗೆ ಬರುವುದಿಲ್ಲ. ಗುರುಕರುಣವಾದ ಬಳಿಕ ತನುವಿನಲ್ಲಿದ್ದ ಜ್ಞಾನ ತನ್ನ ಅರಿವಿಗೆ ಬಂದು ಆ ಜ್ಞಾನಕ್ಕೆ ಶರಣು ಹೋಗಿ ಶರಣನಾಗುತ್ತಾನೆ. ಆ ಜ್ಞಾನವೇ ತಾನಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನಾಗುತ್ತಾನೆ ಎಂದಿದ್ದಾರೆ ಸಿದ್ಧರಾಮ ಶರಣರು.

□

---

**ಅರಿವಿನ ಪರಿಮಳ :**

- □ ಕಾರಣ ತನುವಿನ ಅರಿವು ಸ್ಥೂಲ ಮತ್ತು ಸೂಕ್ಷ್ಮದಲ್ಲಿ ಬೆರೆತು ನಿತ್ಯ ಸತ್ಯವಾಗಿ ಪ್ರಜ್ವಲಿಸುತ್ತಲಿದೆ. ಅಂಗದಲ್ಲಿ ಬೆರೆತು ಅಂಗ ಘನಾಂಗವಾಗಿದೆ, ಲಿಂಗವಾಗಿದೆ!
- □ ತನುವಿನ ಮಹಿಮೆ ಅಪಾರ, ವರ್ಣಿಸಲು ಅಸಾಧ್ಯ! ಕಪಿಲಸಿದ್ಧ ಮಲ್ಲಿಕಾರ್ಜುನನ ವಾಸಸ್ಥಾನವದು.

# ತನುವನ್ನು ಹೆತ್ತ ಅರಿವಿಗೆ ತಂದೆ ತಾಯಿಗಳಿಲ್ಲ

ಇತ್ತವರಿಲ್ಲ ಹೆತ್ತವರಿಲ್ಲ ನಿನಗೆ
ಆದಿ ಶೂನ್ಯ ತಮಂಧನಾಗಿದ್ದೆ ನೀನಯ್ಯ
ನೀ ಶಕ್ತಿ ಪೂರವಿಸಲಿಕೆ ಎಲ್ಲವಾಗಿದ್ದೆಯ್ಯೆ
ಎನ್ನ ಕಪಿಲ ಸಿದ್ಧ ಮಲ್ಲಿನಾಥಯ್ಯನವ್ವಾ

- ಸಿದ್ಧರಾಮ ಶಿವಯೋಗಿ

**ಇತ್ತವರಿಲ್ಲ ಹೆತ್ತವರಿಲ್ಲ ನಿನಗೆ:**

ತನು ಮೂರ್ತರೂಪ ಉಳ್ಳದ್ದು. ಕಾಣುತ್ತದೆ. ಅದರ ಹುಟ್ಟು ಅಂತ್ಯ ಕೂಡಾ ಗೋಚರಿಸುತ್ತದೆ. ತನುವಿನ ತುಂಬಾ ತನ್ಮಯವಾದ ಅರಿವು ಅಮೂರ್ತರೂಪ. ಕಾಣುವುದಿಲ್ಲ. ಅದರ ಹುಟ್ಟು ಅಂತ್ಯ ಕೂಡಾ ಗೋಚರಿಸುವುದಿಲ್ಲ. ಆದಿ ಅನಾದಿಯಿಂದತ್ತತ್ತ; ಪಾತಾಳದಿಂದತ್ತತ್ತ, ಬ್ರಹ್ಮಾಂಡದಿಂದತ್ತತ್ತ. ಜಗದಗಲ ಮುಗಿಲಗಲ ವ್ಯಾಪಿಸಿರುವ ಅಮೂರ್ತ ರೂಪದ ಬಯಲನ್ನು .ಯಾರೂ ಹಡೆಯಲಿಲ್ಲ. ಆ ಅರಿವೇ ಮೂರ್ತ ರೂಪದ ತನವನ್ನು ಹಡೆದು ಆ ತನುವಿನಲ್ಲಿ ಚುಳುಕಾಗಿದೆ. ಡಿಜಿಟಲ್ಲಾಗಿದೆ. ''ಎನ್ನ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ '' ಎಂದಿದ್ದಾರೆ ಬಸವಣ್ಣನವರು.

ಆದಿಯಲ್ಲೂ ನೀನಿದ್ದೆ, ಏನೇನೂ ಇಲ್ಲದ ಶೂನ್ಯದಲ್ಲಿಯೂ ನೀನಿದ್ದೆ, ಶೂನ್ಯ ವೂ ಇಲ್ಲದ ನಿರ್ವಾತ ಪ್ರದೇಶದಲ್ಲಿಯೂ ನೀನಿದ್ದೆ. ಎಲ್ಲ ಕಾಲದಲ್ಲೂ ಎಲ್ಲೆಡೆಯೂ ನೀನಿದ್ದು ತನುವಿನ ಶಕ್ತಿ ಪೂರೈಸಲಿಕೆ ಅಮೂರ್ತ ರೂಪವಾಗಿ ಬಂದು ತನುವಿನಲ್ಲಿ ತನ್ಮಯವಾದೆ.

ಮೂರ್ತ ರೂಪದ ತನುವಿನಲ್ಲಿ ತನ್ಮಯವಾದ ಅರಿವನ್ನು ಕುರಿತು ಬಸವಣ್ಣನವರು '''ತಂದೆ ನೀನು ತಾಯಿ ನೀನು, ಬಂಧು ನೀನು, ಬಳಗ ನೀನು ನೀನಲ್ಲದೆ ಮತ್ತಾರು ಇಲ್ಲವಯ್ಯಾ ಕೂಡಲ ಸಂಗಮದೇವಾ ಹಾಲಲ್ಲಾದರೂ ಅದ್ದು, ನೀರಲ್ಲಾದರೂ ಅದ್ದು ನಿಮ್ಮ ದೈವ '' ಎಂದಿದ್ದಾರೆ.

ಇಂತಹ ದೈವ ಸ್ವರೂಪವಾದ (ಜ್ಞಾನ) ಲಿಂಗವನ್ನು ಇತ್ತವರಿಲ್ಲ, ಹೆತ್ತವರಿಲ್ಲ, ನಿನ್ನ ಶಕ್ತಿ ಪರಿಚಯಿಸಲಿಕೆ ನೀನೇ ತನುವನ್ನು ಹೆತ್ತು ಆ ತನುವಿನಲ್ಲಿ ತನ್ಮಯವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನಾದೆ ಎಂದಿದ್ದಾರೆ ಸಿದ್ಧರಾಮ ಶರಣರು.

□

---

**ಅರಿವಿನ ಪರಿಮಳ :**

- ತನುವಿನ ತುಂಬಾ ತನ್ಮಯವಾದ ಅರಿವು ಅಮೂರ್ತರೂಪ. ಕಾಣುವುದಿಲ್ಲ. ಅದರ ಹುಟ್ಟು ಅಂತ್ಯ ಕೂಡಾ ಗೋಚರಿಸುವುದಿಲ್ಲ.
- ದೈವ ಸ್ವರೂಪವಾದ (ಜ್ಞಾನ) ಲಿಂಗವನ್ನು ಇತ್ತವರಿಲ್ಲ, ಹೆತ್ತವರಿಲ್ಲ, ನಿನ್ನ ಶಕ್ತಿ ಪರಿಚಯಿಸಲಿಕೆ ನೀನೇ ತನುವನ್ನು ಹೆತ್ತು ಆ ತನುವಿನಲ್ಲಿ ತನ್ಮಯವಾಗಿ ಕಪಿಲಸಿದ್ಧ ಮಲ್ಲಿಕಾರ್ಜುನನಾದೆ

# ಹುಟ್ಟು ಸಾವುಗಳಿಲ್ಲದ ಚಿರಂಜೀವಿ

**ಅರಿತವನೆಂತು ಸತ್ತನು? ಅರಿತವನೆಂತು ಹುಟ್ಟಿದನು?**
**ಅರಿತವನೆಂತು ಅಘೋರ ಪಾಷಕ್ಕೆ ಒಳಗಾದನು?**
**ಅರಿತವನೆ ಚಿರಂಜೀವಿ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನ**
**- ಸಿದ್ಧರಾಮ ಶಿವಯೋಗಿ**

ತನ್ನನ್ನು ತಾನರಿತವನಿಗೆ ಸಾವಿಲ್ಲ. ತನ್ನನ್ನು ತಾನರಿತವನಿಗೆ ಹುಟ್ಟಿಲ್ಲ. ತನ್ನನ್ನು ತಾನರಿತವನಿಗೆ ದುಃಖಗಳಿಲ್ಲ. ತನ್ನನ್ನು ತಾನರಿತವನೆ ಚಿರಂಜೀವಿ ಎಂದು ಸಿದ್ಧರಾಮ ಶಿವಯೋಗಿಗಳು ತಮ್ಮ ಮೂರು ಸಾಲಿನ ವಚನದಲ್ಲಿ ಘೋಷಣೆ ಮಾಡಿದ್ದಾರೆ.

ತನ್ನನ್ನು ತಾನು ತಿಳಿಯುವ ಸಂಪತ್ತು ತನ್ನಲ್ಲಿಯೇ ಇದೆ. ಆದರೂ ತಿಳಿಯಲು ಸಾಧ್ಯವಾಗುವುದಿಲ್ಲ. ತಾನು ಇತರರನ್ನು ಇತರ ಸಂಪತ್ತನ್ನು ತಿಳಿಯುತ್ತಾನೆ ; ಸಾಧ್ಯವಾದರೆ ಇಡೀ ಜಗತ್ತನ್ನೇ ತಿಳಿಯುತ್ತಾನೆ. ಭೂಮಿ ಕೊರೆದು ಸಕಲ ಪದಾರ್ಥಗಳನ್ನು ತೆಗೆದು ಅದರ ಉದ್ದ ಅಗಲ ಆಳ ಅಳೆಯುತ್ತಾನೆ. ಸಾಗರದ ಆಳಕ್ಕಿಳಿದು ಸಂಶೋಧನೆ ಮಾಡುತ್ತಾನೆ. ಆಕಾಶದೆತ್ತರಕ್ಕೆ ಜಿಗಿದು ಆಕಾಶ ಕಾಯ ಚಂದ್ರ ಮಂಗಳ ಸೂರ್ಯ ಗ್ರಹಗಳ ಕುರಿತು ಅಭ್ಯಾಸ ಮಾಡುತ್ತಾನೆ. ಇವೆಲ್ಲವೂ ತನಗೆ ಕರಗತವಾಗಿವೆ, ತನ್ನನ್ನು ತಾನು ತಿಳಿಯುವುದು ಮಾತ್ರ ಹಾಗೆ ಉಳಿದಿದೆ.

ಹುಟ್ಟು ಸಂಭ್ರಮ, ಆದರೂ ಚಾರಿತ್ರ್ಯ ಜಾತಿ, ಮತ ಪಂಥ, ಹೆಣ್ಣು,ಗಂಡು ಶ್ರೀಮಂತ ಬಡವನೆಂದು ತನುವನ್ನು ಗುರುತಿಸಿಕೊಂಡು ಸಂಕಟಪಡುತ್ತದೆ. ತನುವಿರುವವರೆಗೂ ಊಟಕ್ಕಾಗಿ ಪದಾರ್ಥಗಳ ಸಂಗ್ರಹಕ್ಕಾಗಿ ತಾನು ಕಲಿತ ವಿದ್ಯೆಯ ಪ್ರದರ್ಶನಕ್ಕಾಗಿ ತನ್ನಂತೆ ಇರುವ ತನುಗಳೊಂದಿಗೆ ಸುಖಿಸುವ ಕಾತರಕ್ಕಾಗಿ ಅಧಿಕಾರಕ್ಕಾಗಿ, ಗೌರವಕ್ಕಾಗಿ ಉದ್ಯೋಗ,ಉಪಜೀವನಕ್ಕಾಗಿ ನರಕ ಯಾತನೆಯನ್ನನುಭವಿಸುತ್ತದೆ. ಅಘೋರ ಪಾಷಕ್ಕೆ ಒಳಗಾಗುತ್ತದೆ. ರೋಗರುಜಿನಗಳಿಂದುಂಟಾಗುವ ಸಾವಿನ ಭಯಕ್ಕಾಗಿ ಸಂಕಟ ಪಡುತ್ತದೆ. ಯಾವ ವೈದ್ಯನೂ ಚಿರಂಜೀವಿಯಾಗಿ ಉಳಿಯುವ ಔಷಧಿ ಒಡಲಿಗೆ ಕೊಡಲಾರ.

ಮಹಾಜ್ಞಾನಿ ಕಪಿಲಸಿದ್ಧ ಮಲ್ಲಿಕಾರ್ಜುನ ನೆಂಬ ಭವರೋಗ ವೈದ್ಯ ಮಾತ್ರ ಹುಟ್ಟು ಸಾವುಗಳಿಗೆ ಚಿಕಿತ್ಸೆ ನೀಡಿ ಚಿರಂಜೀವಿಯನ್ನಾಗಿ ಮಾಡಬಲ್ಲ.ಆತ ಒಡಲೊಡೆಯ. ಒಡಲಿನಲ್ಲಿಯೇ ಇದ್ದು, ಒಡಲು ಸೋಂಕದೆ ಒಡಲ ಬೆಳಗುತ್ತಾನೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತಾನೆ. ಆದರೂ ಆತನ ಪರಿಚಯ ಒಡಲಿಗಾಗುವದೇ ಇಲ್ಲ. ಗುರು ಕರುಣದಿಂದ ಮಾತ್ರ ಸಾಧ್ಯ! ತನ್ನನ್ನು ತಾನು ತಿಳಿಯುವ ಕೌತುಕ ಆತುರದ ಕುತೂಹಲಿಗಳಿಗೆ ಮಾತ್ರ ಸಮರ್ಥ ಗುರುವಿನ ಭಾಗ್ಯ ದೊರೆಯುತ್ತದೆ. ಆತ ಒಡಲಾಳಕ್ಕಿಳಿಯುತ್ತಾನೆ. ಒಡಲ ಬೆಳಕಿನ ಸಹಾಯದಿಂದ ಸಾವನ್ನು ಹುಟ್ಟನ್ನೂ ಬೆಳಗುತ್ತಾನೆ. ಸಾವಿಲ್ಲದ ರೂಹಿಲ್ಲದ ಕೇಡಿಲ್ಲದ ಚೆಲುವ ಚಿರಂಜೀವಿಯಾಗುತ್ತಾನೆ. ಕಪಿಲಸಿದ್ಧ ಮಲ್ಲಿಕಾರ್ಜುನನೇ ತಾನಾಗುತ್ತಾನೆ.

□

**ಅರಿವಿನ ಪರಿಮಳ :**

- ಹುಟ್ಟು ಸಂಭ್ರಮ, ಆದರೂ ಚಾರಿತ್ರ್ಯ ಜಾತಿ, ಮತ ಪಂಥ, ಹೆಣ್ಣು,ಗಂಡು ಶ್ರೀಮಂತ ಬಡವನೆಂದು ತನುವನ್ನು ಗುರುತಿಸಿಕೊಂಡು ಸಂಕಟಪಡುತ್ತದೆ.

# ತನುವಿನ ಬೆಳಕು ಶತಕೋಟಿ ಸೂರ್ಯ ಪ್ರಕಾಶಕ್ಕತೀತ

**ಅಯ್ಯಾ ನಿಮ್ಮ ಕಂಡು ಕಂಗಳು ನೋಡಲಮ್ಮದೆ**
**ಬೆಚ್ಚಿಬೆದರಿದುವಯ್ಯಾ;**
**ನೀನು ಶತಕೋಟಿ ಸೂರ್ಯಪ್ರಕಾಶಕ್ಕತೀತನು !**
**ನಿನ್ನ ಕಂಡ ಬಳಿಕ ಕರ್ಮವುಂಟೇ?**
**ಕಪಿಲ ಸಿದ್ಧ ಮಲ್ಲಿಕಾರ್ಜುನಾ .**

**- ಸಿದ್ಧರಾಮ ಶಿವಯೋಗಿ**

**ಅಯ್ಯಾ ನಿಮ್ಮ ಕಂಡು ಕಂಗಳು ನೋಡಲಮ್ಮದೆ ಬೆಚ್ಚಿ ಬೆದರಿದುವಯ್ಯಾ; ನೀನು ಶತಕೋಟಿ ಸೂರ್ಯಪ್ರಕಾಶಕ್ಕತೀತನು :**

ನಿಮ್ಮನ್ನು ಕಂಡು ಕಣ್ಣುಗಳು ನೋಡಲಾರದೆ ಬೆಚ್ಚಿ ಬೆದರಿದವು. ನೀನು ನೂರು ಕೋಟಿ ಸೂರ್ಯಪ್ರಕಾಶಕ್ಕೆ ಅತೀತನು ! ರೂಪವನ್ನು ಬೆಳಗುವ ಸ್ವರೂಪದ ಬೆಳಕು ನೋಡಲಾರದೆ ಕಣ್ಣು ಗಳು ಬೆಚ್ಚಿ ಬೆದರಿದವು ಎನ್ನುತ್ತಾರೆ ಸಿದ್ಧರಾಮ ಶರಣರು.

ಶ್ರೀಕೃಷ್ಣ ಮಹಾಭಾರತದ ಯುದ್ಧ ತಡೆಯಲು ಕೌರವಾಧೀಶನಲ್ಲಿ ಸಂಧಾನಕ್ಕೆಂದು ಹೋಗುತ್ತಾನೆ. ದುರ್ಯೋಧನ, ಶ್ರೀಕೃಷ್ಣ ನನ್ನು ಬಂಧಿಮಾಡಿ ಕಾರಾಗೃಹಕ್ಕೆ ತಳ್ಳಲು ಹೊಂಚು ಹಾಕುತ್ತಾನೆ. ಆಗ ಶ್ರೀಕೃಷ್ಣ ತನ್ನ ವಿರಾಟ ಸ್ವರೂಪವನ್ನು ತೋರಿಸುತ್ತಾನೆ. ಪ್ರಜ್ವಲಿಸುವ ಆ ಬೆಳಕು ನೋಡಲಾರದೆ ಎಲ್ಲಗೂ ಕಣ್ಣು ಮುಚ್ಚಿಕೊಳ್ಳುತ್ತಾರೆ. ಭೀಷ್ಮ, ವಿದುರ, ದ್ರೋಣರು ಮಾತ್ರ ನೋಡುತ್ತಾರೆ. ವ್ಯೋಮಕಾಯನಾದ ನನ್ನನ್ನು ನೀವು ಬಂಧಿಸಲು ಸಾಧ್ಯವೆ? ಎಂದು ಕೃಷ್ಣ ಪ್ರಶ್ನಿಸುವ ಪ್ರಸಂಗ ಬರುತ್ತದೆ.

ತನ್ನನ್ನು ಬೆಳಗುವ ಬೆಳಕು ಶತಕೋಟಿ ಸೂರ್ಯಪ್ರಕಾಶಕ್ಕೆ ಅತೀತವಾದದ್ದು. ಆ ಬೆಳಕನ್ನು ಕಂಡ ತನ್ನ ಕಣ್ಣುಗಳು ಬೆಚ್ಚಿ ಬೆದರಿದವು. ತಾನೂ ಆ ಬೆಳಕಾದ. ಬೆಳಕಿಗೆ ಬೆಳಗುವುದೊಂದೇ ಕೆಲಸ. ತನ್ನ ಬೆಳಕನ್ನು ಇತರರಿಗೆ ತೋರಿಸಲು ಬರುವುದಿಲ್ಲ. ತನ್ನಲ್ಲಿಯ ಜ್ಞಾನ ತಾನು ನೋಡಲು ಬ ರುತ್ತದೆ. ಇತರರಿಗೆ ತೋರಿಸಲು ಬರುವುದಿಲ್ಲ. ಸಿದ್ಧರಾಮ, ಬಸವಣ್ಣ, ಅಲ್ಲಮಪ್ರಭು ಮುಂತಾದ ಶರಣರು ತಮ್ಮ ಜ್ಞಾನ ತಾವು ನೋಡಿ ಆನಂದಪಟ್ಟರು. ಇತರರಲ್ಲಿಯೂ ಇರುವ ಮಹಾಜ್ಞಾನವನ್ನು ನೋಡಿ ತಮ್ಮಂತೆಯೇ ಬಗೆದರು. 'ಭೂ ಲೋಕದಲ್ಲಿರುವ ಜನವೆಲ್ಲ ಸಾಕ್ಷಾತ್ ಕೂಡಲ ಸಂಗನ ಶರಣರ ಪಡಿಯಚ್ಚು ನಾನೊಬ್ಬನೇ ಭಕ್ತ' ಎಂದರು ಬಸವಣ್ಣ.

ಶರಣರು ಇತರರಿಗೆ ನಾವು ಹೀಗೆ ಎಂದು ತೋರಿಸಲಿಲ್ಲ. ಸಮೀಪ ಬಂದವರಿಗೆ ನೀವು ಹೀಗೆ ಮಹಾಜ್ಞಾನಿಗಳು ಎಂದು ತೋರಿಸಿದರು. ಶ್ರೀಕೃಷ್ಣನಾದರೂ ತಾನು ಹೀಗೆ ಎಂದು ತೋರಿಸ ಲಿಲ್ಲ. ತನ್ನಲ್ಲಿರುವ ಮಹಾಜ್ಞಾನ ಇತರರಲ್ಲಿರುವ ಮಹಾಜ್ಞಾನ ಒಂದೇ. ಅದು ವಿರಾಟ ಸ್ವರೂಪ. ಜಗದಗಲ ಮುಗಿಲಗಲ ಆದರ ವಿಸ್ತಾರ, ಪಾತಾಳದಿಂದತ್ತತ್ತ ಬ್ರಹ್ಮಾಂಡದಿಂದತ್ತತ್ತ ಚಾಚಿಕೊಂಡಿರುವ ಬಯಲ ಗರ್ಭದಲ್ಲಿ ಸೂರ್ಯ, ಚಂದ್ರ, ಭೂಮಿ ಅಗ್ನಿ ನಕ್ಷತ್ರ, ಆಕಾಶ ಕಾಯಗಳ ವಾಸ !

ಬಯಲ ಪ್ರತಿ ರೂಪವೇ ತನುವಿನ ಸ್ವರೂಪ. ಆಮ್ಲ ಜನಕ, ಜಲಜನಕ, ಬಯಲು

ಮಿಶ್ರಣದ ಒಂದು ಕಣವೇ ಜಲಬಿಂದು ಆ ಜಲ ಬಿಂದುವಿನ ಗರ್ಭ ಪ್ರವೇಶದಿಂದಲೇ ತನು.

ಈ ತನು ಹೇಗೆ ಬಯಲು ಎನ್ನುವುದಕ್ಕೆ 'ಬಯಲು ಬಯಲನೇ ಬಿತ್ತಿ ಬಯಲು ಬಯಲನೇ ಬೆಳೆದು,ಬಯಲು ಬಯಲಾಗಿ ಬಯಲಾಯಿತ್ತಯ್ಯಾ, ಬಯಲ ಜೀವನ,ಬಯಲ ಭಾವನೆ, ಬಯಲು ಬಯಲಾಗಿ ಬಯಲಾಯಿತ್ತಯ್ಯ. ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ' ಎಂದು ಅಲ್ಲಮ ಪ್ರಭುಗಳು ತಾನು ತನ್ನಲ್ಲಿರುವ ವಿರಾಟ ಸ್ವರೂಪ ವೀಕ್ಷಿಸಿ ಆ ಸ್ವರೂಪವೇ ತಾನಾಗುವ ಸೂತ್ರ ರಚಿಸಿದ್ದಾರೆ. ತಿಳಿಯುವ ಕುತೂಹಲಿಗನಾಗಬೇಕಷ್ಟೆ.



□

**ಅರಿವಿನ ಪರಿಮಳ :**

- □ ಬೆಳಕಿಗೆ ಬೆಳಗುವುದೊಂದೇ ಕೆಲಸ. ತನ್ನ ಬೆಳಕನ್ನು ಇತರರಿಗೆ ತೋರಿಸಲು ಬೆಳಕಿಗೆ ಬರುವುದಿಲ್ಲ.
- □ ತನ್ನಲ್ಲಿಯ ಜ್ಞಾನ ತಾನು ನೋಡಲು ಬರುತ್ತದೆ. ಇತರರಿಗೆ ತೋರಿಸಲು ಬರುವುದಿಲ್ಲ.
- □ ಶರಣರು ಇತರರಿಗೆ ನಾವು ಹೀಗೆ ಎಂದು ತೋರಿಸಲಿಲ್ಲ. ಸಮೀಪ ಬಂದವರಿಗೆ ನೀವು ಹೀಗೆ ಮಹಾಜ್ಞಾನಿಗಳು ಎಂದು ತೋರಿಸಿದರು. ಶ್ರೀಕೃಷ್ಣನಾದರೂ ತಾನು ಹೀಗೆ ಎಂದು ತೋರಿಸಲಿಲ್ಲ. ತನ್ನಲ್ಲಿರುವ ಮಹಾಜ್ಞಾನ ಇತರರಲ್ಲಿರುವ ಮಹಾಜ್ಞಾನ ಒಂದೇ. ಅದು ವಿರಾಟ ಸ್ವರೂಪ. ಜಗದಗಲ ಮುಗಿಲಗಲ ಅದರ ವಿಸ್ತಾರ, ಪಾತಾಳದಿಂದತ್ತತ್ತ ಬ್ರಹ್ಮಾಂಡದಿಂದತ್ತತ್ತ ಚಾಚಿಕೊಂಡಿರುವ ಬಯಲ ಗರ್ಭದಲ್ಲಿ ಸೂರ್ಯ, ಚಂದ್ರ, ಭೂಮಿ ಅಗ್ನಿ ನಕ್ಷತ್ರ, ಆಕಾಶ ಕಾಯಗಳ ವಾಸ !

# ಗಂಡ ಬಲ್ಲುದ ಹೆಂಡತಿ ತಿಳಿಯಳು

**ಎಲ್ಲರ ಪರಿಯಲ್ಲ ಎಮ್ಮ ಗಂಡನ ಪರಿ.**
**ಒಬ್ಬರು ಬಲ್ಲುದ ತಾನರಿಯ, ತಾ ಬಲ್ಲುದನೊಬ್ಬರರಿಯರು.**
**ತವಕ ಬಂದಲ್ಲಿ ಕೂಡುವ, ಅಲ್ಲದಡೊಲ್ಲದ ಹಾಂಗಿರ್ಪ,**
**ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನು.**

**– ಸಿದ್ಧರಾಮ ಶಿವಯೋಗಿ**

**ಎಲ್ಲರ ಪರಿಯಲ್ಲ ಎಮ್ಮ ಗಂಡನ ಪರಿ. :**

ಭಾರತ ಪುಣ್ಯಭೂಮಿ. ಸದಾ ಸತ್ಯದ ಜೊತೆಗೆ ಸಂಗ ಬೆಳೆಸಿ ಸತ್ ಸಂಗಿಯಾಗಿರಬೇಕೆಂಬ ಹಂಬಲ ಹೊಂದಿದ ಉತ್ಕಟೇಚ್ಛೆಗಳ ಭೂಮಿ.

ಭಾಷೆ ಹಲವಾದರೂ ಅನುಭಾವ ಮಾತ್ರ ಒಂದೇ.

ಗಂಡ ಎನ್ನುವ ಪದ ಜ್ಞಾನ, ಗುರು, ಒಡೆಯ, ದೇವರು, ಅರಿವು ಎನ್ನುವ ವಿಶೇಷ ಅರ್ಥ ಕೊಡುವ ಬೆಡಗಿನ ಪದ.

ಹೆಂಡತಿ ಎನ್ನುವ ಪದ ಜ್ಞಾನ, ಗುರು, ದೇವರು, ಒಡೆಯ ಎನ್ನುವ ಅರಿವಿಗೆ ಸದಾ ದಾಸನಾಗಿರಬೇಕೆಂಬ ವಿಶೇಷ ಅರ್ಥ ಕೊಡುವ ಬೆಡಗಿನ ಪದ.

ಮಹಾಜ್ಞಾನಿ ಶಂಕರಾಚಾರ್ಯರು ಗಂಡನ ವಿರಾಟ ಸ್ವರೂಪವನ್ನು ತಮ್ಮ ಶಿವಾನಂದ ಲಹರಿಯಲ್ಲಿ ನೂರು ವಚನಗಳ ಮೂಲಕ ವರ್ಣಿಸಿದ್ದಾರೆ.

ಹಾಗೆಯೇ ಆತನ ದಾಸಿ ಪಟ್ಟದರಸಿ ಶಿವೆಯ ಕುರಿತು ಸೌಂದರ್ಯ ಲಹರಿಯಲ್ಲಿನೂರು ವಚನಗಳ ಮೂಲಕ ಬಣ್ಣಿಸಿದ್ದಾರೆ. ಅವೆರಡೂ ಹೊತ್ತಿಗೆಗಳನ್ನು ನಾನಾಗಿ ಓದಬೇಕಷ್ಟೆ. ಶಿವ ಬೇರೆ ಆತನ ಸತಿ ಗೌರಿ ಬೇರೆ ಎಂಬ ಅಜ್ಞಾನದ ಬೇರು ಕಿತ್ತಿ ಓದಬೇಕಷ್ಟೆ!

ಸಿದ್ಧರಾಮ ಶರಣರು ಲೋಕಕ್ಕೆ ಗಂಡಾದರೂ ತಾವು ಹೆಣ್ಣಾಗಿ ತನ್ನ ಅರಿವೆಂಬ ಗಂಡನನ್ನು ಕುರಿತು ಹಾಡಿದ್ದಾರೆ.

**ಎಲ್ಲರ ಪರಿಯಲ್ಲ ಎಮ್ಮ ಗಂಡನ ಪರಿ. ಒಬ್ಬರು ಬಲ್ಲುದ ತಾನರಿಯ, ತಾ ಬಲ್ಲುದನೊಬ್ಬರರಿಯರು :**

ನಾನು ಅಜ್ಞಾನಿ, ಅವನು ಜ್ಞಾನಿ. ನನಗೆ ಬೇಕಾದುದು ಅವನಿಗೆ ಕ್ಷುಲ್ಲಕ. ಗಂಡನಿಗೆ ಹೆಂಡತಿ – ಮಾತ್ರ ಬೇಕು. ಹೆಂಡತಿಗೆ ಹೊರಗಿನದೆಲ್ಲ ಬೇಕು. ಹೆಂಡತಿ ಆಭರಣ ಕೊಂಡಾಗ ಹಳದಿ ಲೋಹದ ಮೇಲೆ ಇಷ್ಟೊಂದು ಪ್ರೀತಿಯೆ ಎಂದು ಅರಿವೆಂಬ ತನುವಿನ ಗಂಡ ಜರಿಯುತ್ತಾನೆ. ಬಟ್ಟೆಗೆ ಮಾರು ಹೋದಾಗ ಅದರಲ್ಲಿಯ ನೂಲು ತೋರಿ ಅಲ್ಲಗಳೆಯುತ್ತಾನೆ.

ರೂಪಕ್ಕೆ ಮಾರು ಹೋದಾಗ ರೂಪದಲ್ಲಿಯ ನಿರೂಪ ತೋರಿ ಮೆರೆಯುತ್ತಾನೆ. ರುಚಿಗೆ ಮಾರು ಹೋದಾಗ ರುಚಿಯಲ್ಲಿಯ ಸತ್ಯದ ಅರುಚಿ ತೋರಿ ಮೆರೆಯುತ್ತಾನೆ. ಸ್ಪರ್ಶ ಸುಖಕ್ಕೆ ಮಾರು ಹೋದಾಗ ಚರ್ಮದ ನಿಜಜ್ಞಾನ ತೋರಿ ಮೆರೆಯುತ್ತಾನೆ. ಗಂಡು ಹೆಣ್ಣು, ಜಾತಿ, ಮತ, ಶ್ರೀಮಂತ ಬಡವ, ನೆಲ ಜಲ, ದೇಶ ಭಾಷೆ ಎನ್ನುವ ಅಜ್ಞಾನ ಕಿತ್ತೆಸೆದು ನನ್ನನ್ನು ತನ್ನಂತೆ ಮಾಡಿಕೊಂಡು

ಅರ್ಧ ನಾರೀಶ್ವರನಾಗುತ್ತಾನೆ. ಆದರೂ ನಾನು ತಿಳಿದದ್ದು ಆತನಿಗೆ ಕ್ಷುಲ್ಲಕ. ಆತ ತಿಳಿದದ್ದು ಒಬ್ಬರೂ ತಿಳಿಯರು. ಹೆಂಡತಿಗೆ ಹೊರಗಿನದನ್ನು ತಿಳಿದು ಹೌದೆನ್ನಿಸಿಕೊಳ್ಳುವ ತವಕ. ಹೊರಗಿನದೆಲ್ಲವನ್ನೂ ಅಲ್ಲಗಳೆದು ನಿರಂತರ ಉಪದೇಶ ನೀಡುವ ತವಕ ಗಂಡನಿಗೆ !

ಆತನ ಉಪದೇಶ ತಿಳಿಯುವ ತವಕ ಉಂಟಾದಲ್ಲಿ ಮಾತ್ರ ಹೆಂಡತಿಯೊಂದಿಗೆ ಕೂಡುತ್ತಾನೆ. ಇಲ್ಲದಿದ್ದಲ್ಲಿ ಹಾಗೆ ಇರುವ. ಎತ್ತು ಏರಿಗೆ ಎಳೆದರೆ ಕೋಣ ಕೆರೆಗೆ ಎಳೆದಂತೆ. ಗಂಡನ ಪರಿಚಯ ಹೆಂಡತಿಗಿಲ್ಲ; ಹೆಂಡತಿ ಪರಿಚಯ ಗಂಡನಿಗಿಲ್ಲ.

□

**ಅರಿವಿನ ಪರಿಮಳ :**

- □ ಗಂಡ ಎನ್ನುವ ಪದ ಜ್ಞಾನ, ಗುರು, ಒಡೆಯ, ದೇವರು, ಅರಿವು ಎನ್ನುವ ವಿಶೇಷ ಅರ್ಥ ಕೊಡುವ ಬೆಡಗಿನ ಪದ.
- □ ಹೆಂಡತಿ ಎನ್ನುವ ಪದ ಜ್ಞಾನ, ಗುರು, ದೇವರು, ಒಡೆಯ ಎನ್ನುವ ಅರಿವಿಗೆ ಸದಾ ದಾಸನಾಗಿರಬೇಕೆಂಬ ವಿಶೇಷ ಅರ್ಥ ಕೊಡುವ ಬೆಡಗಿನ ಪದ.
- □ ಸಿದ್ಧರಾಮ ಶರಣರು ಲೋಕಕ್ಕೆ ಗಂಡಾದರೂ ತಾವು ಹೆಣ್ಣಾಗಿ ತನ್ನ ಅರಿವೆಂಬ ಗಂಡನನ್ನು ಕುರಿತು ಹಾಡಿದ್ದಾರೆ.

# ಮಾಯೆ ಗೆಲ್ಲುವ ಪ್ರಭುವಿನ ಸೂತ್ರ

**ಕೊಂಡ ಆಹಾರದ ರಸವ ಕಟ್ಟಿ**
**ಯೋಗಿಗಳಾದೆವೆಂಬ ಭಂಡರು ನೀವು ಕೇಳಿರೊ.**
**ಜೋಡು ದೇಹದ ಮಲಿನವ ಕಟ್ಟಿ ಮಾಯೆಯ ಗೆದ್ದಿಹೆವೆಂಬರು**
**ಬಿಂದುವಿನ ಸಂಚವ ನಿವರೆತ್ತ ಬಲ್ಲರು?**
**ಮನದ ಮಲಿನವೆ ಮಾಯೆ, ಮನದ ಸಂಚವೆ ಬಿಂದು**
**ಇಂತಪ್ಪ ಬಿಂದುವ ಕಟ್ಟಿ ಮಾಯೆಯ ಗೆಲಲರಿಯದವರು**
**ಅವರೆತ್ತಣ ಯೋಗಿಗಳು ಗುಹೇಶ್ವರಾ?**

**- ಅಲ್ಲಮಪ್ರಭು**

ಉಪವಾಸದಿಂದ ಅನುಷ್ಠಾನಕ್ಕೆ ಕುಳಿತು ಯೋಗಿ ಅನ್ನಿಸಿಕೊಂಡವ, ದೇಹದ ಸಂಪರ್ಕವಿಲ್ಲದೆ ಬ್ರಹ್ಮಚರ್ಯೆ ಪಾಲಿಸಿ ಯೋಗಿ ಅನ್ನಿಸಿಕೊಂಡವ ಇವರಿಬ್ಬರನ್ನು ಅಲ್ಲಮಪ್ರಭುಗಳು ಭಂಡರು ಎಂದಿದ್ದಾರೆ.

''ಕೌಪ ಕಾಶಾಯಾಂಬರವ ಕಟ್ಟಿ, ಮಂಡೆ ಬೋಳಾದಡೇನಯ್ಯಾ , ಎನ್ನಲ್ಲಿ ನಿಜವಿಲ್ಲದನ್ನಕ್ಕ? ಹೊನ್ನು ಹೆಣ್ಣು ಮಣ್ಣು ತ್ರಿವಿಧವ ತೊರೆದಡೇನಯ್ಯಾ ಮನದಲ್ಲಿ ವ್ರತಿಯಾಗದನ್ನಕ್ಕ ? ಹಸಿವು ತೃಷೆ ವ್ಯಸನಾದಿಗಳ ಬಿಟ್ಟಡೇನಯ್ಯಾ ? ಅರ್ಥದಿಚ್ಛೆ ಮನದಲ್ಲಿ ಹಿಂಗದನ್ನಕ್ಕ ? ಆನು ಜಂಗಮವೇ ? ಆನು ಹಿರಿಯನಾದೆನಲ್ಲದೆ ಆನು ಜಂಗಮವೆ? ಒಡಲಿಲ್ಲದಾತ ಬಸವಣ್ಣ, ಪ್ರಾಣವಿಲ್ಲದಾತ ಬಸವಣ್ಣ. ಎನ್ನ ಬಸವಣ್ಣನಾಗಿ ಹುಟ್ಟಿಸದೆ ಪ್ರಭುವಾಗಿ ಏಕೆ ಹುಟ್ಟಿಸಿದಿ ಗುಹೇಶ್ವರಾ ?''

ಉಪವಾಸವಿದ್ದು, ದೇಹ ಸಂಪರ್ಕ ನಿಯಂತ್ರಣ ಮಾಡಿದವನನ್ನು ಜನ ಗೌರವಿಸುತ್ತಾರೆ. ಅವನಿಗೆ ಸ್ವಾಮಿ ,ಯೋಗಿ, ಜಂಗಮನೆಂಬ ಹಿರಿಯ ಪದವಿ ನೀಡಿ ಪೀಠದ ಮೇಲೆ ಕೂಡಿಸಿ ವಂದಿಸುತ್ತಾರೆ. ಅವನು ಜನಕ್ಕೆ ಯೋಗಿಯಾದನೆ ಹೊರತು ತನಗೆ ತಾನು ಯೋಗಿಯಾಗಲಿಲ್ಲ. ಹೀಗೆ ಮೋಸ ಮಾಡಿಕೊಳ್ಳುವ ಮನವನ್ನು ಪ್ರಭು ಭಂಡನೆಂದು ಜರೆದರು.

**ಜೋಡು ದೇಹವ ಮಲಿನವ ಕಟ್ಟಿ ಮಾಯೆಯ ಗೆದ್ದಿಹೆವೆಂಬರು. ಬಿಂದುವಿನ ಸಂಚವನಿ ವರೆತ್ತ ಬಲ್ಲರು ? :**

ನಿಯಂತ್ರಣದಲ್ಲಿದ್ದು ಯೋಗಿಯಾದವನು ಕಾಮ ಗೆದ್ದವನಲ್ಲ, ಜೋಡು ದೇಹ ಕೂಡಿ ದಾಗ ಹೊರಚೆಲ್ಲುವ ಬಿಂದುವಿನ ಸಂಚು ಜ್ಞಾನದಿಂದ ತಿಳಿಯಲು ಇವರಿಗೆ ಸಾಧ್ಯವಾಗುವುದೇ ಇಲ್ಲ.

**ಮನದ ಮಲಿನವೆ ಮಾಯೆ, ಮನದ ಸಂಚವೆ ಬಿಂದು. ಇಂತಪ್ಪ ಬಿಂದುವ ಕಟ್ಟಿ ಮಾಯೆಯ ಗೆಲಲರಿಯದವರು ಅವರೆತ್ತಣ ಯೋಗಿಗಳು ಗುಹೇಶ್ವರಾ ?:**

ಮನಸ್ಸಿನ ಮಲಿನವೆ ಮಾಯೆ, ಮನದ ಸಂಚವೆ ಬಿಂದು ಇಂತಹ ಬಿಂದುವಿನ ಗುಟ್ಟು ತಿಳಿದು ಮಾಯೆಯ ಗೆಲಲರಿಯದವರು ಯೋಗಿಗಳಲ್ಲ. ತಮ್ಮನ್ನು ತಾವು ಮೋಸ ಮಾಡಿಕೊಂಡ ವರು. ಇಂತಹ ವೇಷದ ಸಕಲ ಯೋಗಿಗಳಿಗೆ ತಿಳಿಯಲೆಂದೇ ಪ್ರಭುಗಳು ಹಸಿವು ತೃಷೆ ವ್ಯಸನಾದಿಗಳ ಬಿಟ್ಟಡೇನಯ್ಯಾ ಅರ್ಥದಿಚ್ಛೆ ಮನದಲ್ಲಿ ಹಿಂಗದನ್ನಕ್ಕ ? ಆನು ಜಂಗಮವೇ ? ಆನು ಹಿರಿಯನಾದೆ ನಲ್ಲದೆ ಆನು ಜಂಗಮವೇ ? ಒಡಲಿಲ್ಲದಾತ ಬಸವಣ್ಣ, ಪ್ರಾಣವಿಲ್ಲದಾತ ಬಸವಣ್ಣ, ಬಸವಣ್ಣನಾಗಿ

ಹುಟ್ಟಿಸದೆ ಪ್ರಭುವಾಗಿ ಏಕೆ ಹುಟ್ಟಿಸಿದೆ ಎಂದು ಪ್ರಶ್ನಿಸಿಕೊಳ್ಳುತ್ತಾರೆ.

ಬಸವಣ್ಣನವರು ಹೊನ್ನು ಹೆಣ್ಣು ಮಣ್ಣು ಹಸಿವು ತೃಷೆ ವ್ಯಸನ ಅರ್ಥ ಮುಂತಾದ ಮನದ ಬಯಕೆಗಳನ್ನು ವೈಜ್ಞಾನಿಕವಾಗಿ ತಿಳಿದು ಕಳೆದುಕೊಂಡವರು. ಇದನ್ನು ತಿಳಿಯಲು ಇಚ್ಛೆಪಟ್ಟ 770 ಅಮರ ಗಣಂಗಳಿಗೆ ವೈಜ್ಞಾನಿಕವಾಗಿ ಈ ಕೆಳಗಿನಂತೆ ತಿಳಿ ಹೇಳಿ ಅಮರರನ್ನಾಗಿ ಮಾಡಿದವರು.

'' ಬಯಲ ರೂಪ ಮಾಡ ಬಲ್ಲಾತನೆ ಶರಣನು ! ಆ ರೂಪ ಬಯಲ ಮಾಡ ಬಲ್ಲಾತನೆ ಲಿಂಗಾನುಭಾವಿ, ಬಯಲ ರೂಪ ಮಾಡಲರಿಯದಿದ್ದಡೆ ಎಂತು ಶರಣನೆಂಬೆ ? ಆ ರೂಪ ಬಯಲ ಮಾಡಲರಿಯದಿದ್ದಡೆ ಎಂತು ಲಿಂಗಾನುಭಾವಿಯೆಂಬೆ ? ಈ ಉಭಯ ಒಂದಾದಡೆ ನಿಮ್ಮಲ್ಲಿ ತೆರ ಹುಂಟೆ ಕೂಡಲ ಸಂಗಮದೇವಾ ? ''

ಯೋಗಿಯಾದವನಿಗೆ ಬಯಲನ್ನು ರೂಪ ಮಾಡಲು ತಿಳಿದಿರಬೇಕು. ಆ ರೂಪವನ್ನು ಪುನಃ ಬಯಲು ಮಾಡಲು ತಿಳಿದಿರಬೇಕು. ತಿಳಿಯದಿದ್ದರೆ ಅವನು ಯೋಗಿಯೇ ಅಲ್ಲ. ತಿಳಿದರೆ ರೂಪ ನಿರೂಪದೊಂದಿಗೆ ಕೂಡಲು ಬರುವುದಿಲ್ಲ. ನಿರೂಪ ರೂಪದೊಂದಿಗೆ ಕೂಡಲು ಬರುವುದಿಲ್ಲ. ನಿರೂಪ ನಿರೂಪದೊಂದಿಗೆ ಕೂಡಲೂ ಬರುವುದಿಲ್ಲ. ರೂಪವೂ ನಿರೂಪವೇ, ನಿರೂಪವೂ ನಿರೂಪವೇ. ಈ ಉಭಯ ವಸ್ತುಗಳೂ ತನ್ನ ತನುವಿನಲ್ಲಿಯೇ ಇವೆ.

ರೂಪದೊಂದಿಗೆ ರೂಪ ಕೂಡುವುದು ಕ್ಷಣಿಕ ಸುಖಕ್ಕಾಗಿ,ಇದನ್ನು ನಿಯಂತ್ರಣದಲ್ಲಿಟ್ಟು ಕೌಪೀನ ಕಾಷಾಯ ಧರಿಸುವುದೂ ಕ್ಷಣಿಕ ಸುಖಕ್ಕಾಗಿ, ರೂಪದಲ್ಲಿಯ ನಿರೂಪ ಹೋದರೆ ರೂಪ ಶವ! ಶವ ರೂಪವಾದರೂ ಆ ಶವದೊಂದಿಗೆ ರೂಪ ಕೂಡಲು ಭಯ ! ರೂಪವಿದ್ದಾಗ ರೂಪಕ್ಕೆ ಕಾರಣವಾದ ನಿರೂಪ ತಿಳಿಯ. ರೂಪ ನಿರೂಪದೊಂದಿಗೆ ಕೂಡಲರಿಯ. ನೋಡುವ ರೂಪವೂ ನಿರೂಪವೇ, ತಾನೂ ನಿರೂಪವೇ. ರೂಪ ನಿರೂಪದೊಂದಿಗೆ ಕೂಡವುದೇ ಸುಖದ ಸುಖಕ್ಕಾಗಿ. ನಿರೂಪದೊಂದಿಗೆ ನಿರೂಪ ಕೂಡುವುದೇ ಶಾಶ್ವತ ಸುಖಕ್ಕಾಗಿ, ಅನಂತ ಸುಖಕ್ಕಾಗಿ. ನದಿ ಸಮುದ್ರ ಕೂಡಿ ಸಾಗರವೇ ತಾನಾದಂತೆ. ಇದುವೇ ಬಿಂದುವಿನ ಸುಳುಹು ತಿಳಿದು ಮಾಯೆ ಗೆಲ್ಲುವ ಪ್ರಭುವಿನ ಸೂತ್ರ.

□

---

**ಅರಿವಿನ ಪರಿಮಳ :**

- ನಿಯಂತ್ರಣದಲ್ಲಿದ್ದು ಯೋಗಿಯಾದವನು ಕಾಮ ಗೆದ್ದವನಲ್ಲ, ಜೋಡು ದೇಹ ಕೂಡಿದಾಗ ಹೊರಚೆಲ್ಲುವ ಬಿಂದುವಿನ ಸಂಚು ಜ್ಞಾನದಿಂದ ತಿಳಿಯಲು ಇವರಿಗೆ ಸಾಧ್ಯವಾಗುವುದೇ ಇಲ್ಲ.
- ರೂಪ ನಿರೂಪದೊಂದಿಗೆ ಕೂಡವುದೇ ಸುಖದ ಸುಖಕ್ಕಾಗಿ. ನಿರೂಪದೊಂದಿಗೆ ನಿರೂಪ ಕೂಡುವುದೇ ಶಾಶ್ವತ ಸುಖಕ್ಕಾಗಿ, ಅನಂತ ಸುಖಕ್ಕಾಗಿ.

# ಕೂಡದಗಲದ ಕೂಟ

**ಒಂದೆಂಬೆನೆ? ಎರಡಾಗಿದೆ; ಎರಡೆಂಬೆನೆ ? ಒಂದಾಗಿದೆ.**
**ಒಂದೆರಡೆಂಬ ಸಂದೇಹವಿದೇನೋ**
**ಅಗಲಲಿಲ್ಲದ ಕೂಟಕ್ಕೆ ಬಿಚ್ಚಿ ಬೇರಾಗದ ಉಪದೇಶ !**
**ಗುರುಶಿಷ್ಯರೆಂಬ ಭಾವಕ್ಕೆ ಭೇದವುಂಟೆ ಗುಹೇಶ್ವರಾ?**

**- ಅಲ್ಲಮಪ್ರಭು**

**ಒಂದೆಂಬೆನೆ? ಎರಡಾಗಿದೆ; ಎರಡೆಂಬೆನೆ? ಒಂದಾಗಿದೆ. ಒಂದೆರಡೆಂಬ ಸಂದೇಹವಿದೇನೋ?:**

ಒಂದೇ ತನು, ಹೆಣ್ಣು ಗಂಡೆಂದು ಎರಡಾಗಿದೆ. ಒಂದೇ ತನು ಜ್ಞಾನ ಮನವೆಂದು ಎರಡಾಗಿದೆ. ಹೆಣ್ಣು ಗಂಡಿಗೂ ಆಧಾರ ತನುವೇ. ಜ್ಞಾನ ಮನಕ್ಕೂ ಆಧಾರ ತನುವೆ. ಜಾತಿ ಮತ, ಪಂಥ, ಶ್ರೀಮಂತ,ಬಡವ ಎನ್ನುವುದಕ್ಕೂ ಆಧಾರ ತನುವೇ ಆಗಿದೆ. ಗುರು ಶಿಷ್ಯ ಎನ್ನುವುದಕ್ಕೂ ತನು ಆಧಾರವಾಗಿದೆ.

ಒಂದು ತನುವಿಗೆ ಮತ್ತೊಂದು ತನು ಗುರುವಾಗಿ ಉಪದೇಶ ಕೊಡಬಹುದೆ? ಶಿಷ್ಯನಾಗಿ ಉಪದೇಶ ಪಡೆಯಬಹುದೆ? ತನುವಿನಲ್ಲಿ (ಗುರು) ಅರಿವು ಇದೆ. ಅದನ್ನು ತಿಳಿಯುವ (ಶಿಷ್ಯ) ಮನವೂ ಇದೆ. ತನುವನ್ನು ಬೇರ್ಪಡಿಸದಂತೆ ಇವೆರಡೂ ಹೆಣೆದುಕೊಂಡಿವೆ. ನೋಡಲು ಒಂದೇ ತನು. ತಿಳಿಯಲು ಹೋದರೆ ಇವೆರಡೂ ಅದರೊಳಡಗಿವೆ. ತನುವನ್ನು ಬಿಟ್ಟು ಇವೆರಡನ್ನು ನೋಡಲಾಗುವುದಿಲ್ಲ. ಇವೆರಡಿಲ್ಲದಿರೆ ತನುವಿಲ್ಲ.

ಅರಿವಿನ ಗುರುವಿಗೆ ಗುರುವಾಗಿ ಉಪದೇಶ ನೀಡಬಹುದೆ? ಶಿಷ್ಯನಾಗಿ ಉಪದೇಶ ಸ್ವೀಕರಿಸಬಹುದೆ? ತನುವು ತನುವಿಗೆ ಉಪದೇಶ ನೀಡುವುದೆ? ತನುವು ತನುವಿನ ಪರಿಚಯವಿಲ್ಲದ್ದಕ್ಕಾಗಿ ಗುರು ಶಿಷ್ಯ ಸಂಬಂಧ. ತನುವಿಗೆ ತನುವಿನ ಅರಿವು ಪರಿಚಯವಿಲ್ಲದ್ದಕ್ಕಾಗಿ ಗುರುಶಿಷ್ಯ ಸಂಬಂಧ.

ತಿಳಿಯದ ಗುರು, ತಿಳಿಯದ ಶಿಷ್ಯರಿಬ್ಬರು ಸೇರಿ ಬೆಳೆಸಿದ ಸಂಬಂಧ, ಅಕ್ರಮ ಸಂಬಂಧ, ಗುರುವನ್ನು ಶಿಷ್ಯ ತಿಳಿಯುವುದಿಲ್ಲ; ಶಿಷ್ಯನನ್ನು ಗುರು ತಿಳಿಯುವುದಿಲ್ಲ. ಪಡಿಪದಾರ್ಥ ಹಣ ಕಾರು, ಬಂಗಲೆ ಕೊಟ್ಟು ಧನ್ಯನಾದೆನೆಂಬ ಶಿಷ್ಯ. ಇವೆಲ್ಲ ಪಡೆದು ಶಾಲೆ ಕಾಲೇಜು ಪ್ರಸಾದ ನಿಲಯ ಕಟ್ಟಿ ಧನ್ಯನಾದೆನೆಂಬ ಗುರು. ಕಾಳಗುರುಕಿ ಗುರುವಿಗೆ ಕಾಳಗುರಿಕಿ ಶಿಷ್ಯ.

ನಿಜಗುರು ಶಿಷ್ಯನಲ್ಲಿಯ ಗುರು(ಅರಿವು)ವನ್ನು ಕಂಡು ಬೆರಗಾಗುತ್ತಾನೆ; ತನುವಿನಲ್ಲಿ ಗುರುವನ್ನು (ಅರಿವು) ತೋರಿದ ಗುರುವನ್ನು ಕಂಡು ಶಿಷ್ಯ ಬೆರಗಾಗುತ್ತಾನೆ. ಇಬ್ಬರಲ್ಲಿಯೂ ಗುರು ಶಿಷ್ಯರೆಂಬ ಭೇದ ಉಳಿಯದೆ ಕೂಡದಗಲದ ಕೂಟದಲ್ಲಿ ಕೂಡುತ್ತಾರೆ. ಗುರುಶಿಷ್ಯರೆಂಬ ಭಾವವೂ ಇಲ್ಲದೆ ಅರಿವಿನ ಕೂಟದಲ್ಲಿ ಕೂಡಿ ಒಂದಾಗುತ್ತಾರೆ. ಆ ಅರಿವೇ (ಗುರು) ತಾವಾಗುತ್ತಾರೆ. ಇದು ಕೂಡದಗಲದ ಅರಿವಿನ ಕೂಟ. ಬಿಚ್ಚಿ ಬೇರಾಗದ ಅರಿವಿನ ಉಪದೇಶ ! ಒಂದು ಎರಡಾಗಿ ಎರಡೊಂದಾದ ಕೂಟ.

□

# ಅರಿವಿಗೆ ಬಳಲಿಕೆಯಿಲ್ಲ ಅಜ್ಞಾನಕ್ಕೆ ಸಮಾಧಾನವಿಲ್ಲ

**ಕಂಡುದ ಹಿಡಿಯ ಲೊಲ್ಲದೆ ಕಾಣದುದನರಸಿ ಹಿಡಿದೆಹೆನೆಂದಡೆ**
**ಸಿಕ್ಕದೆಂಬ ಬಳಲಿಕೆಯ ನೋಡಾ. ಕಂಡುದನೆ ಕಂಡು ಗುರುಪಾದವಿಡಿದಲ್ಲಿ,**
**ಕಾಣಬಾರದುದ ಕಾಣಬಹುದು ಗುಹೇಶ್ವರಾ**

**-ಅಲ್ಲಮಪ್ರಭು**

ಕಣ್ಣಿಗೆ ಕಂಡುಬರುವ ಸತ್ಯವನ್ನು ಹಿಡಿಯದೆ, ಕಾಣಬರದ ವಸ್ತುವನ್ನು ಹಿಡಿಯಲು ಮನ ದೇಹಕ್ಕೆ ಆದೇಶ ನೀಡಿ ಸಿಕ್ಕದೆಂಬ ಬಳಲಿಕೆಯಿಂದ ನರಕ ಯಾತನೆ ಅನುಭವಿಸುತ್ತದೆ. ಇದರ ನಿವಾರಣೆಗೆ ಅಲ್ಲಮಪ್ರಭುಗಳು ದಿವ್ಯ ಔಷಧಿಯ ವಚನ ಸೂತ್ರ ನೀಡಿದ್ದಾರೆ. ಕಂಡುದ ಹಿಡಿಯಲೊಲ್ಲದ ಕಂಗಳ ಮುಂದಣ ಕತ್ತಲೆ ಇದೇನೊ? ಮನದ ಮುಂದಣ ಮರವೆ ಇದೇನೊ? ಒಳಗಣ ರಣರಂಗ ಹೊರಗಣ ಶೃಂಗಾರ! ಬಳಕೆಗೆ ಬಂದ ಬಟ್ಟೆ ಇದೇನೊ ಗುಹೇಶ್ವರಾ ಎನ್ನುತ್ತಾರೆ ಪ್ರಭುಗಳು ಮತ್ತೊಂದು ವಚನದಲ್ಲಿ.

ಆಭರಣ ನೋಡಿದ ಕಣ್ಣಿಗೆ ಅದರ ಸತ್ಯ ಗೋಚರಿಸದೆ ಹಗಲಿರುಳು ದುಡಿದು ಖರೀದಿಸಲು ಹಪಹಪಿಸುತ್ತದೆ. ಆಭರಣ ಹೊರಗೆ ಶೃಂಗಾರವಾಗಿ ಕಂಡರೆ ತನುವಿನಲ್ಲಿ ಅದನ್ನು ಪಡೆಯಬೇಕೆಂಬ ರಣರಂಗ, ಸಿಕ್ಕದೆಂಬ ಬಳಲಿಕೆಯ ಯಾತನೆ ಉಂಟಾಗುತ್ತದೆ. ಆಭರಣದ ಡಿಸೈನ್ ಮತ್ತು ಬಣ್ಣಕ್ಕೆ ಮಾರು ಹೋದ ಮನ ಸತ್ಯ ಕಾಣುವ ಕಣ್ಣಿಗೆ ಕತ್ತಲೆಯ ಬಲೆ ಬೀಸಿ ಕಾಣದಂತೆ ಮಾಡುತ್ತದೆ.

**ಕಂಡುದನೆ ಕಂಡು ಗುರುಪಾದವಿಡಿದಲ್ಲಿ ಕಾಣಬಾರದುದ ಕಾಣಬಹುದು ಗುಹೇಶ್ವರಾ:**

ತನುವಿನಲ್ಲಿ ಅರಿವಿದೆ, ತನುವಿನ ಅರಿವೆ ಗುರು, ಆ ಗುರುವಿನ ಪಾದ ಹಿಡಿದಲ್ಲಿ ಅಂದರೆ ಅರಿವಿನಿಂದ ಆಭರಣ ನೋಡಿದಲ್ಲಿ ಅದೊಂದು ಹಳದಿ ಬಣ್ಣದ ಡಿಸೈನಿನ ಲೋಹ. ಲೋಹ ಹಳದಿ ಬಣ್ಣ ಮತ್ತು ಮಾಟಕ್ಕೆ ಕಣ್ಣು ಮರುಳಾಗುವುದಿಲ್ಲ. ಚಿನ್ನ ಹಿಡಿಯಲು ಹೋಗುವುದಿಲ್ಲ ಬಳಲುವುದಿಲ್ಲ. ಏಕೆಂದರೆ ಕಣ್ಣಿನ ಕತ್ತಲ ಕಳೆದು ಅದರ ಬೆಳಕು ಆಭರಣದ ಮೇಲೆ ಬಿದ್ದು, ಲೋಹವಾಯಿತು. ಕಪ್ಪು ಲೋಹ ಕಬ್ಬಿಣವಾದರೆ ಬಿಳಿ ಲೋಹ ಬೆಳ್ಳಿ, ಹಳದಿ ಲೋಹ ಚಿನ್ನ!

**ಕಂಡುದನೆ ಕಂಡು ಗುರುಪಾದವಿಡಿದಲ್ಲಿ:** ಅರಿವಿನ ಗುರುಗಳು ಸಿಗುವುದು ದುರ್ಲಭ.

ವೇಷದ ಗುರುವಿನ ಪಾದ ಹಿಡಿದು ಕೇಳಿದರೆ ಚಿನ್ನದ ಕಿರೀಟ ಕೇಳುತ್ತಾನೆ. ವೇಷದ ಗುರು ಮೋಸದ ಗುರು. ತಾನೂ ಮೋಸ ಹೋಗುತ್ತಾನೆ, ಇತರರನ್ನು ಮೋಸ ಮಾಡುತ್ತಾನೆ. ತಾನೂ ಈ ಸತ್ಯ ತಿಳಿಯಬೇಕೆಂದು ಆತನಿಗೆ ಅನ್ನಿಸುವುದೇ ಇಲ್ಲ. ತನು ಆಭರಣಕ್ಕೆ ಮರುಳಾಗಿ ಬಳಲಿದಂತೆ, ವೇಷದ ಗುರುವಿಗೂ ಮರುಳಾಗುತ್ತದೆ. ಅದರಂತೆ ದೇಶ, ಭಾಷೆ, ನೆಲ, ಜಲಕ್ಕೆ ಮರುಳಾಗಿ ಬಳಲುತ್ತದೆ. ಭೂಮಿ ಹೇಮ ಕಾಮಿನಿ (ವಿಷಯ) ಕರೆನ್ಸಿಗೆ ಮರುಳಾಗುತ್ತ ಬಳಲುತ್ತದೆ. ಅಧಿಕಾರ ಸಂಪತ್ತು ಶ್ರೀಮಂತಿಕೆಗೆ ಮರುಳಾಗಿ ಬಳಲುತ್ತದೆ. ಯೋಗ ಜಪತಪ ಧ್ಯಾನ ಅನುಷ್ಠಾನಕ್ಕೆ ಮರುಳಾಗಿ ಬಳಲುತ್ತದೆ. ವೇದ ಉಪನಿಷತ್ ಗೀತೆ ಬೈಬಲ್‌ಗೆ ಮರುಳಾಗಿ ಬಳಲುತ್ತದೆ. ದಾನ ಧರ್ಮ ಪರೋಪಕಾರಕ್ಕೆ ಮರುಳಾಗಿ ಬಳಲುತ್ತದೆ. ಈ ಬಳಲಿಕೆ ತನುವುಳ್ಳವರಿಗೆ ತಪ್ಪಿದ್ದಲ್ಲ. ತನುವಿನ ಅರಿವೆಂಬ ಗುರುವಿನ ಸಹಾಯದಿಂದ ತನುವಿನ ಬಳಲಿಕೆ ತನುವಿನಿಂದಲೇ ಕಂಡರೆ ಕಾಣಬಾರದುದ ಕಾಣಬಹುದು. ತನುವೆಂಬ ಗುಹೆಯಲ್ಲಿರುವ ಅರಿವೆಂಬ ಗುಹೇಶ್ವರನನ್ನೇ ಕಾಣ ಬಹುದು. ಅರಿವಿಗೆ ಬಳಲಿಕೆಯಿಲ್ಲ; ಅಜ್ಞಾನಕ್ಕೆ ಸಮಾಧಾನವಿಲ್ಲ. □

# ಜೂಜಿನ ವೇದನೆಯಿಂದ ಜಾಗರವಾಗದ ಮನ

**ಜೂಜಿನ ವೇದನೆಯುಂಟು ಜಾಗರದ ಬಲವಿಲ್ಲ**
**ಆಗಲೂ ಗೆಲಲುಂಟೆ ಪ್ರಾಣ ಪದತನಕ? ರತುನದ ಸರ ಹರಿದು ಸೂಸಿ ಬಿದ್ದಡೆ**
**ಮಾಣಿಕದ ಬೆಲೆಯಿಟ್ಟು ಬಿಲಿತವರಿಲ್ಲ ; ಸರ್ಪಿಣಿ ಸರ್ಪನ ನುಂಗಿತ್ತು,**
**ಇದು ಯೋಗದ ದೃಷ್ಟಾಂತ ಗುಹೇಶ್ವರಾ**

**-ಅಲ್ಲಮ ಪ್ರಭು**

**ಜೂಜಿನ ವೇದನೆಯುಂಟು ಜಾಗರದ ಬಲವಿಲ್ಲ;**

ಜೂಜಿನ ಆಟದ ಹಂಬಲಕ್ಕಾಗಿ ಮಹಾಭಾರತ ನಿರ್ಮಾಣವಾಯಿತು. ಜೂಜಿನಲ್ಲಿ ಪಾಂಡವರು ಸರ್ವಸ್ವವನ್ನು ಪಣಕ್ಕೊಡ್ಡುತ್ತಾರೆ. ಕಳೆದುಕೊಂಡ ವಸ್ತುಗಳನ್ನು ಪಡೆಯುವುದಕ್ಕಾಗಿ ಅವರ ಹತ್ತಿರ ಏನೂ ಇರುವುದಿಲ್ಲ. ಆದರೂ ಹೆಂಡತಿ ದ್ರೌಪದಿಯನ್ನು ತಮ್ಮನ್ನು ಪಣಕ್ಕೊಡ್ಡಿ ಸೋತು 12 ವರುಷ ವನವಾಸ, ಒಂದು ವರ್ಷ ಅಜ್ಞಾತ ವಾಸಕ್ಕೆ ಹೋಗುತ್ತಾರೆ. ಅಜ್ಞಾತ ವಾಸದಲ್ಲಿ ಕೌರವರ ಕಣ್ಣಿಗೆ ಬಿದ್ದರೆ ಪುನಃ 12 ವರ್ಷ ವನವಾಸ ಅನುಭವಿಸಬೇಕು. ಇದು ಜೂಜಿನ ಒಪ್ಪಂದ. ಸೋಲಿನ ಕಹಿ ಅನುಭವ. ತನುವಿನ ಎಚ್ಚರದ (ಅರಿವಿನ) ಬಲವನ್ನು ಜೂಜು ಎಂಬ ಮನ ಆವರಿಸಿಕೊಂಡು ತನುವನ್ನು ಜೂಜಿನಲ್ಲಿಯೇ ತನ್ಮಯ ಮಾಡುತ್ತದೆ. ಪ್ರಾಣ ಹೋಗುವ ತನಕ ಆಗ ಗೆಲ್ಲಬಹುದು ಈಗ ಗೆಲ್ಲಬಹುದು ಎಂದು ತನುವನ್ನು ಹಿಂಡಿ ಹಿಪ್ಪಿ ಮಾಡುತ್ತದೆ.

**ರತುನದ ಸರಹರಿದು ಸೂಸಿಬಿದ್ದಡೆ ಮಾಣಿಕದ ಬೆಲೆಯಿಟ್ಟು ಬಿಲಿತವರಿಲ್ಲ:**

ತನುವಿನಲ್ಲಿ ತನ್ಮಯವಾದ ಅರಿವಿಗೆ ಅಲ್ಲಮಪ್ರಭುಗಳು ಜ್ಞಾನ ರತ್ನ ಎಂದರು. ಅದು ಸದಾ ಜಾಗರ . ಆದರೂ ಜೂಜಿನ ಸಂದರ್ಭದಲ್ಲಿ ಬಳಕೆಗೆ ಬರಲೇ ಇಲ್ಲ. ಮನ ಜ್ಞಾನದ ಬಲವನ್ನು ಬಳಕೆ ಮಾಡಿಕೊಳ್ಳಲಿಲ್ಲ. ಜೂಜಿಗಾಗಿ ತನುವನ್ನು ದುರ್ಬಳಕೆಮಾಡಿಕೊಂಡು ಪ್ರಾಣ ಇರುವವರೆಗೆ ಗೆಲುವು ಸೋ ಲುಗಳ ಸುಖ ದುಃಖಗಳಲ್ಲಿ ಮುಳುಗಿಸಿತು. ಪ್ರಾಣ ಹೋದಾಗ ತನುವನ್ನು ತನುವಿನ ಜ್ಞಾನವನ್ನು ಯಾರೂ ಮಾಣಿಕ್ಯದ ಬೆಲೆಯಿಟ್ಟು ಕೊಳ್ಳಲಿಲ್ಲ. ''ವ್ಯಾಧನೊಂದು ಮೊಲನ ತಂದರೆ ಸಲುವ ಹಾಗಕ್ಕೆ ಬಿಲಿವರಯ್ಯಾ. ನೆಲನಾಳ್ದನ ಹೆಣನೆಂದಡೂ ಒಂದಡಕೆಗೂ ಕೊಂಬರಯ್ಯಾ'' ಎಂದು ಬಸವಣ್ಣನವರು ಹೇಳಿದ್ದಾರೆ.

**ಸರ್ಪಿಣಿ ಸರ್ಪನ ನುಂಗಿತ್ತು ಇದು ಯೋಗದ ದೃಷ್ಟಾಂತ ಗುಹೇಶ್ವರಾ:**

ಜೀವನವೇ ಒಂದು ಜೂಜು. ಒಮ್ಮೆ ಸುಖ ಮತ್ತೊಮ್ಮೆ ದುಃಖ, ಸುಖ ದುಃಖವನ್ನಳಿದು ಶಾಶ್ವತ ಸುಖ ತಿಳಿಯುವ ಜ್ಞಾನ ಬಳಕೆಗೆ ಬಾರದೆ ಮನ ತನು ನುಂಗಿ, ಆಗು ಹೋಗುಗಳ ದುಃಖದ ವ್ಯಸನದಲ್ಲಿಯೇ ತನು ಅವಸಾನ ಹೊಂದುತ್ತದೆ ಜಾಗರದ ಬಲವಿಲ್ಲದೆ. ಉಪಜೀವನದ ಜೂಜಿನಲ್ಲಿ ಮಗ್ನವಾದ ಮನ ತನುವಿನಲ್ಲಿ ತನ್ಮಯವಾದ ನಿಜ ಜ್ಞಾನ ರತ್ನವನ್ನು ಕಂಡುಕೊಳ್ಳದೇ ಹೋಗುತ್ತದೆ. ಭೂಮಿ, ಹೇಮ, ವಿಷಯ ವಸ್ತುಗಳಿಗಾಗಿಯೇ ಹಗಲಿರುಳೆನ್ನದೆ ಜೂಜಿನಲ್ಲಿ ಲೀನವಾಗುತ್ತದೆ. ತನ್ನದೆನ್ನುವ ಜ್ಞಾನ ರತ್ನ ಬಳಕೆಗೆ ಬರದೇ ಹಾಗೇ ಉಳಿಯುತ್ತದೆ. ಮನ ಜ್ಞಾನಕ್ಕೆ ದಾಸನಾದರೆ ಜ್ಞಾನಿ. ಮನ, ಭೂಮಿ, ಹೇಮ ವಿಷಯಗಳಿಗೆ ದಾಸನಾದರೆ ಜೂಜುಕೋರ.

□

# ಸ್ವಾನುಭಾವದಿಂದ ವಿಷಯಾಪೇಕ್ಷೆ ದೂರ

**ಕಾಯದಿಂದ ಕರ್ಮವ ಕಂಡು**
**ಭಾವದಿಂದ ಲಿಂಗವ ಕಂಡು**
**ಲಿಂಗದಿಂದ ಸ್ವಾನುಭಾವವಾಗಿ**
**ಅಂಗದ ಸಂಗಕ್ಕೆ ಹೊರಗಾಯಿತ್ತು**
**ಕದಂಬ ಲಿಂಗವನರಿಯಲಾಗಿ**

**- ಕಂಬದ ಮಾರಿತಂದೆ ಶರಣರು**

**ಕಾಯದಿಂದ ಕರ್ಮವ ಕಂಡು :**

ಜ್ಞಾನಕ್ಕೆ ಆಧಾರವಾದುದು ದೇಹ. ಜ್ಞಾನವನ್ನು, ಜ್ಞಾನದಿಂದ ಮಾಡುವ ಸಕಲ ಕೆಲಸಗಳನ್ನು ದೇಹದಿಂದಲೇ ಕಾಣಬೇಕು. ದೇಹವು ಜ್ಞಾನ ಬಳಕೆ ಮಾಡಿಕೊಳ್ಳುವ ಸಾಧನ.

ಕಂಬದ ಮಾರಿತಂದೆ ಶರಣರು ಐದು ಸಾಲಿನ ತಮ್ಮ ವಚನ ಸೂತ್ರದ ಮುಖಾಂತರ ತನುವು ಮತ್ತು ಜ್ಞಾನವನ್ನು ಭಾವದಿಂದ ನೋಡಿ ಆ ಜ್ಞಾನದ ಸ್ವಾನುಭಾವದಿಂದ ವಿಷಯ ವಸ್ತುಗಳು ಹೇಗೆ ದೂರವಾಗುತ್ತವೆ ಎಂಬುದನ್ನು ವಿವರಿಸುತ್ತಾರೆ.

**ಭಾವದಿಂದ ಲಿಂಗವ ಕಂಡು :**

ತನುವಿನಲ್ಲಿರುವ ಲಿಂಗವನ್ನು (ಜ್ಞಾನ) ಭಾವದಿಂದ ಕಾಣಲು ಬಾರದಿದ್ದರೆ ಜ್ಞಾನ ಒಲಿಯದು. ಜ್ಞಾನ ತನುವಿನ ಸೊತ್ತಾದರೂ ಮನ ಮತ್ತು ಜ್ಞಾನ ತನುವಿನಲ್ಲಿರುವುದರಿಂದ ಮನ ವಾವುದು ಜ್ಞಾನವಾವುದೆಂದು ತಿಳಿಯುವುದಿಲ್ಲ. ತನುವಿನ ಕಣ ಕಣದಲ್ಲಿ ಜ್ಞಾನ ಬೆರೆತಿದೆ ; ಮನ ತನುವನ್ನು ಆವರಿಸಿಕೊಂಡಿದೆ. ಇವೆರಡು ಬೇರೆ ಬೇರೆ ಕೆಲಸಗಳಲ್ಲಿ ನಿರತವಾಗಿವೆ. ಜ್ಞಾನ ಗಂಡನಾದರೆ, ಮನ (ಹೆಂಡತಿ) ರಕ್ಕಸಿ. ಈ ರಕ್ಕಸಿಯನ್ನು ಗರತಿ ಮಾಡಿ ಗಂಡನ(ಜ್ಞಾನ) ಪಾದಕ್ಕೆ ಹಾಕುವ ಭಾವ ಬಲಿಯಬೇಕು. ಬಸವಣ್ಣನವರು ಭಾವ ಬಲಿಸುವ ವಿಧಾನವನ್ನು ಹೀಗೆ ಹೇಳುತ್ತಾರೆ ''ಗಂಡ ಶಿವಲಿಂಗ ದೇವರ ಭಕ್ತ, ಹೆಂಡತಿ ಮಾರಿ ಮಸಣೆಯ ಭಕ್ತೆ ಗಂಡ ಕೊಂಬುದು ಪಾದೋದಕ ಪ್ರಸಾದ, ಹೆಂಡತಿ ಕೊಂಬುದು ಸುರೆ ಮಾಂಸ. ಭಾಂಡ ಭಾಜನ ಶುದ್ಧವಿಲ್ಲದಿರ್ದೊಡೆ ಹೆಂಡದ ಮಡಕೆ ಹೊರಗೆ ತೊಳೆದಂತೆ ಕೂಡಲ ಸಂಗಮದೇವಾ''

ಆವರಿಸಿಕೊಂಡ ಮನ ಹೋದರೆ ತನು ಅಮೃತದ ಪಾತ್ರೆ! ತನುವಿಗೆ ಆವರಿಸಿಕೊಂಡ ಮನವನ್ನು ಸಾಬೂನಿನಿಂದ ತೊಳೆಯಲು ಬರುವುದಿಲ್ಲ. ಆ ಮನದ ಭಾವದಿಂದಲೇ ತನುವಿನಲ್ಲಿ ತನ್ಮಯವಾದ ಜ್ಞಾನ ನೋಡಿ ಆ ಜ್ಞಾನಕ್ಕೆ ಶರಣಾಗಬೇಕು.

**ಲಿಂಗದಿಂದ ಸ್ವಾನುಭಾವವಾಗಿ ಅಂಗದ ಸಂಗಕ್ಕೆ ಹೊರಗಾಯಿತ್ತು :**

ಭಾವದಿಂದ ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ನೋಡಲು ಆ ಜ್ಞಾನದಿಂದ ಸ್ವಾನುಭಾವವಾಗಿ, ಸಂಗ ಬಯಸುವ ವಿಷಯ ವಸ್ತುಗಳೆಲ್ಲ ಅಂಗದಿಂದ ದೂರವಾಗುತ್ತವೆ. ಚಿನ್ನ ಲೋಹವಾಗುತ್ತದೆ. ಕರೆನ್ಸಿ ಕಾಗದವಾಗುತ್ತದೆ. ತನ್ನಂತೆ ಇರುವ ಚರ್ಮ, ಮೂಳೆ ರಕ್ತ ಮಾಂಸ ಮಜ್ಜೆ ಮೇದಸ್ಸುಗಳನ್ನು ಅಂಗದಲ್ಲಿ ಕಂಡು ಅಂಗ ಅಂಗದ ಸಂಗದಿಂದ ಹೊರಗಾಗುತ್ತದೆ. ಜ್ಞಾನದ ಪರಿಮಳಕ್ಕೆ

ಹತ್ತಿರವಾಗುತ್ತದೆ.

**ಕದಂಬ ಲಿಂಗವರಿಯಲಾಗಿ:**

ತನುವೆಂಬುದು ಪರಿಮಳ ಭರಿತ ಜ್ಞಾನ ವೃಕ್ಷ. ಬೇರಿದ್ದ ವೃಕ್ಷವು ಚಿಗುರು ಎಲೆ ಹೂ ಕಾಯಿ ಹಣ್ಣುಪರಿಮಳ ಭರಿತ ಸುಗಂಧವನ್ನು ತಾನಿದ್ದಲ್ಲಿಯೇ ಇದ್ದು ನೀಡಿದರೆ, ತನುವೆಂಬ ಜ್ಞಾನ ಪರಿಮಳ ವೃಕ್ಷ; ಬೇರಿಲ್ಲದ ವೃಕ್ಷ! ತನು ಸುಳಿದೆಡೆಯೆಲ್ಲೆಲ್ಲ ಪರಿಮಳವೇ ಪರಿಮಳ! ಅದಕ್ಕಾಗಿಯೇ ಕಂಬದ ಮಾರಿ ತಂದೆ ಶರಣರು ತನುವಿಗೆ ಕದಂಬ ಲಿಂಗವೆಂದು ಕರೆದಿದ್ದಾರೆ. ಕದಂಬ ಎಂದರೆ ಪರಿಮಳದ ಹೂಗಳನ್ನು ನೀಡುವ ಮಹಾವೃಕ್ಷ. ಆ ಹೆಸರೇ ತನುವಿಗೆ ಇಟ್ಟು ತನುವು ಜ್ಞಾನವೆಂಬ ಪರಿಮಳ ಬೀರುವ ಕದಂಬ ಲಿಂಗ ಎಂದಿದ್ದಾರೆ. ಮಾರಿ ತಂದೆ ಶರಣರ ಈ ಸೂತ್ರ ತನುವಿನಲ್ಲಿ ಭರಿತವಾದ ಜ್ಞಾನಕ್ಕೆ ಹೋಗಿ ಆ ಜ್ಞಾನವೇ ತಾನಾಗುವ ದಿಕ್ಸೂಚಿ!

□

**ಅರಿವಿನ ಪರಿಮಳ:**

- ಆವರಿಸಿಕೊಂಡ ಮನ ಹೋದರೆ ತನು ಅಮೃತದ ಪಾತ್ರೆ! ತನುವಿಗೆ ಆವರಿಸಿಕೊಂಡ ಮನವನ್ನು ಸಾಬೂನಿನಿಂದ ತೊಳೆಯಲು ಬರುವುದಿಲ್ಲ. ಆ ಮನದ ಭಾವದಿಂದಲೇ ತನುವಿನಲ್ಲಿ ತನ್ಮಯವಾದ ಜ್ಞಾನ ನೋಡಿ ಆ ಜ್ಞಾನಕ್ಕೆ ಶರಣಾಗಬೇಕು.
- ಭಾವದಿಂದ ತನುವಿನಲ್ಲಿ ತನ್ಮಯವಾದ ಜ್ಞಾನವನ್ನು ನೋಡಲು ಆ ಜ್ಞಾನದಿಂದ ಸ್ವಾನುಭಾವವಾಗಿ, ಸಂಗ ಬಯಸುವ ವಿಷಯ ವಸ್ತುಗಳೆಲ್ಲ ಅಂಗದಿಂದ ದೂರವಾಗುತ್ತವೆ. ಚಿನ್ನ ಲೋಹವಾಗುತ್ತದೆ. ಕರೆನ್ಸಿ ಕಾಗದವಾಗುತ್ತದೆ. ತನ್ನಂತೆ ಇರುವ ಚರ್ಮ, ಮೂಳೆ ರಕ್ತ ಮಾಂಸ ಮಜ್ಜೆ ಮೇದಸ್ಸುಗಳನ್ನು ಅಂಗದಲ್ಲಿ ಕಂಡು ಅಂಗ ಅಂಗದ ಸಂಗದಿಂದ ಹೊರಗಾಗುತ್ತದೆ. ಜ್ಞಾನದ ಪರಿಮಳಕ್ಕೆ ಹತ್ತಿರವಾಗುತ್ತದೆ.
- ತನುವೆಂಬುದು ಜ್ಞಾನ ಪರಿಮಳ ವೃಕ್ಷ; ಬೇರಿಲ್ಲದ ವೃಕ್ಷ! ತನು ಸುಳಿದೆಡೆಯೆಲ್ಲ ಪರಿಮಳವೇ ಪರಿಮಳ!

# ಕಾಯ ಚಿತ್ರಾಂಗಿಯ ನಿರಿಗೆ ಬಿಚ್ಚಿದ ಅಮ್ಮಿದೇವಯ್ಯ

ಅಂಗ ರೋಮ ಮುಮ್ಮೊನೆದೋರಿ ಮೊಳೆಗಾಣದಂತೆ,
ದಶಾಂಗುಲಿಯ ನಖ ಪ್ರತಿರೂಪು ದೋರದಂತೆ,
ಇದು ಶರೀರ ಚಿತ್ರಾಂಗಿಯ ಕಾಯದ ನಿರಿಗೆಯ ತೆರ
ಹೊರಗಣ ಕ್ರೀ , ಆತ್ಮನೊಳಗಣ ಜ್ಞಾನ
ಇಂತೀ ಉಭಯವನರಿದು ಕಾಯಕವನೊಡಗೂಡಿ ಮಾಡಬೇಕು
ಹದಿನೆಂಟು ಕಾಯಕದೊಳಗಾದ, ನಾಲ್ಕು ಕಾಯಕ ಹೊರಗಾದ
ಮೂರು ಕಾಯಕ ಮುಂತಾದ ಕಾಯಕದಂದವ ತಿಳಿದು
ಚೆನ್ನಬಸವಣ್ಣ ಸಾಕ್ಷಿಯಾಗಿ
ಕಮಳೇಶ್ವರಲಿಂಗವ ನೊಡಗೂಡಬೇಕು

- ಕನ್ನಡಿಕಾಯಕದ ಅಮ್ಮಿದೇವಯ್ಯ ಶರಣರು

ಕನ್ನಡಿ ಕಾಯಕದ ಅಮ್ಮಿದೇವಯ್ಯ ಶರಣರು ಅಂಗವನ್ನು ಸುಂದರಗೊಳಿಸುವ ಮೇಕಪ್‌ಮೆನ್ ಆಗಿ ಕಾರ್ಯನಿರ್ವಹಿಸಿದವರು. ಅಂಗದ ಅಂದ ಇಮ್ಮಡಿಗೊಳ್ಳಲು ಕೂದಲು ಮತ್ತು ಉಗುರು ಪ್ರಧಾನ ಪಾತ್ರವಹಿಸುತ್ತವೆ. ಅವುಗಳನ್ನು ಓರಣವಾಗಿ ಕತ್ತರಿಸುವ ಕಾಯಕವು ಅತ್ಯಂತ ಪ್ರಮುಖವಾದುದು.

ಅಂಗಕ್ಕೆ ಶೋಭೆಯನ್ನುಂಟುಮಾಡುವ ರೋಮ ಮತ್ತು ಉಗರು(ನಖ) ಗಳನ್ನು ವರ್ಣನೆ ಮಾಡುವ ಸಾಹಿತಿ ಮತ್ತು ಕವಿಗಳಿಗೇನೂ ಕೊರತೆಯಿಲ್ಲ. ರಾವಣನ ತಂಗಿ ಶೂರ್ಪನಖಿ ಎಂದು ಹೆಸರುವಾಸಿಯಾದದ್ದು ತನ್ನ ಚೂಪಾದ ಉಗುರುಗಳಿಂದಲೇ. ತನ್ನ ಶೀಲ ರಕ್ಷಣೆಗಾಗಿ ಉಗುರುಗಳಿಂದ ಲಕ್ಷ್ಮಣನಿಗೆ ಪರಚಿದ್ದಕ್ಕಾಗಿ ಲಕ್ಷ್ಮಣ ಶೂರ್ಪ+ನಖಿ ಎಂದು ಕರೆದ. ಆಕೆಯ ಅಂದಕ್ಕೆ ಶೋಭೆ ತರುವ ಮೂಗು ಮೊಲೆಗಳನ್ನು ತನ್ನ ಬಾಣಗಳಿಂದ ಕತ್ತರಿಸಿದ. ಉಗುರುಗಳಿಂದ ಶೀಲವೇನೊ ಉಳಿಯಿತು. ಆದರೆ ಅಂಗದ ಅಂದ ಶಾಶ್ವತವಾಗಿ ಕಳೆದುಕೊಳ್ಳಬೇಕಾಯಿತು.

ಲಕ್ಷ್ಮಣ ಲತೆಯಂತೆ ಬೆಳೆದ ಉಗುರುಗಳಿಗೆ ಕೇಶರಾಶಿಗೆ ಮರುಳಾಗಿರಬೇಕೆನ್ನಿಸುತ್ತದೆ. ರೋಮ ಉಗುರು ಮತ್ತು ತನುವನ್ನು ಚಿತ್ರಾಂಗಿಯಂತೆ ಬಿಂಬಿಸುತ್ತವೆ. ತನುವಿನ ಕೇಶರಾಶಿ ನೋಡಿ ಮರುಳಾಗುವುದು. ಲತೆಯಂತಿರುವ ಉಗುರು ನೋಡಿ ಮರುಳಾಗುವುದು ಸಹಜ. ಕೇಶ ತಲೆಯಲ್ಲಿದ್ದಾಗ ಮಾತ್ರ ಅಂದ. ಒಂದೇ ಒಂದು ಕೂದಲು ತಲೆಯಿಂದ ಕಳಚಿ ತಟ್ಟೆಯಲ್ಲಿ ಬಿದ್ದರೆ, ಉಣ್ಣುವ ಅನ್ನವನ್ನು ತಟ್ಟೆಯೊಂದಿಗೆ ಎಸೆಯುತ್ತಾರೆ. ಅದರಂತೆ ಲತೆಯಂತಿರುವ ಉಗುರುಗಳು ಬೆರಳಲ್ಲಿದ್ದರೆ ಅಂದ; ತಟ್ಟೆಯಲ್ಲಿ ಮನೆಯಲ್ಲಿ ಬಿದ್ದರೆ ಕೆಂಡಾ ಮಂಡಲವಾಗುತ್ತಾರೆ. ರೋಮ ಮತ್ತು ಹತ್ತು ಬೆರಳುಗಳ ಉಗುರುಗಳಿಂದ ತೋರುವ ರೂಪ ಸುಖ ನೀಡಿದರೆ, ಅದರ ಪ್ರತಿ ರೂಪ ಸಿಟ್ಟು ಬರಿಸುತ್ತದೆ. ದೇಹದಲ್ಲಿದ್ದಾಗ ಅದರ ಸೌಂದರ್ಯ ಇಮ್ಮಡಿಗೊಳ್ಳುತ್ತದೆ. ರೂಪದಿಂದ ಕಳಚಿದ ರೋಮ, ಉಗುರುಗಳಿಂದ ವಾಕರಿಕೆ ಬರುತ್ತದೆ. ಸೌಂದರ್ಯ ಮತ್ತು ವಿಕೃತಗೊಳ್ಳುವ ಶರೀರವನ್ನು ಚಿತ್ರಾಂಗಿಯ ಕಾಯ ಎಂದಿದ್ದಾರೆ ಅಮ್ಮಿದೇವಯ್ಯ ಶರಣರು.

ಹಡಪದ ಕಾಯಕದಲ್ಲಿ ತೊಡಗಿದ ಶರಣರು ಕಾಯದ ಒಳ ಹೊರಗಿನ ಸೌಂದರ್ಯ ಹೆಚ್ಚಿಸುವುದರೊಂದಿಗೆ ಕಾಯದ ನಿರಿಗೆಯ ಬಿಚ್ಚಿದ್ದಾರೆ.''ತುರುಬು ಜಡೆ ಬೋಳು ಬಿಡುಗುರುಳು ಇವೆಲ್ಲವೂ ರುದ್ರನ ಅಡಿವೆಜ್ಜೆಯ ಕುರುಹು. ಇಂತೀ ಕುರುಹಿನ ಮುದ್ರೆಗಳಲ್ಲಿ ಬಂದು ತಮ್ಮ ಅಡಿಯ ಇರುವ ನರಿಯದೆ ಬರಿಯ ಬೊಮ್ಮವನಾಡಿ ನುಡಿವರ ಸರ್ವಾಂಗದ ತೊಡಿಗೆಯ ಬಂಡೆ ಸಿಡಿಹಿಂಗೆ ಕತ್ತರಿ. ತುರುಬಿಂಗೆ ತೊರಗೂರ, ಹರಿವ ನಖಕ್ಕೆ ಕಡಿಚಣ,ಉಸುರಿನ ದೆಸೆಯ ನಾಸಿಕದ ಕಸ ತೆಗೆವುದಕ್ಕೆ ಅಂಗುಲಸಂಗಿ. ಇಂತೀ ಕಾಯಕದ ಬೆಂಬಳಿಯಲ್ಲಿ ತಂದನೆನ್ನ ಬಸವಣ್ಣ. ಆತನಂಗದ ದೆಸೆಯಿಂದ ಬಂದೆ ಕನ್ನಡಿವಿಡಿದು, ಆ ಕನ್ನಡಿಯ ದೆಸೆಯಿಂದ ನಿಮ್ಮ ಕಂಗಳಲ್ಲಿ ನೋಡಿ ನಿಮ್ಮ ಮಲವ ನೀವೆ ಪರಿಹರಿಸಿಕೊಳ್ಳಿ ಎನಗನ್ಯ ಭಿನ್ನವಿಲ್ಲ ಕಮಳೇಶ್ವರ ಲಿಂಗವು ಕಳುಹಿದ ಮಣಿಹ'' ಎಂದಿದ್ದಾರೆ.

ಕಾಯಕ್ಕೆ ಹಡಪದ ಸೇವೆ ಮಾಡುತ್ತ ಆ ಕಾಯದಲ್ಲಿರುವ ದೋಷ ಬಸವಣ್ಣನ ಜ್ಞಾನದಿಂದ ಕಳೆಯುವ ಬಗೆಯನ್ನು ಹೇಳಿದ್ದಾರೆ. ಕತ್ತರಿ, ಕತ್ತಿ,ತೊರೆಗೂರ, ಕಡಿಚಣ, ಅಂಗುಲಸಂಗಿ ಎಂಬ ಹಡಪದ ಸಾಮಗ್ರಿಗಳನ್ನು ಬಳಸಿ ಕಾಯದ ನಿರಿಗೆಯನ್ನು ಬಿಚ್ಚಿದ್ದಾರೆ. ಜ್ಞಾನ ಕನ್ನಡಿಯಲ್ಲಿ ಅವರ ಮುಖ ತೋರಿಸಿ ಅವರ ಹೊಲಸು ಅವರೇ ಕಳೆದುಕೊಳ್ಳುವಂತೆ ತಿಳಿಹೇಳಿ ಕಾಯವೆಂಬುದು ಕಮಳೇಶ್ವರ ಲಿಂಗವು ಕಳುಹಿದ ಮಣಿ ಎಂದಿದ್ದಾರೆ.

ಕಾಯದ ಹೊರಗಣ ಹೊಲಸು ತೆಗೆದು, ಒಳಗಣ ಬೆಳಕು ಬೆಳಗಿಸಿದ್ದಾರೆ. ಕಾಯದಿಂದ ಮಾಡುವ ಕಾಯಕಗಳೆಲ್ಲ ಗೌಣ. ಸ್ಥೂಲ ಸೂಕ್ಷ್ಮ ಕಾರಣ ಕಾಯದ ಕಾಯಕದ ಕತೆಯನ್ನು ಚೆನ್ನಬಸವಣ್ಣನ ಸಾಕ್ಷಿಯಾಗಿ ತನ್ನ ಗಿರಾಕಿಗಳಿಗೆ ಹೇಳಿದ್ದಾರೆ. ಹಾಗೆಯೇ ಜಗದ ಕಾಯದ ಅಜ್ಞಾನ ಕಳೆಯಲು ವಚನಾಕ್ಷರದಲ್ಲಿ ದಾಖಲಿಸಿದ್ದಾರೆ ಕನ್ನಡಿ ಕಾಯಕದ ಅಮ್ಮಿದೇವಯ್ಯ.

□

# ಕೋರ್ಟ್ ತನುವಿಗೆ ಶಿಕ್ಷೆ ನೀಡಿದರೆ ಜ್ಞಾನಿ ಅಜ್ಞಾನಕ್ಕೆ ಶಿಕ್ಷೆ ನೀಡುತ್ತಾನೆ

ಕತ್ತಲೆಯಲ್ಲಿ ಕನ್ನವನಿಕ್ಕಿದಡೆ
ಎನಗೆ ಕತ್ತಿಯ ಕೊಟ್ಟ ಕರ್ತುವಿಗೆ ಭಂಗ.
ಅವರು ಮರದಿರ್ದಲ್ಲಿ ಮನೆಯ ಹೊಕ್ಕಡೆ
ಎನ್ನ ಚೋರತನದ ಅರಿಕೆಗೆ ಭಂಗ
ಮರದಿರ್ದವರ ಎಬ್ಬಿಸಿ ಅವರಿಗೆ ಅವರೊಡವೆಯ ತೋರಿ
ಎನ್ನೊಡವೆಯ ತಂದೆ ಮಾರನವೈರಿ ಮಾರೇಶ್ವರಾ.

– ಕನ್ನದ ಮಾರಿತಂದೆ ಶರಣರು

**ಕತ್ತಲೆಯಲ್ಲಿ ಕನ್ನವನಿಕ್ಕಿದಡೆ ಎನಗೆ ಕತ್ತಿಯ ಕೊಟ್ಟ ಕರ್ತುವಿಗೆ ಭಂಗ:**

ಮಾರಯ್ಯ ಶರಣರ ಕೈಯಲಿದ್ದುದು ಅರಿವಿನ ಕತ್ತಿ.ಅದನ್ನು ಬಸವಣ್ಣನವರು ಕೊಟ್ಟರು. ಒಮ್ಮೆ ಕನ್ನದ ಮಾರಯ್ಯ ಬಿಜ್ಜಳನ ಅರಮನೆಗೆ ಕನ್ನ ಹೊಡೆದು ದ್ರವ್ಯವನ್ನು ಕದ್ದಿದ್ದ. ಬಿಜ್ಜಳ ಮಾರಯ್ಯನನ್ನು ಹಿಡಿದು ಕೊಟ್ಟವನಿಗೆ ಒಂದು ಲಕ್ಷ ವರಹ ಘೋಷಣೆ ಮಾಡಿದ್ದ. ಸಿಕ್ಕಿರಲಿಲ್ಲ.ಬಸವಣ್ಣನ ಮಹಾಮನೆಗೂ ಕಳುವು ಮಾಡಲು ತನ್ನ ತಂಡದೊಂದಿಗೆ ಶರಣರ ವೇಷದಲ್ಲಿ ಬಂದ. ಬಸವಣ್ಣನ ಪತ್ನಿ ಗಂಗಮ್ಮಳ ಕೊರಳಲ್ಲಿರುವ ಆಭರಣಕ್ಕೆ ಕೈಹಾಕಿದ. ಅವನನ್ನು ಹಿಡಿದು ಕಳ್ಳ ಕಳ್ಳ ಎಂದು ಕೂಗಿದಳು. ಶರಣರೆಲ್ಲ ಎಚ್ಚರಗೊಂಡು ಮಾರಯ್ಯನನ್ನು ಹಿಡಿದರು. ಬಸವಣ್ಣ ಬಂದು ಎಲ್ಲಿ ಕಳ್ಳ ? ಈತ ಕಳ್ಳರನ್ನು ಎಚ್ಚರಿಸಲು ಬಂದ ಬಲುಗಳ್ಳನೆಂಬ ಸಂಗಮನಾಥ.''ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ, ಕೂಡಲ ಸಂಗಯ್ಯನಲ್ಲದೆ ಬೇರಲ್ಲ. ಕೊಡು ಕೊಡೆಲೆ ಚಾಂಡಾಲಗಿತ್ತಿ ಎನ್ನಯ್ಯನ ಕೈ ನೊಂದಾವು '' ಎಂದು ತನ್ನ ಹಂಡತಿಗೆ ಗದರಿಕೊಂಡ. ಅರ್ಥಸಚಿವ ಬಸವಣ್ಣನ ಮಾತು ಕೇಳಿ ಶರಣರಿಗೆ ಹೆಂಡತಿಗೆ ಅಚ್ಚರಿಯಾಯಿತು. ಮಾರಯ್ಯ ಗಾಬರಿಗೊಂಡ. ಯಾರೂ ಈ ರೀತಿ ಮಾತನಾಡಿಸಿರಲಿಲ್ಲ.

'ಹೊನ್ನಿನೊಳ ಗೊಂದೊರೆಯ ಅನ್ನದೊಳಗೊಂದಗುಳ ಇಂದಿಂಗೆ ನಾಳಿಂಗೆ ಎಂದೆನಾದೊಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ ' ಎಂದು ಬಸವಣ್ಣ ಹೇಳಿದ ಮಾತು ಹೆಂಡತಿ ಗಂಗಮ್ಮ ಪ್ರಾಯೋಗಿಕವಾಗಿ ಬಳಸಿಕೊಂಡಿರಲಿಲ್ಲ.

ಬಸವಣ್ಣನವರು ಸತಿಗೆ ನುಡಿದ ಬಿರುನುಡಿಗಳನ್ನು ಮಾರಯ್ಯ ಸಹಿಸಿಕೊಳ್ಳದೆ, ನಾನು ಕಳ್ಳ ಬಸವಣ್ಣ. ನನ್ನ ಕೊರಳಲ್ಲಿದ್ದದ್ದು ಬದನೆಕಾಯಿ. ನನ್ನ ತಂಡದವರ ಕೊರಳಲ್ಲಿದ್ದದ್ದೂ ಬದನೆಕಾಯಿಗಳೇ ಲಿಂಗವಲ್ಲ. ಶರಣರ ವೇಷದಲ್ಲಿ ಬಂದ ಕಳ್ಳರು ನಾವು. ಆ ತಾಯಿಯನ್ನು ನಿಂದಿಸಬೇಡ. ನಮ್ಮನ್ನು ಸೆರೆಹಿಡಿದು ಬಿಜ್ಜಳನಿಗೆ ಒಪ್ಪಿಸಿ ಬಿಡಿ. ಶರಣರ ಮಹಾಮನೆಗೆ ನಾವು ಬರಬಾರದಿತ್ತು ಎಂದು ಗೋಗರೆದ. ಅಯ್ಯೋ ಲಿಂಗ ಕಟ್ಟಿಕೊಂಡು ಕಲ್ಲೆಂದು ಭಾವಿಸುವ ಜನರಿದ್ದಾರೆ, ಬದನೆಕಾಯಿಯನ್ನೇ ಲಿಂಗ ಮಾಡಿಕೊಂಡ ಸಂಗಮನಾಥರು ನೀವು ಎಂದು ಮಾರಯ್ಯನ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡುತ್ತಾರೆ ಬಸವಣ್ಣ!

ಬಸವಣ್ಣನ ಮಾತುಗಳನ್ನು ಶರಣ ಸಮೂಹ, ಸತಿ ಗಂಗಮ್ಮ ಹಾಗೂ ಕಳ್ಳರ ತಂಡ ಕೇಳುತ್ತದೆ.

ಸತಿ ಗಂಗಮ್ಮ ಚಿನ್ನಕ್ಕೆ ಮಾರು ಹೋಗಿ ಆಭರಣ ಧರಿಸಿದ್ದಳು. ಕನ್ನದ ಮಾರಯ್ಯನೂ ಆಭರಣಕ್ಕೆ ಮಾರು ಹೋಗಿ ಕದಿಯಲು ತಂಡದೊಂದಿಗೆ ಬಂದಿದ್ದ. ಸತಿ ಮತ್ತು ಕಳ್ಳ ಇಬ್ಬರೂ ಚಿನ್ನದ ಬಣ್ಣ ಮತ್ತು ಮಾಟಕ್ಕೆ ಮಾರು ಹೋಗಿದ್ದರು. ಕೊಡದಿದ್ದರೆ ಕೊಂದು ಪಡೆಯುವ ಛಲ ಕಳ್ಳನಿಗೆ, ಪ್ರಾಣ ಹೋದರೂ ಸರ ಬಿಡದ ಛಲ ಸತಿಗೆ. ಅರಿವಿದ್ದೂ ಪ್ರಾಣದ ಬೆಲೆ ಇಬ್ಬರಿಗೂ ತಿಳಿದಿರಲಿಲ್ಲ. ಬಣ್ಣ ಮಾಟ ಕಳೆದರೆ ಲೋಹಕ್ಕೆ ಬೆಲೆಯಿಲ್ಲ. ಲೋಹವನ್ನು ಯಾರೂ ಕದಿಯುವುದಿಲ್ಲ. ಖರೀದಿಸುವುದಿಲ್ಲ. ಚಿತ್ತ ಆಭರಣದಲ್ಲಿ ನೆಟ್ಟದ್ದರಿಂದ ಸತಿ ಗಂಗಮ್ಮ ಖರೀದಿಸಿ ಪ್ರಾಣಕ್ಕಿಂತ ಅಧಿಕವಾಗಿ ಪ್ರೀತಿಸಿದ್ದಳು. ಹಾಗೆಯೇ ಕನ್ನದ ಮಾರಯ್ಯ ಕೂಡಾ ಪ್ರಾಣಕ್ಕಿಂತ ಅಧಿಕವಾಗಿ ಪ್ರೀತಿಸಿ ಕಳುವಿನಲ್ಲಿ ಭಾಗಿಯಾಗಿದ್ದ.ಚಿತ್ತ ಅರಿವಿನಲ್ಲಿ ಲೀನವಾದರೆ ಅರಿವಿಗೆ ಆಭರಣ ಕಾಣುವುದಿಲ್ಲ. ಬರೀ ಲೋಹ ಮಾತ್ರ ಕಾಣುತ್ತದೆ. ಲೋಹವನ್ನು ಯಾರೂ ಕರೀದಿಸುವುದಿಲ್ಲ. ಕದಿಯುವುದಿಲ್ಲ.

ಬಸವಣ್ಣನ ಈ ಪಾಠದಿಂದ ಕನ್ನದ ಮಾರಯ್ಯನಲ್ಲಿ ಆವರಿಸಿಕೊಂಡ ಅಜ್ಞಾನ ಭಸ್ಮವಾಗಿತ್ತು. ಕಳ್ಳ ಸತ್ತು ಹೋಗಿದ್ದ. ಮಾರಯ್ಯನೆಂಬ ಶರಣ ಮಾತ್ರ ಉಳಿದಿದ್ದ.

ಬಿಜ್ಜಳ ರಾಜ ಮಾರಯ್ಯನ ತನುವಿಗೆ ಮಾತ್ರ ಶಿಕ್ಷೆ ನೀಡುತ್ತಿದ್ದ. ಕಳ್ಳ ಹಾಗೇ ಉಳಿಯುತ್ತಿದ್ದ. ಪೊಲೀಸರು, ಸರಕಾರ, ನ್ಯಾಯಾಲಯಗಳು ತನುವಿಗೆ ಶಿಕ್ಷೆ ನೀಡುತ್ತವೆ. ಜ್ಞಾನಿಗಳು ಅಜ್ಞಾನಕ್ಕೆ ಶಿಕ್ಷೆ ನೀಡುತ್ತಾರೆ. ಇದೊಂದು ವೈಜ್ಞಾನಿಕ ಕಲೆ. ಕರ್ತೃ ಬಸವಣ್ಣನವರು ಅರಿವಿನ ಕತ್ತಿಯನ್ನು ಕನ್ನದ ಮಾರಯ್ಯನವರಿಗೆ ಕೊಟ್ಟು ಅರಿವಿನ ಕಾಯಕ ಹಚ್ಚಿದ್ದರು. ಅದಕ್ಕೆ ಭಂಗ ತರಲಾರೆ ಎಂದು ಮಾರಯ್ಯ ತಮ್ಮ ವಚನದಲ್ಲಿ ಪ್ರಸ್ತಾಪಿಸಿದ್ದಾರೆ.

**ಅವರು ಮರದಿರ್ದಲ್ಲಿ ಮನೆಯ ಹೊಕ್ಕಡೆ ಎನ್ನ ಚೋರತನದ ಅರಿಕೆಗೆ ಭಂಗ. ಮರದಿರ್ದವರ ಎಬ್ಬಿಸಿ ಅವರಿಗೆ ಅವರೊಡವೆಯ ತೋರಿ ಎನ್ನೊಡವೆಯ ತಂದೆ ಮಾರನವೈರಿ ಮಾರೇಶ್ವರಾ :**

ಎಚ್ಚರವಿದ್ದೂ ಮಲಗಿದಂತೆ ನಟಿಸುವವರನ್ನು ಎಬ್ಬಿಸಲಾಗುವುದಿಲ್ಲ. ಮಲಗಿದ್ದವರನ್ನು ಎಬ್ಬಿಸಿ ಅವರಿಗೆ ಅವರ ತನುವಿನಲ್ಲಿರುವ ಅರಿವಿನ ಒಡವೆಯನ್ನು ತೋರಿ, ಎನ್ನೊಡವೆಯನ್ನು ತಂದೆ ಎಂದಿದ್ದಾರೆ. ಮರೆವಿನ ವೈರಿ ಅರಿವು, ಅರಿವಿಗೆ ಮಾರನ ವೈರಿ ಮಾರೇಶ್ವರಾ ಎಂದು ಹೆಸರಿಟ್ಟು ಗುಣಗಾನ ಮಾಡಿ ಸ್ತುತಿಸಿದ್ದಾರೆ.

□

**ಅರಿವಿನ ಪರಿಮಳ :**

□ ಪೊಲೀಸರು, ಸರಕಾರ, ನ್ಯಾಯಾಲಯಗಳು ತನುವಿಗೆ ಶಿಕ್ಷೆ ನೀಡುತ್ತವೆ. ಜ್ಞಾನಿಗಳು ಅಜ್ಞಾನಕ್ಕೆ ಶಿಕ್ಷೆ ನೀಡುತ್ತಾರೆ.

# ತನಗಲ್ಲದುದ ಕತ್ತರಿಸುವ ಕರುಳಕೇತಯ್ಯನ ಸೂತ್ರ

ತನಗಲ್ಲುದುದ ಘಟ ಸೋಂಕಿದಲ್ಲಿ ಅಲ್ಲಿಯೇ ಕಡಿವೆನು.
ತನಗಲ್ಲದುದ ಕೈಮುಟ್ಟಿದಲ್ಲಿ ಅಲ್ಲಿಯೇ ತೆಗೆವೆನು.
ತನಗಲ್ಲದುದ ಕಿವಿ ಕೇಳಿದಲ್ಲಿ ಅಲ್ಲಿಯೇ ಗುಂಟಿ ಬಲಿವೆನು.
ತನಗಲ್ಲದುದ ನಾಸಿಕ ವಾಸಿಸಿದಲ್ಲಿ ಅಲ್ಲಿಯೇ ದಸಿಯ ದಕ್ಕನೇರಿಸುವೆನು.
ದೃಷ್ಟಿ ಅನುತಪ್ಪಿ ನೋಡಿದಲ್ಲಿ ಅಲ್ಲಿಯೇ ಕಿತ್ತಿಡುವೆನು.
ಚಿತ್ತ ಅನು ತಪ್ಪಿ ಮತ್ತೊಂದು ನೆನೆದಡೆ
ಆತ್ಮನನಲ್ಲಿಯೇ ಕಿತ್ತು ಹಾಕುವೆನು.
ಇದಕ್ಕೆ ನೀವೇ ಸಾಕ್ಷಿ, ಮನಕ್ಕೆ ಮನೋಹರ ಸಂಕೇಶ್ವರ ಲಿಂಗವು.

- ಕರುಳಕೇತಯ್ಯ ಶರಣರು

ಕರುಳಕೇತಯ್ಯ ಶರಣರು ರುಚಿ ಸ್ಪರ್ಶ ಶಬ್ದ ವಾಸನೆ ದೃಶ್ಯ ಮತ್ತು ಚಿತ್ತದ ಬಗ್ಗೆ ಹೇಳುತ್ತಾ ಅವು ತನುವಿನಲ್ಲಿ ಸಂಕಟವನ್ನುಂಟು ಮಾಡಿದಾಗ ಜ್ಞಾನದಿಂದ ಹೇಗೆ ಕತ್ತರಿಸಬೇಕೆಂಬುದನ್ನು ವೈಜ್ಞಾನಿಕವಾಗಿ ವಿವರಿಸಿದ್ದಾರೆ.

ತನಗಲ್ಲದ ವಸ್ತು ತನು ಸೋಂಕಿದಲ್ಲಿ ತಿಳಿದುಕೊಂಡು ಆ ವಸ್ತುವನ್ನು ಭೇದಿಸುವುದು ಸೂಕ್ತ. ಆದರೆ ಆ ವಸ್ತು ಸೋಂಕಲು ಕಾರಣವಾದ ತನುವಿನೊಂದಿಗೆ ಜಗಳ ಕಾಯುತ್ತೇವೆ. ಇದು ಮನುಜನ ಸಹಜ ಗುಣ. ಅಜ್ಞಾನದ ಗುಣ ! ಇದನ್ನು ಅಲ್ಲಗಳೆದು, ವಸ್ತುವಿನ ಸ್ವರೂಪ ಸತ್ಯವನ್ನು ನೋಡಿ ವಿಜ್ಞಾನಿಯಾಗುವುದು ಜ್ಞಾನದ ಗುಣ ! ತನುವಿನ ಜ್ಞಾನ ಬಳಕೆಯಾದ ಜಾಣತನದ ಸಹಜ ಗುಣ !!

ಉದಾಹರಣೆಗೆ ಊಟದಲ್ಲಿ ಖಾರ ಹೆಚ್ಚು ಬಳಕೆಯಾದರೆ ಅಡುಗೆ ಮಾಡಿದವರನ್ನು ಬೈಯ್ಯುತ್ತೇವೆ. ವಿಕೋಪಕ್ಕೆ ಹೋಗಿ ಮನೆ ನರಕವಾಗುತ್ತದೆ. ಮೈ ಪರಚಿಕೊಳ್ಳುವಂತಹ ಸಿಟ್ಟು ಬಂದು ತಟ್ಟೆ, ಬಟ್ಟಲು ಎಸೆಯುತ್ತೇವೆ. ತನು ಸಂಕಟಕ್ಕೀಡಾಗಿ ಕತಕತನೆ ಕುದಿಯುತ್ತದೆ. ಇದು ತನುವಿನ ಮನದ ಸಹಜ ಗುಣ. ಖಾರ ಕಮ್ಮಿಯಾದರೂ ಜಗಳ, ಹೆಚ್ಚಾದರೂ ಜಗಳ. ಚಿತ್ತ ಖಾರದ ಮೇಲೆ ನೆಟ್ಟರೆ ಖಾರದೊಂದಿಗೆ ಪ್ರಯೋಗ ಶುರುವಾಗುತ್ತದೆ. ಉಪ್ಪು ಸಪ್ಪೆ ಹುಳಿ ಖಾರ ಸಿಹಿ ಎನ್ನುವ ರುಚಿ ನಾಲಿಗೆಯಲ್ಲಿದೆಯೋ ಪದಾರ್ಥದಲ್ಲಿದೆಯೋ ಮನದಲ್ಲಿದೆಯೋ ಎಂದು ವೈಜ್ಞಾನಿಕವಾಗಿ ನೋಡಲು ಹೋದರೆ ಉತ್ತರ ಸಿಕ್ಕುತ್ತದೆ.

ಮೆಣಸಿನ ಸಸಿಗೂ ಕಬ್ಬಿನ ಸಸಿಗೂ ಹರಿದ ಜಲವೊಂದೇ. ಕಬ್ಬು ಸಿಹಿ ಮೆಣಸು ಖಾರ. ಅದನ್ನು ತಿನ್ನುವ ತನು ಕೂಡ ಜಲರಾಶಿಯಿಂದ ಗಟ್ಟಿಗೊಂಡಿದೆ. ಪದಾರ್ಥವೂ ಜಲ, ತಿನ್ನುವ ತನುವೂ ಜಲ. ಜಲ ಜಲದಲ್ಲಿ ಬೆರೆತು ತನ್ನ ಅಸ್ತಿತ್ವದ ರುಚಿ ಕಳೆದುಕೊಂಡು ಜಲವಾಗಲು ಸಮಯ ಬೇಕಷ್ಟೆ. ಅಡಿಗೆ ಮಾಡಿದ ತನುವಿನೊಂದಿಗೆ ಜಗಳ ಮಾಡುವುದು ತರವಲ್ಲ. ಇದು ಶರಣರು ಕಂಡುಕೊಂಡ ವಿಜ್ಞಾನ. ಅದಕ್ಕಾಗಿಯೇ ಅವರು ಪ್ರಸಾದದಲ್ಲಿ ರುಚಿಯನರಸುವರೆ ? ಎಂದು ಪ್ರಶ್ನಿಸುತ್ತಾರೆ. ''ಕರುಳಕೇತನಯ್ಯನವರು ತಮ್ಮ ವಚನದಲ್ಲಿ ತನು ಸೋಂಕಿದ ಪದಾರ್ಥವನ್ನು

ತಿಳಿದು ಅಲ್ಲಿಯೇ ಕಡಿವೆನು'' ಎಂದಿದ್ದಾರೆ.

**ತನಗಲ್ಲದುದ ಕೈ ಮುಟ್ಟಿದಲ್ಲಿ ಅಲ್ಲಿಯೇ ತೆಗೆವೆನು:**

ತನಗಲ್ಲದ ಚರ್ಮ ತನಗೆ ಮುಟ್ಟಿದೊಡೆ ಅಲ್ಲಿಯೇ ತೆಗೆಯುವ ದಿಟ್ಟತನ ಜ್ಞಾನಿಗೆ ಮಾತ್ರ ಸಾಧ್ಯ. ಮಹಾವೀರ, ಬುದ್ಧ, ಪರಮಹಂಸ, ಶರಣ ದಾಸವರೇಣ್ಯರಿಗೆ ಮಾತ್ರ ಸಾಧ್ಯ. ತಿಳಿದರೆ ಸರ್ವರಿಗೂ ಸಾಧ್ಯ ! ಜಪ ತಪ ವೇಷ ಭೂಷಣಗಳ ಅಗತ್ಯವಿಲ್ಲ.

ಚಿತ್ತ ರೂಪದಲ್ಲಿ ನೆಟ್ಟರೆ, ಮನ ತನುವಿನ ರೂಪದ ಭೋಗಕ್ಕೆ ಸೆಳೆಯುತ್ತದೆ. ಸಾಧ್ಯವಾಗದಿದ್ದಲ್ಲಿ ಮುಖವಾಡ ಧರಿಸಿ ಮನದೊಂದಿಗೆ ಹಾದರ ಮಾಡುತ್ತದೆ. ತೋರುವುದಕ್ಕೆ ಶ್ರೀರಾಮಚಂದ್ರ ; ಒಳಗೆ ಹಾದರದ ಸಂಕಟ ! ಎರಡೂ ಪಾತ್ರಗಳಲ್ಲಿ ತಾನು ಸಾಯುವವರೆಗೂ ಸಂಕಟ ಅನುಭವಿಸುತ್ತಾನೆ. ಅದನ್ನು ಚಿವುಟಿ ಹಾಕಲು ಸಾಧ್ಯವಾಗುವುದೇ ಇಲ್ಲ. ರೂಪದಲ್ಲಿ ನೆಟ್ಟ ಚಿತ್ತ ಅರಿವಿನಲ್ಲಿ ನೆಟ್ಟರೆ, ಅರಿವು ಆ ರೂಪವನ್ನು ರೂಪಕ್ಕೆ ಸಂಬಂಧಪಟ್ಟ ಚರ್ಮ, ಮಾಂಸ, ರಕ್ತ, ಮೂಳೆ, ಮಜ್ಜಾ, ಮೇದಸ್ಸು ನೋಡುತ್ತದೆ. ತನ್ನದೂ ಚರ್ಮ, ತನ್ನಂತೆ ಇರುವ ಆ ತನುವಿನದೂ ಚರ್ಮ ! ಎಡಗೈ ಬಲಗೈಗೆ ತಾಗಿದರೆ ರಸಾಯನಿಕ ಕ್ರಿಯೆಯಿಲ್ಲ, ಬಯಕೆಯೂ ಇಲ್ಲ, ರೂಪದೊಂದಿಗೆ ಭೋಗಿಸುವ ಬಯಕೆಯನ್ನು ತಿಳಿದರೆ ಸರ್ವರಿಗೂ ಚಿವುಟಲು ಬರುತ್ತದೆ. ಬಲವಾಗಿ ತಿಳಿಯಬೇಕಷ್ಟೆ!

**ತನಗಲ್ಲದುದ ಕಿವಿ ಕೇಳಿದಲ್ಲಿ ಅಲ್ಲಿಯೇ ಗುಂಟಿ ಬಲಿವೆನು :**

ಕಾಲಿಗೆ ಮುಳ್ಳು ಚುಚ್ಚಿದರೆ ತೆಗೆಯಬಹುದು, ತನುವಿಗೆ ಗಾಯವಾದರೂ ಮಾಯುತ್ತದೆ. ಗಾಯದ ನೆನಪೂ ಉಳಿಯುವುದಿಲ್ಲ, ಆದರೆ ತನುವಿಗೆ ಬಡಿದ ಶಬ್ದ ಮುಳ್ಳಿಗಿಂತಲೂ ಅಧಿಕ ಗಾಯ ಮಾಡುತ್ತದೆ. ಶೂಲ ಚುಚ್ಚಿದ ಯಾತನೆ. ನೆನಪಾದರೆ ಸಾಕು ನುಡಿದ ತನು ಇಲ್ಲದಿದ್ದರೂ ಕೊಲೆ ಮಾಡುವ ಸಿಟ್ಟು ಇಲ್ಲ ಆತ್ಮಹತ್ಯೆ ಮಾಡಿಕೊಳ್ಳುವ ಯಾತನೆ ಉಂಟಾಗುತ್ತದೆ. ತನುವಿನಲ್ಲಿ ಸಂಗ್ರಹಗೊಂಡ ಶಬ್ದ ಕರಗಿಸಲು ಬರುವುದಿಲ್ಲ. ತಿಳಿದರೆ ಶಬ್ದ ಅಪಶಬ್ದ ವೆಂಬುದು ಶಬ್ದದಲ್ಲಿಯೇ ಇದೆ. ಪಟ್ಟಿ ಮಾಡಲು ಹೋದರೆ ಶಬ್ದವೆಲ್ಲ ಜ್ಞಾನವೇ. ಸ್ವೀಕಾರ ಮಾಡುವ ವಿಧಾನ ಜ್ಞಾನದಿಂದ ಕೂಡಿಲ್ಲದ ನಿಮಿತ್ತ ನುಡಿದ ತನುವಿನೊಂದಿಗೆ ಜಗಳ. ತಿಳಿದರೆ ಸ್ವೀಕರಿಸಿದ ತನುವಿನಲ್ಲಿಯೇ ಶಬ್ದದ ಬಲಿ !

**ತನಗಲ್ಲದುದ ನಾಸಿಕ ವಾಸಿಸಿದಲ್ಲಿ ಅಲ್ಲಿಯೇ ದಸಿಯದಕ್ಕನೇರಿಸುವೆನು:**

ವಾಸನೆಯಲ್ಲಿ ಅಜ್ಞಾನ ಬೆರೆತಿರುವುದರಿಂದ ಒಳ್ಳೆಯದು ಕೆಟ್ಟದ್ದು ಎಂದು ಸಿದ್ಧವಾಗಿದೆ. ಮಲ್ಲಿಗೆ ಮಾರುವವನಿಗೆ ಮೀನು ಸೇರುವುದಿಲ್ಲ, ಮೀನು ಮಾರುವವನಿಗೆ ಮಲ್ಲಿಗೆ ಸೇರುವುದಿಲ್ಲ, ಇವೆರಡೂ ಮೂಗುಗಳೇ. ಅಜ್ಞಾನದಿಂದ ಭಿನ್ನ ಭಿನ್ನ ವಾಸನೆ ಗೋಚರಿಸುತ್ತದೆ. ಮೀನು ನೀರಿನಲ್ಲಿದ್ದಾಗ ವಾಸನೆಯಿಲ್ಲ. ಮಲ್ಲಿಗೆ ಮೊಗ್ಗಿನಲ್ಲಿದ್ದಾಗ ವಾಸನೆಯಿಲ್ಲ. ಇವೆರಡರ ಜನನವೂ ಜಲದಿಂದಲೇ. ವಾಸಿಸುವ ಮೂಗು ಕೂಡ ಜಲದಿಂದಾದದ್ದು. ಮೀನು ಮಾರುವವನಿಗೆ ಮೀನಿನ ವಾಸನೆ ಆನಂದ ! ಮಲ್ಲಿಗೆ ಮಾರುವವನಿಗೆ ಮಲ್ಲಿಗೆ ವಾಸನೆ ಆನಂದ ! ತಿಳಿದರೆ ಜಗಳವಿಲ್ಲ. ಎಲ್ಲವೂ ಸೊಗಸೇ.

**ದೃಷ್ಟಿ ಅನು ತಪ್ಪಿ ನೋಡಿದಲ್ಲಿ ಅಲ್ಲಿಯೇ ಕಿತ್ತಿಡುವೆನು, ಚಿತ್ತ ಅನು ತಪ್ಪಿ ಮತ್ತೊಂದ ನೆನೆದಡೆ, ಆತ್ಮನನಲ್ಲಿಯೇ ಕಿತ್ತುಹಾಕುವೆನು. ಇದಕ್ಕೆ ನೀವೇ ಸಾಕ್ಷಿ. ಮನಕ್ಕೆ ಮನೋಹರ ಸಂಕೇಶ್ವರ ಲಿಂಗವು :**

ನೋಡೂದ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ, ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ ಇದು ಅಲ್ಲಮಪ್ರಭುಗಳ ಸೂತ್ರ.

ಚಿತ್ತ ರೂಪ ನೋಡಿದರೆ ರೂಪದೊಂದಿಗೆ ಕೂಡುವ ಬಯಕೆ, ಜಗಳ ಕೊಲೆ ಹಲ್ಲೆ, ಅತ್ಯಾಚಾರ ಜೇಲು ಶಿಕ್ಷೆ. ಇದು ಜಗದ ನೋಡುವ ನಿಯಮ. ಈ ನಿಯಮದಿಂದಲೇ ಜಗತ್ತು ಕೆಟ್ಟಿದೆ. ಚಿತ್ತ ರೂಪದಲ್ಲಿಯ ಸತ್ಯ ನೋಡಿದರೆ ತನ್ನಂತೆ ಇರುವ ಚರ್ಮದ ತನು. ಇದರೊಂದಿಗೆ ಕೂಡಲಿಲ್ಲ ಅಗಲಲಿಲ್ಲ. ಹೀಗೆ ನೋಡುವ, ನೋಡಿ ಕೂಡುವ, ಕೂಡಿ ಎಂದೆಂದೂ ಅಗಲದ ಸತ್ಯ ಸುಖವನು ಶರಣ ಮಾತ್ರ ಬಲ್ಲ. ಇದು ತನಗೆ ತಾನು ಸಾಕ್ಷಿಯಾಗಿ ನೋಡಿಕೊಳ್ಳುವ ಸುಖ. ಮನಕ್ಕೆ ಮನೋಹರ ಸಂಕೇಶ್ವರನ ಸುಖ. ತನ್ನ ಜ್ಞಾನ ತನಗೆ ಲಭಿಸಿದ ಸುಖ. ಸೂತ್ರ ಹಿಡಿದು ತಿಳಿಯುತ್ತಾ ಹೋದರೆ ಸರ್ವರ ಸುಖ !

□

**ಅರಿವಿನ ಪರಿಮಳ :**

- □ ಊಟದಲ್ಲಿ ಖಾರ ಹೆಚ್ಚು ಬಳಕೆಯಾದರೆ ಅಡುಗೆ ಮಾಡಿದವರನ್ನು ಬೈಯ್ಯುತ್ತೇವೆ.
- □ ಉಪ್ಪು ಸಪ್ಪೆ ಹುಳಿ ಖಾರ ಸಿಹಿ ಎನ್ನುವ ರುಚಿ ನಾಲಿಗೆಯಲ್ಲಿದೆಯೋ ಪದಾರ್ಥದಲ್ಲಿದೆಯೋ ಮನದಲ್ಲಿದೆಯೋ ಎಂದು ವೈಜ್ಞಾನಿಕವಾಗಿ ನೋಡಲು ಹೋದರೆ ಉತ್ತರ ಸಿಕ್ಕುತ್ತದೆ.
- □ ಮೆಣಸಿನ ಸಸಿಗೂ ಕಬ್ಬಿನ ಸಸಿಗೂ ಹರಿದ ಜಲವೊಂದೇ. ಕಬ್ಬು ಸಿಹಿ ಮೆಣಸು ಖಾರ. ಅದನ್ನು ತಿನ್ನುವ ತನು ಕೂಡ ಜಲ ರಾಶಿಯಿಂದ ಗಟ್ಟಿಗೊಂಡಿದೆ. ಪದಾರ್ಥವೂ ಜಲ, ತಿನ್ನುವ ತನುವೂ ಜಲ. ಜಲ ಜಲದಲ್ಲಿ ಬೆರೆತು ತನ್ನ ಅಸ್ತಿತ್ವದ ರುಚಿ ಕಳೆದುಕೊಂಡು ಜಲವಾಗಲು ಸಮಯ ಬೇಕಷ್ಟೆ.

# ಕಲ್ಲೊಳಗಣ ಬೆಲ್ಲ ಮೆದ್ದ ತ್ರಿಪುರಾಂತಕ

**ಕಲ್ಲೊಳಗಣ ಬೆಲ್ಲ ಮೆದ್ದವರಾರೋ?**
**ಕಲ್ಲನೆ ಹಿಡಿದು ಬಿಡದೆ ಹಾರುವಿರಿ.**
**ಕಲ್ಲು ಹಲ್ಲನೆ ಕಳೆಯಿತ್ತು,**
**ಬಲ್ಲವರಿದ ಹೇಳಿ.**
**ಕಲ್ಯಾಣದ ತ್ರಿಪುರಾಂತಕ ನೀನೆ ಬಲ್ಲೆಯ್ಯಯ್ಯಾ**

**- ಕಿನ್ನರಿ ಬ್ರಹ್ಮಯ್ಯ ಶರಣರು**

**ಕಲ್ಲೊಳಗಣ ಬೆಲ್ಲ ಮೆದ್ದವರಾರೋ ? :**

ಹಲ್ಲು ಬೆಳೆದು ಹಲ್ಲು ಕಳೆಯುವ ತನಕ ಕಲ್ಲು ಪೂಜಿಸುವುದು ನಿಲ್ಲುವುದಿಲ್ಲ. ಕಲ್ಲೊಳಗಣ ಬೆಲ್ಲ ಮೆಲ್ಲುವ ಭಾಗ್ಯ ಬರುವುದೇ ಇಲ್ಲ. ಕಿನ್ನರಿ ಬ್ರಹ್ಮಯ್ಯ ಶರಣರು ತಮ್ಮ ವಚನ ಸೂತ್ರದ ಮೂಲಕ ಸರ್ವರಿಗೂ ಕಲ್ಲೊಳಗಣ ಬೆಲ್ಲ ಮೆಲ್ಲುವ ಭಾಗ್ಯ ಕಲ್ಪಿಸಿದ್ದಾರೆ.

ಪೃಥ್ವಿಗೆ ಹುಟ್ಟಿದ ಶಿಲೆ, ಕಲ್ಲುಕುಟಿಗಂಗೆ ಹುಟ್ಟಿದ ಮೂರುತಿ, ಮಂತ್ರಕ್ಕೆ ಲಿಂಗವಾಯಿತಲ್ಲ! ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು ಕೈವಿಡಿವ, ಅಚ್ಚವ್ರತ ಗೇಡಿಗಳನೇನೆಂಬೆ ಗುಹೇಶ್ವರಾ ?

ಭೂಮಿಯಲ್ಲಿ ಹುಟ್ಟಿದ ಕಲ್ಲು ಶಿಲ್ಪಿಗೆ ಹುಟ್ಟಿದ ಮೂರ್ತಿ ಮಂತ್ರಕ್ಕೆ ಹುಟ್ಟಿದ ದೇವರನ್ನು ಹಲ್ಲು ಬೀಳುವವರೆಗೂ ಪೂಜಿಸಿದರೂ ಅದೇನು ಮಾತನಾಡುವುದಿಲ್ಲ. ಅದು ಸುಖ ನೀಡುವುದಿಲ್ಲ. ಮಾಡುವ ಧೂಪ ದೀಪಾರತಿ ನೈವೇದ್ಯ ವ್ಯರ್ಥ. ತೊಳೆದರೆ ನೆನೆಯುವುದಿಲ್ಲ. ಮರೆತರೆ ಬಾಡುವುದಿಲ್ಲ. ಕಣ್ಮುಚ್ಚಿ ಹಾಡಿದರೂ ಕೇಳುವುದಿಲ್ಲ. ಪ್ರದಕ್ಷಿಣೆ ಹಾಕಿದರೆ ಸಂತೋಷ ಪಡುವುದಿಲ್ಲ.

ಪತ್ರಿ ಪುಷ್ಪಗಳ ಅಲಂಕಾರದಿಂದ ಗಿಡಮರಗಳು ಹಾಳಾದವೇ ಹೊರತು ಕಲ್ಲಿಗೆ ಕನಿಕರ ಬರುವುದಿಲ್ಲ. ಪೂಜಿಸಿ ಮಂತ್ರ ಪಠಿಸುವವನಿಗೆ ವ್ಯವಹಾರ ; ಪೂಜಿಸುವವನಿಗೆ ಭ್ರಮೆ. ಭ್ರಮೆ ಕಳೆದರೆ ಕಲ್ಲೊಳಗಣ ಬೆಲ್ಲ ಮೆಲ್ಲಲು ಬರುತ್ತದೆ. ಇಡೀ ಪ್ರಪಂಚದಲ್ಲಿಯ ಜನ ಕಲ್ಲನ್ನು ದೇವರೆಂದು ಭಾವಿಸಿದ್ದಾರೆ. ತಾನು ಮಾತ್ರ ಕಲ್ಲೆಂದು ಸತ್ಯ ತಿಳಿದರೆ ಬೆಲ್ಲ ಮೆದ್ದಂತಲ್ಲದೆ ಮತ್ತೇನು ? ತಿಳಿದ ತನು ಪೂಜಿಸಲಿಲ್ಲ. ಅರ್ಚಿಸಲಿಲ್ಲ. ಆರಾಧಿಸಲಿಲ್ಲ. ಪತ್ರಿ ಪುಷ್ಪಗಳನ್ನು ಅರ್ಪಿಸಲಿಲ್ಲ; ಧೂಪ ದೀಪ ನೈವೇದ್ಯಗಳ ಗೊಡವೆಗೆ ಹೋಗಲಿಲ್ಲ. ಪೂಜಿಸುವ ಭ್ರಮಾಧೀನರನ್ನು ನೋಡಿ ಮೂರ್ತಿಯೊಳಗಣ ಕಲ್ಲನ್ನು ನೋಡಿ ಬೆಲ್ಲ ಮೆದ್ದ ಅರಿವಿನ ಸಂಭ್ರಮದಲ್ಲಿರುವುದು ಸುಖದ ಸುಖವಲ್ಲವೆ?

ಕಲ್ಲನ್ನು ದೇವರೆಂದು ಹಿಡಿದು ಮಡಿ ಮೈಲಿಗೆಯೆಂದು ಬಿಡದೆ ಹಾರುವುದನ್ನು ಅರಿವಿನಿಂದ ನೋಡುವುದು ಸುಖದ ಸುಖವಲ್ಲವೆ?

ಕಲ್ಲ ಮನೆಯ ಮಾಡಿ ಕಲ್ಲದೇವರ ಮಾಡಿ ಆ ಕಲ್ಲು ಕಲ್ಲಮೇಲೆ ಕಡೆದಡೆ ದೇವರೆತ್ತ ಹೋದರೋ? ಲಿಂಗ ಪ್ರತಿಷ್ಠೆಯ ಮಾಡಿದವಂಗೆ ನಾಯಕ ನರಕ ಗುಹೇಶ್ವರಾ ! ಪ್ರತಿಷ್ಠಾಪಿಸಿ ಪೂಜಿಸಿ ನರಕಕ್ಕೆ ಭಾಜನನಾಗುವುದಕ್ಕಿಂತ ಕಲ್ಲೊಳಗಣ ಬೆಲ್ಲ ಮೆಲ್ಲುವುದು ವಾಸಿಯಲ್ಲವೆ?

'ಕಲ್ಲದೇವರೆಂದು ಪೂಜಿಸುವರು-ಆಗದು ಕಾಣಿರೊ. ಅಗಡಿಗರಾದಿರಲ್ಲಾ ! ಮುಂದೆ ಹುಟ್ಟುವ ಕೂಸಿಂಗೆ ಇಂದು ಮೊಲೆಯ ಕೊಡುವಂತೆ ಗುಹೇಶ್ವರಾ'

ದೇಹದೊಳಗೆ ದೇವಾಲಯವಿದ್ದು, ಮತ್ತೆ ಬೇರೆ ದೇಗುಲವೇಕಯ್ಯಾ ?

ಎರಡಕ್ಕೆ ಹೇಳಲಿಲ್ಲಯ್ಯ ಗುಹೇಶ್ವರಾ ನೀನು ಕಲ್ಲಾದಡೆ ನಾನು ಏನಪ್ಪೆನು?

ಮಹಾಘನವನರಿಯದೇ ನಿಂದಿರೋ ! ಹುಸಿಯನೆ ಕೊಯ್ದು ಹುಸಿಯನೆ ಪೂಜಿಸಿ ಗಸಣಿಯೊಳಗಾದರು ಗುಹೇಶ್ವರಾ. ಇಂತಹ ಹುಸಿ ಕೆಲಸ ಬೇಕೇ ತನುವಿಗೆ?

ಒಡಲೊಳಗೆ ಮಹಾ ಘನವೆಂಬ ಅರಿವಿದೆ. ಆ ಅರಿವೆ ಗುರು. ಅವನು ಎಲ್ಲ ಬಲ್ಲವ. ಅವನಿಗೆ ಸತ್ಯಮಾತ್ರ ಗೋಚರಿಸುತ್ತದೆ. ಸತ್ಯ ಬಿಟ್ಟು ಮತ್ತೇನನ್ನೂ ನೋಡುವುದಿಲ್ಲ-ಕೇಳುವುದಿಲ್ಲ-ಸ್ಪರ್ಶಿಸುವುದಿಲ್ಲ-ವಾಸಿಸುವುದಿಲ್ಲ- ರುಚಿಸುವುದಿಲ್ಲ. ಒಡಲೊಳಗಿದ್ದಾನೆ. ಒಡಲಿಂಗಾಧಾರವಾಗಿದ್ದಾನೆ. ಒಡಲು ಸೋಂಕದೆ ಆ ಒಡಲನ್ನೇ ಬೆಳಗುವ ಮಹಾ ಘನ ಗುರುದೇವನವನು. ಬೆಳಗಿಂಗೆ ಬೆಳಗಾಗಿ ಬೆಳಗುವ ಕೋಟಿ ಸೂರ್ಯನಿಗೂ ಮಿಗಿಲಾದ ತ್ರಿಪುರ ಸುಂದರನು. ಅವನು ಮಾತ್ರ ಈ ಎಲ್ಲವನ್ನು ಬಲ್ಲನು. ಎಲ್ಲರೊಳಗಿದ್ದಾನೆ. ಯಾರಿಗೂ ಕಾಣನು. ನೋಡಿದವನಿಗೆ ಮಾತ್ರ ಬೆನ್ನು ಬಿಡನು.

□

---

**ಅರಿವಿನ ಪರಿಮಳ :**

- ಹಲ್ಲು ಬೆಳೆದು ಹಲ್ಲು ಕಳೆಯುವ ತನಕ ಕಲ್ಲು ಪೂಜಿಸುವುದು ನಿಲ್ಲುವುದಿಲ್ಲ. ಕಲ್ಲೊಳಗಣ ಬೆಲ್ಲ ಮೆಲ್ಲುವ ಭಾಗ್ಯ ಬರುವುದೇ ಇಲ್ಲ.
- ಪತ್ರಿ ಪುಷ್ಪಗಳ ಅಲಂಕಾರದಿಂದ ಗಿಡಮರಗಳು ಹಾಳಾದವೇ ಹೊರತು ಕಲ್ಲಿಗೆ ಕನಿಕರ ಬರುವುದಿಲ್ಲ. ಪೂಜಿಸಿ ಮಂತ್ರ ಪಠಿಸುವವನಿಗೆ ವ್ಯವಹಾರ ; ಪೂಜಿಸುವವನಿಗೆ ಭ್ರಮೆ. ಭ್ರಮೆ ಕಳೆದರೆ ಕಲ್ಲೊಳಗಣ ಬೆಲ್ಲ ಮೆಲ್ಲಲು ಬರುತ್ತದೆ.
- ಕಲ್ಲನ್ನು ದೇವರೆಂದು ಹಿಡಿದು ಮಡಿ ಮೈಲಿಗೆಯೆಂದು ಬಿಡದೆ ಹಾರುವುದನ್ನು ಅರಿವಿನಿಂದ ನೋಡುವುದು ಸುಖದ ಸುಖವಲ್ಲವೆ?

# ಮನವೆಂಬ ಭಂಡ-ಲಂಡನ ಕತೆ

**ಬೇಡುವ ಭಂಡನ, ಕೊಡದೆ ಹೋರುವ ಲಂಡನ**
**ಉಭಯದ ದ್ರವ್ಯವ ತಂದು ಅಲ್ಲಿ ಉಂಡು,**
**ಸುಖಿಯಾದೆಹೆನೆಂಬ ಉಭಯ ಭಂಡನ ದಿಂಡಿಕೆ ಕೆಡೆಯದು**
**ಮೇಖಲೇಶ್ವರಲಿಂಗದ ಅಂಗವೇಕೆ ತಿಳಿಯದು.**

**- ಕಲಕೇತಯ್ಯ ಶರಣರು**

**ಬೇಡುವ ಭಂಡನ, ಕೊಡದೆ ಹೋರುವ ಲಂಡನ :**

ಆಧ್ಯಾತ್ಮ ವೆಂದರೆ ಅರಿವು. ಹೊರಗಿನ ಎಲ್ಲ ವಸ್ತುಗಳನ್ನು ಅರಿವಿನ ಅಂತರಾಳದಿಂದ ತಿಳಿಯಬೇಕು. ಒಳ ಮುಖನಾಗಿ ತಿಳಿದುಕೊಳ್ಳಲು ತನ್ನರಿವು ಮಾತ್ರ ಸಾಕು. ತನ್ನರಿವಿನಿಂದ ಎಲ್ಲ ವನ್ನು ಹೇಗೆ ತಿಳಿದುಕೊಳ್ಳಬೇಕೆಂಬುದನ್ನು ಸೂಚಿಸಲು ಯಾವ ವೇಷ ಭೂಷಣಗಳ ಅವಶ್ಯಕತೆಯಿಲ್ಲ. ವೇಷ ಹಾಕಿದ ವ್ಯಕ್ತಿ ಕೂಡ ತಿಳಿದು ಸಂತೋಷ ಪಡಬೇಕಿದೆ. ತಿಳಿಯುವ ನಿಟ್ಟಿನಲ್ಲಿ ತಾನು ಮೋಸ ಮಾಡಿಕೊಳ್ಳುವಂತಿಲ್ಲ. ಇತರರನ್ನು ತಪ್ಪು ಹಾದಿ ಹಿಡಿಸುವಂತಿಲ್ಲ. ಆದರೂ ತಿಳಿಯುವ ನಿಟ್ಟಿನಲ್ಲಿ ಬೇಡುವ ನೀಡುವ ವ್ಯವಹಾರಗಳು ಸೃಷ್ಟಿಯಾಗಿವೆ.

ಶಿಷ್ಯನಾದವನು ಗುರುವಿಗೆ ನೀಡಬೇಕೆಂದು ; ಗುರುವಾದವನು ಶಿಷ್ಯನನ್ನು ಬೇಡಬೇಕೆಂದು ಸಂಪ್ರದಾಯವೇ ಸೃಷ್ಟಿಯಾಗಿದೆ. ಈ ಎರಡು ಕ್ರಿಯೆಗಳನ್ನು ಬಲವಾಗಿ ತಿಳಿಯುವ ಅರಿವು ಈ ಇಬ್ಬರಲ್ಲಿ ಗೌಣವಾಗಿದೆ. ಗುರುಶಿಷ್ಯ ರಿಬ್ಬರ ತನುವಿನಲ್ಲಿ ಬೇಡಿ ಬಳಕೆ ಮಾಡುವ, ನೀಡಿ ದಾನಿಯಾ ಗುವ ಛಲಗಳು ಅಧಿಕವಾಗಿವೆ.

ಕಲಕೇತಯ್ಯ ಶರಣರು ಬೇಡುವ ಗುರುವನ್ನು ಭಂಡನೆಂದು, ಕೊಡುವ ಶಿಷ್ಯನನ್ನು ಲಂಡನೆಂದು ಕರೆದಿದ್ದಾರೆ. ಗುರುವೆಂದು ವೇಷ ಹಾಕಿಕೊಂಡು ಬೇಡುವ ಮನ, ಶಿಷ್ಯನೆಂದು ಹೇಳಿ ಕೊಂಡು ಕೊಡುವ ಮನಗಳೆರಡೂ ಒಂದು ನಾಣ್ಯದ ಎರಡು ಮುಖಗಳಿದ್ದಂತೆ.

ಧಾನ್ಯ ಬೆಳೆದದ್ದು ಭೂಮಿ, ದ್ರವ್ಯ ದೊರೆತದ್ದೂ ಭೂಮಿಯಲ್ಲಿಯೇ, ಇವೆರಡೂ ಹೊರ ಗಣ ಸಂಪತ್ತು. ಗುರುವಿಗೆ ಶಿಷ್ಯ ತನ್ನದೇ ಆದ ಪ್ರೊಡೆಕ್ಟ್ ಕೊಡಲೇ ಇಲ್ಲ. ಏನನ್ನೂ ಗುರುವಿಗೆ ಕೊಡದೆ ಕೊಟ್ಟೆನೆಂಬ ಮಣ ಸೂತಕ ಭಾರದ ಶಬ್ದ ಹೊತ್ತು ಪ್ರಚಾರ ಮಾಡುತ್ತಿದ್ದಾನೆ. ಈತ ಬೇರಾರೂ ಅಲ್ಲ. ಶಿಷ್ಯನ ತನುವನ್ನಾವರಿಸಿಕೊಂಡ ಮನವೆಂಬ ಲಂಡ !

ದ್ರವ್ಯ ಧಾನ್ಯಗಳಿದ್ದೂ ಸಮಾಧಾನಿಯಲ್ಲದ ಶಿಷ್ಯನ ಅಜ್ಞಾನವನ್ನು ಶಿಷ್ಯನ ಅರಿವಿನಿಂದಲೇ ತೋರಿ ಆತನನ್ನು ನಿಶ್ಚಿಂತನನ್ನಾಗಿ ಮಾಡಬೇಕಾದ ಗುರು ಶಿಷ್ಯನಿಂದ ಧಾನ್ಯ , ದ್ರವ್ಯ ಬೇಡುತ್ತಿದ್ದಾನೆ. ಶಾಲಾ ಕಾಲೇಜು ಅನ್ನದಾನ, ರಥ, ಉತ್ಸವಗಳನ್ನು ಮಾಡಿ ತಾನೂ ಕತ್ತಲಲ್ಲಿದ್ದು ಇತರರನ್ನು ಕತ್ತಲಲ್ಲಿ ಡುತ್ತಿದ್ದಾನೆ. ಹೀಗೆ ಗುರುವಿನ ತನುವನ್ನು ಆವರಿಸಿಕೊಂಡಿದೆ ಭಂಡನೆನ್ನುವ ಮನ!

**ಹೀಗೆ ಉಭಯ ದ್ರವ್ಯ ತಂದು ಅಲ್ಲಿ ಉಂಡು, ಸುಖಿಯಾದೆಹೆನೆಂಬ ಉಭಯ ಭಂಡನ ದಿಂಡಿಕೆ ಕೆಡೆಯದು ಮೇಖಲೇಶ್ವರ ಲಿಂಗದ ಅಂಗವೇಕೆ ತಿಳಿಯದು:**

ಹೀಗೆ ಬಳಕೆಯಾದ ಗುರು ಶಿಷ್ಯರೆಂಬ ಮನದ ಭಂಡ ಲಂಡರಿಬ್ಬರ ದ್ರವ್ಯವ ತಂದು, ಅಲ್ಲಿ

ಪ್ರಸಾದವೆಂದು ಉಂಡು ಸುಖಿಯಾದೆನೆಂಬ ಉಭಯ ಭಂಡನ ದಿಂಡಿಕೆ ಅಂದರೆ ದೇಹ ವ್ಯರ್ಥ ಉರುಳದೆ ಬಿಡದು. ಲಿಂಗ (ಅರಿವು)ತಿಳಿಯದೆ ಉರುಳಿದ ಅಂಗ ವ್ಯರ್ಥ. ಬೇಡುವ ನೀಡುವ ಭಂಡ ಲಂಡತನದ ಅಜ್ಞಾನವನ್ನು ಮೇಖಲೇಶ್ವರ ಲಿಂಗದ ಅಂದರೆ ಅರಿವಿನ ಅಂಗವೇಕೆ ತಿಳಿಯದು ಎಂಬುದೇ ಕಲಕೇತಯ್ಯ ಶರಣರ ಪ್ರಶ್ನೆ.

□

---

**ಅರಿವಿನ ಪರಿಮಳ :**

- □ ಆಧ್ಯಾತ್ಮ ವೆಂದರೆ ಅರಿವು. ಹೊರಗಿನ ಎಲ್ಲ ವಸ್ತುಗಳನ್ನು ಅರಿವಿನ ಅಂತರಾಳದಿಂದ ತಿಳಿಯಬೇಕು. ಒಳ ಮುಖನಾಗಿ ತಿಳಿದುಕೊಳ್ಳಲು ತನ್ನರಿವು ಮಾತ್ರ ಸಾಕು. ತನ್ನರಿವಿನಿಂದ ಎಲ್ಲವನ್ನು ಹೇಗೆ ತಿಳಿದುಕೊಳ್ಳಬೇಕೆಂಬುದನ್ನು ಸೂಚಿಸಲು ಯಾವ ವೇಷ ಭೂಷಣಗಳ ಅವಶ್ಯಕತೆಯಿಲ್ಲ. ವೇಷ ಹಾಕಿದ ವ್ಯಕ್ತಿ ಕೂಡ ತಿಳಿದು ಸಂತೋಷ ಪಡಬೇಕಿದೆ. ತಿಳಿಯುವ ನಿಟ್ಟಿನಲ್ಲಿ ತಾನು ಮೋಸ ಮಾಡಿಕೊಳ್ಳುವಂತಿಲ್ಲ.
- □ ಗುರುವೆಂದು ವೇಷ ಹಾಕಿಕೊಂಡು ಬೇಡುವ ಮನ, ಶಿಷ್ಯನೆಂದು ಹೇಳಿಕೊಂಡು ಕೊಡುವ ಮನಗಳೆರಡೂ ಒಂದು ನಾಣ್ಯದ ಎರಡು ಮುಖಗಳಿದ್ದಂತೆ.

# ಐಗೈ ಮನೆಗೆ ಮೂಗೈ ತೊಲೆ

ಐಗೈ ಮನೆ ನಾಗೈಕಂಬ ಮೂಗೈ ತೊಲೆ
ಭೇದ ಕರವಳವ ಹಾಕಿ ನೋಡಿ ಅರಿದಡೆ ಆಯ ಬಂದಿತ್ತು
ಮರದಡೆ ಆಯ ಹೋಯಿತ್ತು
ಮೂಗೆಯ್ಯ ಕರದಲ್ಲಿ ಇದರರಿಕೆಯಾಗಿ
ಹೇಳಾ ಧಾರೇಶ್ವರ ನಿನ್ನಾಲಯಕ್ಕೆ

– ಕಾಮಾಟದ ಭೀಮಣ್ಣ ಶರಣರು

**ಐಗೈಮನೆ ನಾಗೈಕಂಬ ಮೂಗೈ ತೊಲೆ ಕರವಳವ ಹಾಕಿ ನೋಡಿ ಅರಿದಡೆ ಆಯ ಬಂದಿತ್ತು :**

ತನು ಬಲು ಸೂಕ್ಷ್ಮ ಅರಿವಿನ ಸಂಪತ್ತಿನಿಂದ ಕೂಡಿದೆ. ಜಾಣರ ಜಾಣನಾದ ವಿಜ್ಞಾನಿ ಮಾತ್ರ ಇದನ್ನು ಭೇದಿಸಿ ಶಾಶ್ವತ ಆನಂದ ಪಡೆಯಬಲ್ಲ. ಭೂಮಿ ಹೇಮ ವಿಷಯ ವಸ್ತುಗಳಿಗಾಗಿ ಜಾಣತನ ಬಳಕೆಯಾದರೆ ತನು ವ್ಯರ್ಥ ಹಾಳಾಗುತ್ತದೆ. ಕಾಮಾಟದ ಭೀಮಣ್ಣ ಶರಣರು ಹೇಳಿದ ಸೂತ್ರದನು ಗುಣವಾಗಿ ತನುವಿನ ಅರಿಕೆಯಾದರೆ ಸಾಕು ತನು ಧಾರೇಶ್ವರನೆಂಬ ಅರಿವಿನ ಆಲಯವೇ ಆಗುತ್ತದೆ.

ತನು ಐಗೈ ಮನೆ. ಈ ಮನೆಯಿಂದ ಕಣ್ಣಿನ ಮುಖಾಂತರ ಸರ್ವವನ್ನು ನೋಡಬಹುದು. ಕಿವಿಯ ಮುಖಾಂತರ ಮಾತುಗಳನ್ನು, ಧ್ವನಿಯನ್ನು ಇಂಪಾದ ಸಂಗೀತವನ್ನು ಆಲಿಸಬಹುದು. ಚರ್ಮದ ಮುಖಾಂತರ ಸ್ಪರ್ಶದ ಆನಂದವನ್ನು ಪಡೆಯಬಹುದು. ಮೂಗಿನ ಮುಖಾಂತರ ವಾಸಿ ಸಬಹುದು. ನಾಲಿಗೆಯ ಮುಖಾಂತರ ರುಚಿಸಬಹುದು. ಹೀಗೆ ಪಂಚೇಂದ್ರಿಯಗಳ ಮೂಲಕ ಸುಖಿ ಸುವ ತನು ಐಗೈ ಮನೆಯಾಗಿದೆ.

ಈ ಐಗೈ ಮನೆಯ ಒಡೆಯನನ್ನು ನಾಗೈ ಕಂಬವಾದ ಸಾಲೋಕ್ಯ ,ಸಾಮಿಪ್ಯ , ಸಾಯುಜ್ಯ ಎಂಬ ಅರಿವಿನ ಇಷ್ಟ ದೇವತೆಯ ಮುಖಾಂತರ ಬೆರೆಯಬಹುದು.

ಈ ಐಗೈ ಮನೆ ನಾಗೈಕಂಬದಲ್ಲಿ ಮೂಗೈ ಎಂಬ ಮೂರು ತೊಲೆಗಳಿವೆ. ಅವೆ ಸ್ಥೂಲ ಸೂಕ್ಷ್ಮ ಕಾರಣ ತನುಗಳು.

**ಭೇದ ಕರವಳವ ಹಾಕಿ ನೋಡಿ ಅರಿದಡೆ ಆಯ ಬಂದಿತ್ತು. ಮರದಡೆ ಆಯ ಹೋ ಯಿತ್ತು ಮೂಗೈಯ್ಯ ಕರದಲ್ಲಿ ಇದರರಿಕೆಯಾಗಿ ಹೇಳಾ ಧಾರೇಶ್ವರ ನಿನ್ನಾಲಯಕ್ಕೆ :**

ಸ್ಥೂಲ ಸೂಕ್ಷ್ಮ ಕಾರಣವೆಂಬ ಮೂರು ಜನ ಕುಸ್ತಿಪಟುಗಳು. ಇವರೊಂದಿಗೆ ಕುಸ್ತಿ ಆಡು ವುದು ಸಮರ್ಥನಿಗೆ ಮಾತ್ರ ಸಾಧ್ಯ . ಮೂವರೊಂದಿಗೆ ಮಲ್ಲಯುದ್ಧ ಮಾಡಬೇಕಿಲ್ಲ. ಸ್ಥೂಲ ಸೂಕ್ಷ್ಮಕ್ಕೆ ಕಾರಣನಾದ ಕುಸ್ತಿಪಟುವನ್ನು ಪಟುವುನಿಂದ ಹಿಡಿದರೆ ಸಾಕು, ಮನ ಕಾರಣನೆಂಬ ಧಾರೇಶ್ವರನಲ್ಲಿ ಲೀನವಾಗಿ, ಧಾರೇಶ್ವರನೆಂಬ ಅರಿವಿನ ಆಲಯವೇ ತಾನಾಗುತ್ತದೆ.

□

# ಸತ್ಯ ಅರಿತರೆ ಜಗವೆಲ್ಲ ಸುಂದರ

**ತಾ ಮಿಥ್ಯನಾದ ಮತ್ತೆ ಜಗವೆಲ್ಲವೂ ತನಗೆ ಮಿಥ್ಯ.**
**ತಾ ತಥ್ಯನಾದ ಮತ್ತೆ ಜಗವೆಲ್ಲವೂ ತಥ್ಯ.**
**ಅಂಗೈಯಲ್ಲಿ ಹಿಡಿದು ಕೈದು ನೋಡದೆ**
**ಅಲಗು ಕೆಟ್ಟಿತೆಂದು ಹಲಬುವಂತಾಗದೆ**
**ತನ್ನ ತಾ ಮರದು ಅನ್ಯರ ದೆಸೆಯಿಂದ ತನ್ನ ಕೇಳುವನಂತಾಗದೆ**
**ಅರಿ ನಿಜದರಿವ ಮರೆಯದಂತೆ**
**ಕಾಲ ಕರ್ಮವಿರಹಿತ ತ್ರಿಪುರಾಂತಕ ಲಿಂಗದೊಳಗಾದವನ ಇರವು.**

**– ಕೀಲಾರದ ಭೀಮಣ್ಣ ಶರಣರು**

**ತಾ ಮಿಥ್ಯನಾದ ಮತ್ತೆ ಜಗವೆಲ್ಲವೂ ತನಗೆ ಮಿಥ್ಯ:**

ಪ್ರತಿಯೊಬ್ಬ ಮನುಷ್ಯ ಇಂದಿನ ಸ್ಥಿತಿಗತಿಗಳನ್ನು ನೋಡಿ ಜಗತ್ತು ಕೆಟ್ಟಿದೆ. ಪ್ರಪಂಚ ಕೆಟ್ಟಿದೆ. ಅನ್ಯಾಯ ಅಕ್ರಮ ಭ್ರಷ್ಟಾಚಾರ ಹೆಚ್ಚಾಯಿತು ಎಂದು ಕ್ಷಣ ಕ್ಷಣಕ್ಕೂ ಲೊಚಗುಡುವುದು ಸಹಜ. ಹನ್ನೆರಡು ಜನ ಬುದ್ಧಿವಂತರ ಕಥೆಯಂತೆ ! ತನಗೆ ಹನ್ನೊಂದು ಜನರನ್ನು ಮಾತ್ರ ಎಣಿಸಲು ಬರುತ್ತದೆ ; ತನ್ನನ್ನು ಬಿಟ್ಟು ! ತಾನೂ ಅದರಲ್ಲಿದ್ದೇನೆ ಎಂದು ತನಗೆ ತಿಳಿಯುವುದೇ ಇಲ್ಲ.

ಕೀಲಾರದ ಭೀಮಣ್ಣ ಶರಣರು ಹೇಳುತ್ತಾರೆ ತಾ ಮಿಥ್ಯನಾದರೆ ಜಗವೆಲ್ಲವೂ ತನಗೆ ಮಿಥ್ಯ . ತಾ ಸತ್ಯನಾದರೆ ಜಗವೆಲ್ಲವೂ ತನಗೆ ಸತ್ಯ .

ಅಂಗೈಯಲ್ಲಿ ಹಿಡಿದು ಆಯುಧ ನೋಡಿ ಹರಿತವಿಲ್ಲವೆಂದು ಹಲಬುವಂತಾಗದೆ ಯುದ್ಧದಲ್ಲಿ ಧುಮುಕಬೇಕು. ನಾನಾ ವರಸೆಗಳಿಂದ ಶಬ್ದ, ಸ್ಪರ್ಶ, ರುಚಿ,ದೃಶ್ಯ ವಾಸನೆಗಳ ರಣರಂಗದಲ್ಲಿ ಗೆದ್ದು ತನಗೆ ತಾನು ವೀರನಾದರೆ ಜಗವೆಲ್ಲವೂ ತನಗೆ ಸತ್ಯ . ತನಗೆ ತಾನೂ ಸತ್ಯ ! ಇದು ಪ್ರಯೋಗಕ್ಕೆ ಹೋದವರ ಮಾತು. ಭೀಮಣ್ಣ,ಬಸವಣ್ಣನವರ ಮಾತು !

''ಲಾಂಛನಕ್ಕೆ ಶರಣೆಂಬೆ; ಅವರಂತರಂಗವ ನೀವೆ ಬಲ್ಲಿರಿ ! ತೊತ್ತಿಂಗೆ ತೊತ್ತುಗೆಲಸವಲ್ಲದೆ ಅರಸರ ಸುದ್ದಿ ಎನಗೇಕಯ್ಯಾ ? ರತ್ನ ಮೌಕ್ತಿಕದಚ್ಚು,ಕೂಡಲ ಸಂಗಮದೇವಾ ನಿಮ್ಮ ಶರಣರು.''

ತನುವಿನ ಹೊರಗಿನ ಕ್ರಿಯೆ ನೋಡಿ ಅಲ್ಲಗಳೆಯುವುದು ತರವಲ್ಲ. ಮನವೆಂಬ ಅರಸ ತನುವನ್ನು ಆವರಿಸಿಕೊಂಡಿದ್ದಾನೆ. ಅರಸನ ಸುದ್ದಿ ಎನಗೇಕೆ? ತನು ಅರಿವಿನ ಲಾಂಛನ ! ಕೂಡಲ ಸಂಗನ ರತ್ನ ಮೌಕ್ತಿಕದ ಅಚ್ಚು. ತನು ಆವರಿಸಿಕೊಂಡ ಮನವೆಂಬ ಅಜ್ಞಾನದ ಅರಸನನ್ನು ಸದೆಬಡೆಯಲು ಮಹಾ ಜ್ಞಾನಿ ಸಾಕ್ಷಾತ್ ತನುವಿನೊಡೆಯ ಕೂಡಲ ಸಂಗಯ್ಯನೇ ಇದ್ದಾನೆ. ನಾನು ಅವನ ತೊತ್ತು, ಸೇವಕ; ತೊತ್ತಿಂಗೆ ತೊತ್ತು ಕೆಲಸವಲ್ಲದೆ ತನು ಆವರಿಸಿಕೊಂಡ ಅಜ್ಞಾನವೆಂಬ ಅರಸನ ಸುದ್ದಿ ಎನಗೇಕಯ್ಯಾ ಎಂದು ಪ್ರಶ್ನಿಸಿ ಜಗದ ತನುಗಳ ನಿಂದೆಗೆ ಕಡಿವಾಣ ಹಾಕಿದ್ದಾನೆ ಬಸವಣ್ಣ.

ತೊಗಟೆ ಕಾಣುತ್ತದೆ ಅದರೊಳಗಿನ ಬೀಜ ಕಾಣುವುದಿಲ್ಲ. ಬೀಜ ಕಾಣು ತ್ತದೆ ಅದರೊಳಗಿನ ಅಂಕುರ ಕಾಣುವುದಿಲ್ಲ. ತೊಗಟೆ ಮತ್ತು ಬೀಜ ಸೀಳಿ ಅಂಕುರ ಹೊರಬಂದು ಮರವಾದಾಗ ಎಲ್ಲಿ ನೋಡಿದರೂ ಆನಂದ ಎಲ್ಲಿ ಮುಟ್ಟಿದರೂ ಸಂತೋಷ. ತೊಗಟೆ ಬೀಜ ಸೀಳಿ ಅಂಕುರ ಹೊರ

ಬರಿಸುವ ಪ್ರಯತ್ನ ನಮ್ಮಿಂದ ಸಾಧ್ಯವಾಗುವುದೇ ಇಲ್ಲ. ತೊಗಟೆ ಬೀಜ ಸೀಳಿ ಅಂಕುರ ನೋಡುವ ಕಣ್ಣು ಕೂಡಾ ಅಜ್ಞಾನದಿಂದ ಮರೆಯಾಗಿದೆ.

ತನ್ನ ತಾನು ಮರೆತು ಅನ್ಯರ ಬಾಯಿಂದ ಅನ್ಯರ ವಿಷಯ ಕೇಳಿ ತೊಗಟೆಯನ್ನು (ತನುವನ್ನು) ಜರಿದು ಜಗತ್ತು ಕೆಟ್ಟಿದೆ ಎಂದು ದೂಷಿಸುವುದು ಹಲಬುವುದು ಸರಿಯೇ? ತೊಗಟೆ ಬೀಜ ಅಂಕುರದ ಸೊತ್ತು. ಅವೆರಡೂ ಅಂಕುರಕ್ಕೆ ನಾಂದಿ ! ತ್ರಿಪುರಾಂತಕನೆಂಬ ಜ್ಞಾನಿ ಅವೆರಡರೊಳಗಿದ್ದಾನೆ. ತೊಗಟೆಯೂ ಅವನೇ ,ಬೀಜವೂ ಅವನೇ, ಅಂಕುರವೂ ಅವನೇ. ತನಗೆ ಅರಿವಾದರೆ ತಾನೇ ತ್ರಿಪುರಾಂತಕ ; ಎಲ್ಲರೂ ತ್ರಿಪುರಾಂತಕರೇ ! ಯಾರನ್ನು ನಿಂದಿಸುವುದು? ಯಾರನ್ನು ತೆಗಳುವುದು ? ಜಗತ್ತು ಕೆಟ್ಟಿಲ್ಲ. ನಾನು ಕೆಟ್ಟಿದ್ದಕ್ಕೆ ಜಗತ್ತು ಕೆಟ್ಟಿದೆಯೆಂದು ಭಾಸವಾಗುತ್ತಲಿದೆ. ನನಗೆ ತಿಳಿದರೆ ಜಗತ್ತು ಸುಂದರವೇ ಆಗಿದೆ.

□

**ಅರಿವಿನ ಪರಿಮಳ :**

□ ನಾನಾ ವರಸೆಗಳಿಂದ ಶಬ್ದ, ಸ್ಪರ್ಶ, ರುಚಿ,ದೃಶ್ಯ ವಾಸನೆಗಳ ರಣರಂಗದಲ್ಲಿ ಗೆದ್ದು ತನಗೆ ತಾನು ವೀರನಾದರೆ ಜಗವೆಲ್ಲವೂ ತನಗೆ ಸತ್ಯ . ತನಗೆ ತಾನೂ ಸತ್ಯ !

□ ಜಗತ್ತು ಕೆಟ್ಟಿಲ್ಲ. ನಾನು ಕೆಟ್ಟಿದ್ದಕ್ಕೆ ಜಗತ್ತು ಕೆಟ್ಟಿದೆಯೆಂದು ಭಾಸವಾಗುತ್ತಲಿದೆ. ನನಗೆ ತಿಳಿದರೆ ಜಗತ್ತು ಸುಂದರವೇ ಆಗಿದೆ.

# ಶಬ್ದ ತಿಳಿದವನೆ ಬ್ರಹ್ಮ

ತನ್ನಲೊಂದು ಗುಣ ತೋರಲಿಕ್ಕಾಗಿ
ಆ ಗುಣವ ಇದಿರ ಕಂಡು ನುಡಿದರೆಂದು ನೋಯಲೇತಕ್ಕೆ
ಆ ನುಡಿ ತನಗೆ ನಿರುತ್ತರ ವೆಂಬುದನರಿದು
ಘಾಯ ಬಾಹುಗಳಲ್ಲಿ ಶ್ರೋಣಿತ ಹೊರೆಯಲ್ಲಿ ನಿಂದಿರಲಿಕ್ಕಾಗಿ
ಘಾಳಿಸಿ ಹೊರವಡಿಸಿದಾತ ಹಗೆತನ ನೆಂಬುದರಿತು
ತನ್ನಲುಂಟಾದವಗುಣ ತನಗೆ ತೋರಿದರೆ
ದೃಷ್ಟವ ಕಂಡು ಹೇಳಿದ ಮತ್ತೆ ಮಿಥ್ಯಗುಣವಿಲ್ಲದೆ
ಆ ಕಷ್ಟಗುಣವ ಬಿಡಬೇಕು
ಈ ಗುಣ ಅಂಗವಿದ್ದಲ್ಲಿ ನಿಂದೆಯ ದುರ್ಗುಣ ಸೋಂಕದಿಹವೆ?
ಅರಿಯದೆ ಸೋಂಕಿದಲ್ಲಿ ಅರಿದು ಮತ್ತೆ ತೊರೆಯಬೇಕು
ತೋರಿದಡೆ ಕೂಗಿನ ದನಿಗೆ ಹೊರಗು
ಮಹಾ ಮಹಿಮ ಮಾರೇಶ್ವರಾ

– ಕೂಗಿನ ಮಾರಯ್ಯ ಶರಣರು

**ತನ್ನಲೊಂದು ಗುಣ ತೋರಲಿಕ್ಕಾಗಿ ಆ ಗುಣವ ಇದಿರ ಕಂಡು ನುಡಿದರೆಂದು ನೋಯಲೇತಕ್ಕೆ?**

ತನುವಿನ ದುರ್ಗುಣ ಕಂಡು ನುಡಿದು ನಿಂದಿಸುವುದು ಸಹಜ. ಇತರರ ನುಡಿಗಳಿಂದ ತನು ನೋಯುತ್ತದೆ. ಆ ನುಡಿಗಳು ತನುವಿನಲ್ಲಿ ಸಂಗ್ರಹವಾಗಿ ಗಾಯಗೊಂಡು ಹಂತ ಹಂತವಾಗಿ ಕೊಲ್ಲುತ್ತವೆ. ತಿಳಿದರೆ ತನುವಿನಲ್ಲಿದ್ದ ದುರ್ಗಣ ಅಳಿಯುವುದಕ್ಕಾಗಿ ನಿಂದೆಯ ಮಾತು. ಆ ಮಾತಿನಿಂದ ತನುವಿನ ದುರ್ಗುಣ ಅಳಿಯುವುದಕ್ಕೆ ಸಹಕಾರವಾಯಿತು. ಹಾಗೆಯೇ ತನುವಿಗೆ ಬಡಿದ ಮಾತು ನಿರುತ್ತರವಾಗಿ ಜ್ಞಾನವಾಯಿತು.

ತನುವಿನಲ್ಲುಂಟಾದ ಅವಗುಣ ತನಗೆ ತೋರಬೇಕು. ಅವಗುಣ ಅರಿತು ತೊರೆಯಬೇಕು. ಅವಗುಣಕ್ಕೆ ನಿಂದಿಸಿ ಉಪಕಾರ ಮಾಡಿದ ತನುವನ್ನು ವಂದಿಸಬೇಕೆ? ನಿಂದಿಸಬೇಕೆ?

ತನ್ನ ತನುವಿನ ಅವಗುಣ ಮತ್ತು ನಿಂದಿಸಿದ ನುಡಿ ಈ ಎರಡನ್ನು ಪ್ರಯೋಗಕ್ಕೆ ಕೊಂಡೊಯ್ದು ಅರಿವಿನ ಒರೆಗಲ್ಲಿಗೆ ಹಚ್ಚಿ ತಿಳಿಯಬೇಕು ತಿಳಿಯದಿದ್ದಲ್ಲಿ ಪುನಃ ತಿಳಿದು ಅವಲೋಕಿಸಿ ಶಬ್ದವನ್ನು ಅರಿಯಬೇಕು. ಅರಿತರೆ ಶಬ್ದವೂ ಅಪ ಶಬ್ದವೂ ಶಬ್ದದಲ್ಲಿಯೇ ಇದೆ. ತಿಳಿದಡೆ ಕೂಗಿ ನಿಂದಿಸಿದ ಶಬ್ದ ಕೂಗಿನ ದನಿಗೆ ಹೊರಗು. ತಿಳಿಯದಿದ್ದಡೆ ನಿಂದಿಸಿದ ಶಬ್ದದಿಂದಲೇ ಯುದ್ಧ, ಆ ಶಬ್ದದಿಂದಲೇ ಕೊಲೆ. ಆ ಶಬ್ದದಿಂದಲೇ ಆತ್ಮಹತ್ಯೆ. ನಿಂದಿಸಿದ ತನು ಇಲ್ಲದಿದ್ದರೂ ನಿಂದಿಸಿದ ಶಬ್ದಗಳು ತನುವಿನಲ್ಲಿ ಮನೆ ಮಾಡಿಕೊಳ್ಳುತ್ತವೆ. ನೆನಪಿಸಿಕೊಂಡಾಗೊಮ್ಮೆ ಕೊಲ್ಲುತ್ತವೆ. ಇಲ್ಲ ಕೊಲೆ ಮಾಡುತ್ತವೆ. ಶಬ್ದ ತಿಳಿಯುವ ಜಾಣತನ ಹೊಳೆಯದಿದ್ದರೆ ಮನುಷ್ಯ ಮೃಗಕ್ಕಿಂತಲೂ ಕಡೆ. ತಿಳಿದರೆ ಶಬ್ದ ಬ್ರಹ್ಮ. ತಿಳಿದ ತಾನೂ ಬ್ರಹ್ಮ!

□

# ಬುದ್ಧ-ಬಸವ-ಗಾಂಧಿಯಂತೆ ತನುಗಳೆಲ್ಲ ಒಂದೆ ತಿಳಿಯಬೇಕಷ್ಟೆ

**ಬಿತ್ತು ಅಂಕುರವ ನುಂಗಿಪ್ಪಾಗ**
**ಅಂಕುರ ಆ ಬಿತ್ತ ತನ್ನಯ ಸಂಕೇತದಲ್ಲಿ ಇರಿಸಿಕೊಂಡು ಇಹಾಗೆ**
**ಉಭಯದ ಭೇದ ಎಲ್ಲಿ ಅಡಗಿತ್ತು ಹೇಳಿರಣ್ಣಾ.**
**ಅರುಹಿಸಿಕೊಂಬ ಕುರುಹು; ಆ ಅರುಹಿನಲ್ಲಿ ಕುರುಹಿನ ಕಳೆ**
**ನಿಂದ ತೆರಪಾವುದು?**
**ಅರುಹಿಸಿಕೊಂಬ ಅರಿವು ತೋರಿಸಿಕೊಂಬ ಕುರುಹಿನ ಕಳೆ**
**ಬೇರೊಂದೆಡೆ ತೆರಪಿಲ್ಲ, ಅದು ತಾನೆ ನಿಶ್ಚಯ;**
**ಪುಣ್ಯಾರಣ್ಯದಹನ ಭೀಮೇಶ್ವರಲಿಂಗ ನಿರಂಗ ಸಂಗ.**

**-ಕೋಲ ಶಾಂತಯ್ಯ ಶರಣರು**

**ಬಿತ್ತು ಅಂಕುರವ ನುಂಗಿಪ್ಪಾಗ ಅಂಕುರ ಆ ಬಿತ್ತು ತನ್ನಯ ಸಂಕೇತದಲ್ಲಿ ಇರಿಸಿಕೊಂಡು ಇಹಾಗೆ:**

ಅರಿವು ಎನ್ನುವುದು ಬೀಜ ಅಂಕುರ ನುಂಗಿ ಆ ಅಂಕುರವನ್ನು ತನ್ನ ಸಂಕೇತದಲ್ಲಿರಿಸಿ ಕೊಂಡಂತೆ. ಅರಿವು ತನುವನ್ನು ನುಂಗಿ ತನುವಿನ ಸಂಕೇತದಲ್ಲಿ ಅರಿವನ್ನಿರಿಸಿಕೊಂಡಂತೆ. ಅರಿವು ತನುವಿನಲ್ಲಿದೆಯೋ, ತನುವಿನಲ್ಲಿ ಅರಿವಿದೆಯೋ? ಅರಿವಿನ ಬಳಕೆಯಿಂದ ತನುವಿಗೊಂದು ಬೆಲೆ. ತನುವಿನ ಕಣ ಕಣದಲ್ಲಿಯೂ ಅರಿವಿದೆ. ಆ ಅರಿವಿನಿಂದಲೇ ತನು ಕಳೆಗೊಂಡು ನಳನಳಿಸುತ್ತಿದೆ.

ಅರಿವಿಗೂ ತನುವಿಗೂ ಅವಿನಾಭಾವ ಸಂಬಂಧ. ಬಸವಣ್ಣ ಬುದ್ಧ ಮಹಾವೀರ ಅಂಬೇಡ್ಕರ ಗಾಂಧಿ ಎಂದು ವಿಂಗಡಿಸುವಂತಿಲ್ಲ. ಅರಿವನ್ನು ಸಂಪೂರ್ಣ ಬಳಕೆ ಮಾಡಿಕೊಂಡ ತನುಗಳು ಹೀಗೆ ಹೆಸರು ಪಡೆದವು. ಅರಿವು ಬಳಕೆ ಮಾಡಿಕೊಳ್ಳದ ತನುಗಳು ಅಧಮವೆಂದಲ್ಲ, ಅರಿವಿದೆ ಬಳಕೆ ಮಾಡಿಕೊಂಡಿಲ್ಲವಷ್ಟೇ.

ಅರಿವನ್ನು ಅರಿಯುವ ತನುವನ್ನು ಬೇರೆಡೆ ಹುಡುಕುವಂತಿಲ್ಲ.ಬೇರೆ ತನುಗಳನ್ನು ಆರಾಧಿಸಿ ತನುವಿನ ಅರಿವನ್ನು ತನುವು ತುಂಬಿಕೊಳ್ಳುವಂತಿಲ್ಲ. ತುಂಬಿಕೊಂಡ ಅರಿವು ಸಂಗ್ರಹ ರೂಪದಲ್ಲಿ ಹೊರಚೆಲ್ಲುತ್ತದೆಯೇ ಹೊರತು ಆ ಅರಿವೇ ತಾನಾಗಲರಿಯದು. ತನುವಿಗೂ ತನುವಿನಲ್ಲಿರುವ ಅರಿವಿಗೂ ತುಂಬಿಕೊಂಡ ಅರಿವಿಗೂ ಅಜಗಜಾಂತರ ವ್ಯತ್ಯಾಸ. ಒಂದಕ್ಕೊಂದು ಸಂಬಂಧವಿಲ್ಲ . ಬುದ್ಧ,ಬಸವ, ಗಾಂಧಿಯ ಮಾತುಗಳು ಅವರ ಅನುಭಾವದ ಮಾತುಗಳೇ ಹೊರತು ತನಗೆ ಸುಖ ನೀಡಲರಿಯವು. ಅವರ ಅನುಭಾವದಿಂದ ಬಂದ ಮಾತು ಕೃತಿ ಒಂದೇ ಆಗಿತ್ತು. ಅವರ ಮಾತು ನನ್ನ ಕೃತಿ ಒಂದಾಗಲರಿಯವು. ಅವರ ಮಾತು ತನು ಅಳವಡಿಸಿಕೊಳ್ಳಬಹುದು; ಆದರೆ ತನುವಿನ ಕೃತಿ ಅವರ ಮಾತಿಗೆ ಸ್ಪಂದಿಸುವುದಿಲ್ಲ. ಪ್ರಯೋಗಕ್ಕೆ ನಿಲ್ಲಲು ಬರುವುದಿಲ್ಲ. ಮಾತು ಮಾತ್ರ ಹೊರಗೆ ಬರುತ್ತದೆ. ವೇದಿಕೆಗೂ ಬಳಕೆಯಾಗುತ್ತದೆ.

ಒಡೆದ ಮಡಕೆಗೆ ಒತ್ತು ಮಣ್ಣು ನಿಲ್ಲಬಲ್ಲುದೇ? ಎಂದು ಶರಣರು ಪ್ರಶ್ನಿಸುತ್ತಾರೆ. ಮಣ್ಣಿನಿಂದಾದ ಮಡಕೆ ಒಡೆದರೆ ಮತ್ತೆ ಮಣ್ಣು ನಿಲ್ಲುವುದಿಲ್ಲ. ಮಣ್ಣು ಬೆಂದು ಮಡಕೆಯಾಗಿದೆ. ಅಂತೆಯೇ ಬುದ್ಧ,ಬಸವ, ಗಾಂಧಿ ತನುಗಳ ಅನುಭಾವದಿಂದ ಬಂದ ಮಾತುಗಳು. ಆ ಮಾತುಗಳು ಅಲ್ಲಿಯೇ ಹುಟ್ಟಿದ ಮಾತುಗಳು. ತನುವಿನಲ್ಲಿ ತನ್ಮಯವಾದ ಅರಿವು ತಿಳಿದರೆ, ತಿಳಿದ ತನುಗಳು ಕೂಡಾ ಬುದ್ಧ ಬಸವ ಗಾಂಧಿಯಂತೆಯೇ! ಅದು ತನಗೆ ತಾನೇ ನಿಶ್ಚಯವಾಗುತ್ತದೆ. ಪುಣ್ಯ ಪಾಪಗಳೆಂದು ಕಟ್ಟಿಕೊಂಡ ಅಜ್ಞಾನದ ಅರಣ್ಯವನ್ನು ಭೀಮೇಶ್ವರನೆಂಬ ಅರಿವು ತನುವಿನಲ್ಲಿ ದಹಿಸಿ ತನುವಿನಲ್ಲಿ ನಿರಂಗ ಸಂಗಮವಾಗಿ ಅರಿವಿನ ತನುವಾಗುತ್ತದೆ ಎಂದು ಕೋಲ ಶಾಂತಯ್ಯ ಶರಣರು ಸಾರಿ ಹೇಳಿದ್ದಾರೆ.

□

**ಅರಿವಿನ ಪರಿಮಳ :**

- □ ಅರಿವು ತನುವನ್ನು ನುಂಗಿ ತನುವಿನ ಸಂಕೇತದಲ್ಲಿ ಅರಿವನ್ನಿರಿಸಿಕೊಂಡಂತೆ. ಅರಿವು ತನುವಿನಲ್ಲಿದೆಯೋ, ತನುವಿನಲ್ಲಿ ಅರಿವಿದೆಯೋ? ಅರಿವಿನ ಬಳಕೆಯಿಂದ ತನುವಿಗೊಂದು ಬೆಲೆ. ತನುವಿನ ಕಣ ಕಣದಲ್ಲಿಯೂ ಅರಿವಿದೆ. ಆ ಅರಿವಿನಿಂದಲೇ ತನು ಕಳೆಗೊಂಡು ನಳನಳಿಸುತ್ತಿದೆ.
- □ ಅರಿವನ್ನು ಅರಿಯುವ ತನುವನ್ನು ಬೇರೆಡೆ ಹುಡುಕುವಂತಿಲ್ಲ.
- □ ಬೇರೆ ತನುಗಳನ್ನು ಆರಾಧಿಸಿ ತನುವಿನ ಅರಿವನ್ನು ತನುವು ತುಂಬಿಕೊಳ್ಳುವಂತಿಲ್ಲ.
- □ ತುಂಬಿಕೊಂಡ ಅರಿವು ತನು ಸಂಗ್ರಹ ರೂಪದಲ್ಲಿ ಹೊರಚೆಲ್ಲುತ್ತದೆಯೇ ಹೊರತು ಆ ಅರಿವೇ ತಾನಾಗಲರಿಯದು.
- □ ಬುದ್ಧ,ಬಸವ, ಗಾಂಧಿಯ ಮಾತುಗಳು ಅವರ ಅನುಭಾವದ ಮಾತುಗಳೇ ಹೊರತು ತನಗೆ ಸುಖ ನೀಡಲರಿಯವು. ಅವರ ಅನುಭಾವದಿಂದ ಬಂದ ಮಾತು ಕೃತಿ ಒಂದೇ ಆಗಿತ್ತು.
- □ ಅವರ ಮಾತು ತನು ಅಳವಡಿಸಿಕೊಳ್ಳಬಹುದು; ಆದರೆ ತನುವಿನ ಕೃತಿ ಅವರ ಮಾತಿಗೆ ಸ್ಪಂದಿಸುವುದಿಲ್ಲ. ಪ್ರಯೋಗಕ್ಕೆ ನಿಲ್ಲಲು ಬರುವುದಿಲ್ಲ. ಮಾತು ಮಾತ್ರ ಹೊರಗೆ ಬರುತ್ತದೆ. ವೇದಿಕೆಗೂ ಬಳಕೆಯಾಗುತ್ತದೆ.
- □ ತನುವಿನಲ್ಲಿ ತನ್ಮಯವಾದ ಅರಿವು ತಿಳಿದರೆ, ತಿಳಿದ ತನುಗಳು ಕೂಡಾ ಬುದ್ಧ ಬಸವ ಗಾಂಧಿಯಂತೆಯೇ! ಅದು ತನಗೆ ತಾನೇ ನಿಶ್ಚಯವಾಗುತ್ತದೆ.

# ಅರಿವೆ ಗುರು, ಸದಾಶಿವ-ಬ್ರಹ್ಮ

**ಶಿಲೆ ಕಮ್ಮಾರನ ಹಂಗು,**
**ಮಾತು ಮನಸ್ಸಿನ ಹಂಗು,**
**ಮನಸ್ಸು ಆಕಾಶದ ಹಂಗು,**
**ಆಕಾಶ ಬಯಲ ಹಂಗು,**
**ಕುರುಹವಿಡಿದು ಇನ್ನೇತರಿಂದರಿವೆ?**
**ಅರಿವುದಕ್ಕೆ ಸ್ವಯಂಭುವಿಲ್ಲ,**
**ತ್ರಿಪುರಾಂತಕ ಲಿಂಗದಲ್ಲಿಗಾವುದಿ ಮಾಚಯ್ಯ**
**ಹೇಳಿದುದೆ ದಿಟವೆಂಬೆ.**

**-ಗಾವುದಿ ಮಾಚಯ್ಯ ಶರಣರು**

ಅರಿವೇ ಗುರು ಎನ್ನುವ ಸೂತ್ರವಿದ್ದರೂ ಅದನ್ನು ತಿಳಿಯುವ ಮಾರ್ಗ ಮಾತ್ರ ಬಹು ದೂರ ಹೋಗಿದೆ. ಅರಿವಿಗಾಗಿ ಹಿಮಾಲಯ, ಪುಣ್ಯ ಕ್ಷೇತ್ರ ದೇವಸ್ಥಾನಗಳನ್ನು ಹುಡುಕುವುದು ತಪ್ಪಿಲ್ಲ. ಅರಿವಿಗಾಗಿ ಕುರುಹಿಡಿದು ಕಾವಿ ವಸ್ತ್ರಧರಿಸುವುದೂ ತಪ್ಪಿಲ್ಲ. ಗುರು ಹೇಳಿದ ಆಚರಣೆ ಅನುಸಂಧಾನ ಮಾಡುತ್ತ ಭ್ರಮಾಧೀನನಾಗುವುದೂ ತಪ್ಪಿಲ್ಲ. ಯೋಗ, ಅನುಷ್ಠಾನಾದಿಗಳನ್ನು ಮಾಡುತ್ತ ತನುವಿನಲ್ಲಿ ಇಲ್ಲದ ಆರು ಚಕ್ರಗಳನ್ನು ಹುಡುಕುವುದೂ ತಪ್ಪಿಲ್ಲ.

ಒಬ್ಬ ಗುರು ಮೂರು ಕಾಲದಲ್ಲಿ ಲಿಂಗ ಪೂಜಿಸು ಎಂದು ಹೇಳಿದರೆ, ಮತ್ತೊಬ್ಬ ಜ್ಯೋತಿ ನೋಡುತ್ತ ಕುಳಿತುಕೋ ಎಂದು ಹೇಳುತ್ತಾನೆ. ವೇಷ ಹಾಕಿಕೊಂಡು ಹೇಳುವ ಗುರು ಟೆಕ್ನೀಷಿಯನ್ ಹೌದೊ ಅಲ್ಲವೊ ಎಂದು ತಿಳಿಯಲು ಶಿಷ್ಯನಾದವನಿಗೆ ಸಾಧ್ಯವಾಗುತ್ತಿಲ್ಲ. ಶಿಷ್ಯ ಮುಗ್ಧ, ಗುರು ಚೋರ, ವ್ಯವಹಾರಿಕ; ಶಿಷ್ಯನನ್ನು ತನ್ನನ್ನು ಮೋಸ ಮಾಡಿಕೊಳ್ಳುವ ಅಜ್ಞಾನಿ. ನಿನಗೆ ಹಸಿವಾಗದ ಮಂತ್ರ ಹೇಳುತ್ತೇನೆ ಅರ್ಧ ರೊಟ್ಟಿ ಕೊಡು ಎಂದು ಗುರು ಕೇಳಿದರೆ, ಶಿಷ್ಯ ಗುರುವಿಗೆ ಅರ್ಧರೊಟ್ಟಿ ಕೊಟ್ಟು ಹಸಿವಾಗದ ಮಂತ್ರ ಕಲಿತು ಬರುತ್ತಾನೆ. ಪಾಲನೆ ಮಾಡುವ ಪ್ರಭು, ನ್ಯಾಯ ಹೇಳುವ ನ್ಯಾಯಾಧೀಶನೂ ಇದಕ್ಕೆ ಹೊರತಾಗಿಲ್ಲ. ಈ ಎಲ್ಲಾ ಅಜ್ಞಾನವನ್ನು ನೋಡುವ ಅರಿವು ತನುವಿನಲ್ಲಿ ಮರೆಯಾಗಿದೆ. ಅರಿವಿನ ತನು ; ಹೇಳಿದಂತೆ ಕೇಳುವ ಇತರರ ಕೈಗೊಂಬೆಯಾಗಿದೆ.

ಅರಿವಿಗೂ ತನುವಿಗೂ ಅವಿನಾಭಾವ ಸಂಬಂಧ ! ಅದಕ್ಕಾಗಿಯೇ ಅರಿವೇ ಗುರು. ಆ ಗುರುದೇವನೇ ಮಹಾದೇವ, ಸದಾಶಿವ, ಸಾಕ್ಷಾತ್ ಪರಬ್ರಹ್ಮ ಎಂದು ಸೂತ್ರ ರಚನೆಯಾಯಿತು. ಆದರೂ ಅರಿವು ಹಿಡಿದು ಗುರುವಾಗಲಿಲ್ಲ, ಮಹಾದೇವ ಸದಾಶಿವನಾಗಲಿಲ್ಲ. ಪರಬ್ರಹ್ಮನೂ ಆಗಲಿಲ್ಲ. ಭ್ರಮೆಯಿಂದ ಕಮ್ಮಾರ ಮಾಡಿದ ಶಿಲೆ ಮತ್ತು ಲೋಹದ ಮೂರ್ತಿಗಳಲ್ಲಿ ದೇವರನ್ನು ಹುಡುಕುವುದು ದೇವಾಲಯಗಳನ್ನು ನಿರ್ಮಿಸುವುದು ತಪ್ಪಲಿಲ್ಲ.

ಮನಸ್ಸಿನಿಂದ ಅರಿವಿನ ಶ್ಲೋಕದ ಸೂತ್ರ ಹೇಳಿದರೆ ಹೇಳುವುದಕ್ಕಾಗಿ ಮನದ ಸಂಗ್ರಹದಲ್ಲಿ ಉಳಿಯಿತೇ ಹೊರತು ಶ್ಲೋಕ ಅರಿವಾಗಲಿಲ್ಲ.

ಮನವನ್ನು ನೋಡಲು ಹೋದರೆ ಅದಕ್ಕೆ ರೂಪವಿಲ್ಲ. ಅದು ಆಕಾಶದ ಹಂಗು. ಆ ಆಕಾಶ

ವನ್ನು ನೋಡಲು ಹೋದರೆ ಅದು ಬಯಲ ಹಂಗು. ಕುರುಹನ್ನಿಡಿದು ಅರಿವನ್ನು ತಿಳಿಯಲು ಸಾಧ್ಯವೆ?

ಎಲ್ಲವನ್ನೂ ತಿಳಿಯುವ ಅರಿವನ್ನು ಯಾವ ವಸ್ತುಗಳಿಂದ ತಿಳಿಯಲು ಸಾಧ್ಯವೆಂದು ತಿಳಿಯುವವರಿಗೆ ಹೊಳೆಯುವುದು, ಜಟಿಲವಾದುದಕ್ಕಾಗಿ ವೇಷ ಹಾಕಿದವರಿಂದ ಮೋಸ ವಂಚನೆ ನಡೆದಿದೆ.

**ತ್ರಿಪುರಾಂತಕ ಲಿಂಗದಲ್ಲಿಗಾವುದಿ ಮಾಚಯ್ಯ ಹೇಳಿದುದೆ ದಿಟವೆಂಬೆ:**

ಗಾವುದಿ ಮಾಚಯ್ಯ ಶರಣರು ಅರಿವಿಗಾಗಿ ಯಾವ ಆಚರಣೆಯ ಅವಶ್ಯಕತೆ ಇಲ್ಲವೆಂದು ಘಂಟಾಘೋಷವಾಗಿ ತಮ್ಮ ವಚನದ ಮೂಲಕ ಸಾರಿದ್ದಾರೆ. ತನು ಸ್ಥೂಲ ಸೂಕ್ಷ್ಮ ಕಾರಣವೆಂಬ ತ್ರಿಪುರ ಲಿಂಗ. ಈ ಮೂರು ಲಿಂಗಗಳಲ್ಲಿ ಒಬ್ಬನಾದ ಕಾರಣವೆಂಬ ಲಿಂಗವೇ ಗಾವುದಿ ಮಾಚಯ್ಯ . ಆತನೇ ಅರಿವೆಂಬ ಗುರುದೇವನೂ ಮಹದೇವನೂ ಸದಾಶಿವನೂ ಬ್ರಹ್ಮನೂ ಹೌದು. ಆತ ನುಡಿದು ಹೇಳುತ್ತಾನೆ. ಆ ನುಡಿಯನ್ನು ಸೂಕ್ಷ್ಮನೆಂಬ ಲಿಂಗ ಆಲಿಸಿ ತನುವಿಡಿದು ಪಾಲಿಸಿದರೆ ಸಾಕು, ಭ್ರಮೆ ಕಳೆದುಕೊಂಡು ಬುದ್ಧ, ಬಸವಣ್ಣ, ಶರಣ ದಾಸರಂತೆ ಅರಿವಿನ ಮಹಾವೀರ ತಾನೆ ಆಗುತ್ತಾನೆ.

□

**ಅರಿವಿನ ಪರಿಮಳ :**

- ಶಿಷ್ಯ ಮುಗ್ಧ, ಗುರು ಚೋರ, ವ್ಯವಹಾರಿಕ ; ಶಿಷ್ಯನನ್ನು ತನ್ನನ್ನು ಮೋಸ ಮಾಡಿಕೊಳ್ಳುವ ಅಜ್ಞಾನಿ.
- ನಿನಗೆ ಹಸಿವಾಗದ ಮಂತ್ರ ಹೇಳುತ್ತೇನೆ ಅರ್ಧ ರೊಟ್ಟಿ ಕೊಡು ಎಂದು ಗುರು ಕೇಳಿದರೆ, ಶಿಷ್ಯ ಗುರುವಿಗೆ ಅರ್ಧರೊಟ್ಟಿ ಕೊಟ್ಟು ಹಸಿವಾಗದ ಮಂತ್ರ ಕಲಿತು ಬರುತ್ತಾನೆ.
- ಭ್ರಮೆಯಿಂದ ಕಮ್ಮಾರ ಮಾಡಿದ ಶಿಲೆ ಮತ್ತು ಲೋಹದ ಮೂರ್ತಿಗಳಲ್ಲಿ ದೇವರನ್ನು ಹುಡುಕುವುದು ದೇವಾಲಯಗಳನ್ನು ನಿರ್ಮಿಸುವುದು ತಪ್ಪಲಿಲ್ಲ.

# ಅರಿವು ಒಲಿಯುವದು ದುರ್ಲಭ ಅರಿವಿಗೆ ಒಲಿಯುವುದು ಸುಲಭ

ನೀನೊಲಿದು ಕೂರ್ತವರು ನಿಮಗೊಲಿದು ಕೂರ್ತವರು
ನಿಮ್ಮ ಪರಿಯೇ ಅವರು, ನಿಮ್ಮ ರೂಹೇ ಅವರು.
ಅವರನೇನ ಹೇಳುವೆ.
ಆಳಾರು ಅರಸಾರು ಎಂದರಿಯಬಾರದು
ನಿಮ್ಮ ರೂಹೆ ಅವರು
ಮಹಾಲಿಂಗ ಗಜೇಶ್ವರನೊಲಿದು ಪೂಜಿಸಿದವರು
ಸಾಲೋಕ್ಯ ಸಾಮಿಪ್ಯ ಸಾರೋಪ್ಯ ಸಾಯುಜ್ಯ ಪದವಿಗಳ ಪಡೆದವರು
ಎನಗೆ ನಿಮ್ಮ ಶರಣರೇ ನೀವೆಂದು ಅರಿದಿರ್ಪುದೆ ಸಾಕು

– ಗಜೇಶ ಮಸಣಯ್ಯ ಶರಣರು

**ನೀನೊಲಿದು ಕೂರ್ತವರು ನಿಮಗೊಲಿದು ಕೂರ್ತವರು:**

ಅವನೊಲಿಯುವುದು ದುರ್ಲಭ. ಅವನಿಗೊಲಿಯುವುದು ಸುಲಭ. ಅವನು ಕೋಟಿಗೊಬ್ಬರ್ರಿಗೆ ಮಾತ್ರ ಒಲಿಯುತ್ತಾನೆ. ಲಕ್ಷದ ತೊಂಬತ್ತಾರು ಸಾವಿರ ಜನ ಅವನಿಗಾಗಿ ಸ್ತುತಿಸಿದರು. ಹಗಲಿರುಳು ಅವನಿಗಾಗಿ ಕಳೆದರು. ಅವನಿಗಾಗಿ ಮಾಡಿದರು. ಅವನಿಗಾಗಿ ಉಸಿರಾಡಿದರು. ಆದರೆ ಅವನೊಲಿದದ್ದು ಮಾತ್ರ ಏಳುನೂರಾ ಎಪ್ಪತ್ತು ಶರಣರಿಗೆ !

ಅವನೊಲಿದದ್ದು ಕಡಿಮೆ; ಅವನನ್ನೊಲಿಸಿಕೊಂಡದ್ದೆ ಅಧಿಕ. ''ನೀನೊಲಿಯಿತ್ತೇ ಪುಣ್ಯ, ನೀನೊಲ್ಲದುದೇ ಪಾಪ. ಸಕಲ ಜಗದೊಳಗೆ ಅನುಶ್ರುತನಾಗಿಪ್ಪೆಯಯ್ಯಾ. ನೀನೊಲಿದವನೆ ನಿಮ್ಮನರಿವನು. ನೀನೊಲಿದವನೆ ಧನ್ಯ,ಜಗಕ್ಕೆ ಪಾವನ, ಕೂಡಲ ಸಂಗಮದೇವಾ, '' ಅರಿವು ತನುವಿನ ಸಂಪತ್ತು. ತನುವಿನ ಸಂಪತ್ತು ತನುವಿಗೆ ಒಲಿದದ್ದೇ ಪುಣ್ಯ. ತನುವಿನ ಸಂಪತ್ತು ತನುವಿಗೆ ಬಳಕೆಯಾಗದೆ ತನುವನ್ನು ಒಲ್ಲದುದೇ ಪಾಪ ! ಸಕಲ ಜಗದೊಳಗೆ ಅರಿವು ದೇವರೆಂದು, ಗುರುವೆಂದು ಪ್ರಸಿದ್ಧಿಯಾಗಿದ್ದಾನೆ. ಆ ದೇವರೊಲಿದವನೆ ಆ ದೇವರನ್ನರಿವನು. ಅವನೊಲಿದವನೇ ಧನ್ಯ. ಜಗಕೆ ಪಾವನ ಎಂದು ಬಸವಣ್ಣ ಹಾಡಿದ್ದಾನೆ.

ಗಜೇಶ ಮಸಣಯ್ಯ ಶರಣರು ಕೂಡಾ ಅವನೊಲಿದು ಕುಳಿತವರು ಅವನಿಗೊಲಿದು ಕುಳಿತವರು ಅವನ ಪರಿಯೇ ! ಅರಿವು ನಿರೂಪ; ನಿರೂಪದಿಂದಾದ ರೂಪು ನಿಮ್ಮ ರೂಪು, ಬಯಲು; ಆ ಬಯಲು ತಿಳಿದು ಬಯಲಾದ ಶರಣರೂ ಬಯಲೇ, ನಿರೂಪ ! ಅವರಲ್ಲಿ ಆಳು ಯಾರು? ಅರಸು ಯಾರು ಎಂದು ಹೇಳಲು ಬರುವುದಿಲ್ಲ. ಮಹಾಲಿಂಗ ಗಜೇಶ್ವರನೆಂಬ ಬಯಲನೊಲಿದು ಪೂಜಿಸಿದವರು, ಬಯಲೇ ಅವರಿಗೊಲಿದು ಕುಳಿತವರು. ಇವರಿಬ್ಬರೂ ಚತುರ್ವಿಧ ಪದವಿಗಳನ್ನು ಪಡೆದವರು.

**ಸಾಲೋಕ್ಯ ಸಾಮೀಪ್ಯ ಸಾರೋಪ್ಯ ಸಾಯುಜ್ಯ ಪದವಿಗಳ ಪಡೆದವರು ಎನಗೆ ನಿಮ್ಮ**

**ಶರಣರೇ ನೀವೆಂದು ಅರಿದಿರ್ಪುದೇ ಸಾಕು :**

ಸಾಲೋಕ್ಯ : ಇಷ್ಟದೇವತಾಲೋಕದಲ್ಲಿ ವಾಸಿಸುವುದು.

ಸಾಮಿಪ್ಯ : ಇಷ್ಟದೇವತೆಯ ಸಾಮಿಪ್ಯ ಸೌಖ್ಯವನ್ನು ಅನುಭವಿಸುವುದು.

ಸಾರೋಪ್ಯ :ಇಷ್ಟದೇವತೆಯ ಸಮರೂಪ ಸೌಖ್ಯವನ್ನು ಅನುಭವಿಸುವುದು.

ಸಾಯುಜ್ಯ : ಇಷ್ಟದೇವತೆಯಲ್ಲಿ ಬೆರೆಯುವುದು.

ತನುವಿನಲ್ಲಿ ತನ್ಮಯವಾದ ಅರಿವೇ ಇಷ್ಟದೇವತೆ. ಆ ತನುವೇ ದೇವಲೋಕ. ಅದರ ಸಮೀಪವಾಸಿಸಿ ಆ ಅರಿವಿನ ಸುಖವನ್ನು ಅನುಭವಿಸುವುದು. ಸಮರಸ, ಸಮರೂಪ ಸುಖವನ್ನು ಅನುಭವಿಸಿ ಆ ಅರಿವಿನಲ್ಲಿ ಬೆರೆತು ಅರಿವಾಗುವುದು. ಹೀಗೆ ಸೂತ್ರ ಹಿಡಿದು ಅರಿವಿಗೆ ಶರಣಾಗಿ ಶರಣರಾದವರನ್ನು ಅರಿತ ಸುಖ ಸಾಕೆನಗೆ ಎಂದು ಮಸಣಯ್ಯ ಶರಣರು ಸ್ತುತಿಸಿದ್ದಾರೆ.

□

**ಅರಿವಿನ ಪರಿಮಳ :**

□ ಅರಿವು ತನುವಿನ ಸಂಪತ್ತು. ತನುವಿನ ಸಂಪತ್ತು ತನುವಿಗೆ ಒಲಿದದ್ದೇ ಪುಣ್ಯ. ತನುವಿನ ಸಂಪತ್ತು ತನುವಿಗೆ ಬಳಕೆಯಾಗದೆ ತನುವನ್ನು ಒಲ್ಲದುದೇ ಪಾಪ !

# ಗುಪ್ತ ಮಂಚಣ್ಣ ಶರಣರ ಜಲದ ಗುಟ್ಟು

**ಉದಕ ಒಂದಾದಡೆ ಕೂಟದ ಗುಣದಿಂದ ಜಾತಿ ಉತ್ತರವಾಯಿತ್ತು**
**ಹಾಲು ಹುಳಿ ಕಹಿ ಖಾರ ಇವು ಮೊದಲಾಗಿರೆ**
**ಅವರವರಲ್ಲಿ ಅವ ಬೆರೆಸಿದಡೆ**
**ಅವರವರ ಭಾವಕ್ಕೆ ತಕ್ಕಂತೆ ಇಪ್ಪ ಜಲಭೇದದ ವಸ್ತು ನಿರ್ದೇಶ**
**ಆನೆಯ ಮಾನದಲ್ಲಿ ಇರಿಸಬಹುದೇ?**
**ಕಿರಿದು ಘನದಲ್ಲಿ ಅಡಗುವುದಲ್ಲದೆ**
**ಘನ ಕಿರಿದಲ್ಲಿ ಅಡಗುವುದೆ?**
**ಅಮೃತದ ಕೆಲದಲ್ಲಿ ಅಂಬಲಿಯುಂಟೆ?**
**ನಾರಾಯಣ ಪ್ರಿಯ ರಾಮನಾಥ.**

**– ಗುಪ್ತ ಮಂಚಣ್ಣ ಶರಣರು**

**ಉದಕ ಒಂದಾದಡೆ ಕೂಟದ ಗುಣದಿಂದ ಜಾತಿ ಉತ್ತರವಾಯಿತ್ತು :**

ಜಲಕ್ಕೆ ಜಾತಿಯಿಲ್ಲ, ರುಚಿ ಬಣ್ಣ ವಾಸನೆಯಿಲ್ಲ, ತನ್ನ ಮಟ್ಟ ತಾನು ಕಾಯ್ದುಕೊಳ್ಳುತ್ತದೆ. ತಗ್ಗು ಉಬ್ಬುಗಳನ್ನು ತನ್ನ ಗರ್ಭದಲ್ಲಿ ತುಂಬಿಕೊಂಡು ನೋಡಲು ಸಮನಾಗಿ ಕಾಣುತ್ತದೆ. ಇದು ಜಲದ ಗುಣ. ಜಲ ಬಿಂದು ತಂದೆ ಮುಖೇನ ತಾಯಿ ಗರ್ಭಸೇರಿ ( ಕೂಟದಿಂದ) ಪಾಕವಾಗಿ, ಪಿಂಡವಾಗಿ, ಎಲುಬು. ತೊಗಲು ರಕ್ತ ಮಾಂಸ ಮಜ್ಜೆ ಮೇಧಸ್ಸು ಆಗಿ ತನುವಿನ ಆಕಾರ ತಳೆದು ಹೊರಬಂದು ಜಲ ಜಾತಿ ಯಾಯಿತು. ಅಂದರೆ ಜಲವೇ ಹೆಣ್ಣೆಂದು ಗಂಡೆಂದು ಎರಡು ಜಾತಿಯಾ ಯಿತು. ನಂತರ ಜಾತಿ ಮತ ಪಂಥ ಧರ್ಮ ಪಂಗಡ ರೂಪಗಳಲ್ಲಿ ಕರೆಯಲ್ಪಟ್ಟಿತು.

**ಹಾಲು ಹುಳಿ, ಕಹಿ ಖಾರ ಇವು ಮೊದಲಾಗಿರೆ ಅವರವರಲ್ಲಿ ಅವ ಬೆರೆಸಿದಡೆ:**

ಜಲ ಕುಡಿದ ಹಸುವಿನ ಹಾಲು ಜಲದಿಂದಲೆ. ಹುಣಸೆ ಸಸಿಗೆ ಜಲ ಹರಿಸಿ ಹುಣಸೆ ಹುಳಿ ಯಾಯಿತು. ಬೇವಿನ ಸಸಿಗೂ ಜಲ ಹರಿಸಿ ಬೇವು ಕಹಿಯಾಯಿತು. ಮೆಣಸಿನ ಸಸಿಗೆ ಜಲ ಹರಿಸಿ ಮೆಣಸಿನಕಾಯಿ ಖಾರವಾಯಿತು. ಜಲದಿಂದಲೇ ಹಾಲು ಹುಳಿ ಕಹಿ ಖಾರಗಳ ಜನನ. ಜಲದಿಂದಲೇ ತನು ಜನನ ! ಒಂದು ತನುವಿಗೆ ಖಾರ ಹಿತ, ಮತ್ತೊಂದು ತನುವಿಗೆ ಹುಳಿ ಹಿತ, ಮಗದೊಂದು ತನುವಿಗೆ ಹಾಲು, ಒಗರು, ಹಿತವಾಗಿರುತ್ತದೆ.

**ಅವರವರ ಭಾವಕ್ಕೆ ತಕ್ಕಂತೆ ಇಪ್ಪ ಜಲ ಭೇದದ ವಸ್ತು ನಿರ್ದೇಶ ಆನೆಯ ಮಾನದಲ್ಲಿ ಇರಿಸಬಹುದೆ?:**

ತನುವಿನ ಭಾವದಿಂದ ಜಾತಿಯಾಯಿತು. ಅಂತೆಯೇ ತನುವಿನ ಭಾವದಿಂದ ಮಧುರ ಹುಳಿ ಕಹಿ ಖಾರವಾಯಿತು. ತನುವೂ ಜಲವೇ, ಸೇವಿಸುವ ಪದಾರ್ಥವೂ ಜಲವೆ. ಖಾರ ಹುಳಿ ಕಹಿ ಹೆಚ್ಚಾದರೆ ಸ್ವೀಕರಿಸಿದ ತನುವಿನಲ್ಲಿ ಸಂಕಟ ಉಂಟಾಗುತ್ತದೆ. ತನವಿಗುಂಟಾದ ಸಂಕಟದ ಸೇಡನ್ನು ಪದಾರ್ಥ ನೀಡಿದ ತನುವಿನ ಮೇಲೆ ತೀರಿಸಿಕೊಳ್ಳುತ್ತದೆ. ಪದಾರ್ಥದ ಜನನ ತನುವಿನಿಂದಲ್ಲ ಎಂದು ತನು ತಿಳಿದುಕೊಳ್ಳುವುದೇ ಇಲ್ಲ. ಪದಾರ್ಥ ಸ್ವೀಕರಿಸಿದ ತನುವಿನ ಭಾವ

ದುರ್ಭಾವವಾಯಿತು. ಪದಾರ್ಥವೂ ಜಲವೇ ತನುವೂ ಜಲವೇ ಆದರೂ ಈ ಜಲದಿಂದಾದ ಭೇದವನ್ನು ತನು ತಿಳಿಯಲಿಲ್ಲ. ಪದಾರ್ಥ ಚಿಕ್ಕದು ತನು ದೊಡ್ಡದು. ತನುವಿಗೆ ಅರಿವಿದೆ, ಮಾನ ಸನ್ಮಾನಗಳಿವೆ. ಒಂದೆರಡು ಗ್ರಾಮ್ ಖಾರಕ್ಕೆ ತನು ಆರ್ಭಟಿಸಬಹುದೆ? ಖಾರ ನೀಡಿದ ತನುವಿನ ಮೇಲೆ ಸೇಡು ತೀರಿಸಿಕೊಳ್ಳ ಬಹುದೆ? ತನುವಿಗೆ ಜಲಭೇದದ ಗುಟ್ಟು ತಿಳಿಯಲೇ ಇಲ್ಲ.

**ಕಿರಿದು ಘನದಲ್ಲಿ ಅಡಗುವುದಲ್ಲದೆ ಘನ ಕಿರಿದಲ್ಲಿ ಅಡಗುವುದೇ?:**

ಕಿರಿಯ ಖಾರವೂ ಜಲವೇ, ಹಿರಿಯ ತನುವೂ ಜಲವೇ. ಜಲಮಯವಾದ ತನುವಿನಲ್ಲಿ ಬಿಂದು ರೂಪದ ಖಾರ ಬೆರೆತು ಖಾರದ ಗುಣ ಕಳೆದುಕೊಂಡು ಜಲಮಯವಾಗುತ್ತದೆ.

ಆಗ ಸಂಕಟ ಅನುಭವಿಸಿದ ತನು ಸಮಾಧಾನಿಯಾಗುತ್ತದೆ. ಮತ್ತೆ ಖಾರ ಸ್ವೀಕರಿಸಿದರೂ ಖಾರ ಎನ್ನಿಸದೆ ರುಚಿಯಾಗಿ ಮಾರ್ಪಡುತ್ತದೆ. ಜಲದಲ್ಲಿ ಜಲ ಬೆರೆತು ಜಲವಾಗಲು ಸಮಯ ಬೇಕಷ್ಟೇ. ಖಾರ ತನುವಿನಲ್ಲಿ ಅಡಗುವುದಲ್ಲದೆ ತನುವು ಖಾರದಲ್ಲಿ ಅಡಗುವುದಿಲ್ಲವೆಂದು ಗುಪ್ತ ಮಂಚಣ್ಣ ಶರಣರು ಜಲದ ಗುಟ್ಟು ರಟ್ಟು ಮಾಡಿದ್ದಾರೆ.

**ಅಮೃತದ ಕೆಲದಲ್ಲಿ ಅಂಬಲಿಯುಂಟೆ? ನಾರಾಯಣ ಪ್ರಿಯ ರಾಮನಾಥಾ:**

ಉದಕದೊಳಗೆ ಬಯಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತ್ತು. ಸಸಿಯೊಳಗಣ ರಸದ ರುಚಿಯಂತಿದ್ದಿತ್ತು ಎನ್ನುವಂತೆ ತನುವಿನೊಳಗೆ ಎಲ್ಲವನ್ನು ತಿಳಿಯುವ ಅರಿವಿನ ಅಮೃತವೇ ಇದೆ. ಸೇವಿಸುವ ಪದಾರ್ಥವೂ ಜಲವೇ, ತನುವೂ ಜಲವೇ. ಅದರಂತೆಯೇ ನಾರಾಯಣನೂ ತಾನೇ.ಆತನಿಗೆ ಪ್ರಿಯನಾದ ರಾಮನಾಥನೂ ತಾನೇ! ಅರಿವೇ ನಾರಾಯಣ ಅದನ್ನು ತಿಳಿಯುವ ಮನವೇ ರಾಮನಾಥ !!

□

**ಅರಿವಿನ ಪರಿಮಳ :**

- ಜಲ ಬಿಂದು ತಂದೆ ಮುಖೇನ ತಾಯಿ ಗರ್ಭಸೇರಿ ( ಕೂಟದಿಂದ) ಪಾಕವಾಗಿ, ಪಿಂಡವಾಗಿ, ಎಲುಬು, ತೊಗಲು ರಕ್ತ ಮಾಂಸ ಮಜ್ಜೆ ಮೇಧಸ್ಸು ಆಗಿ ತನುವಿನ ಆಕಾರ ತಳೆದು ಹೊರಬಂದು ಜಲ ಜಾತಿ ಯಾಯಿತು. ಅಂದರೆ ಜಲವೇ ಹೆಣ್ಣೆಂದು ಗಂಡೆಂದು ಎರಡು ಜಾತಿಯಾಯಿತು.
- ಕಿರಿಯ ಖಾರವೂ ಜಲವೇ, ಹಿರಿಯ ತನುವೂ ಜಲವೇ. ಜಲಮಯವಾದ ತನುವಿನಲ್ಲಿ ಬಿಂದು ರೂಪದ ಖಾರ ಬೆರೆತು ಖಾರದ ಗುಣ ಕಳೆದುಕೊಂಡು ಜಲಮಯವಾಗುತ್ತದೆ.

# ದುರುಳ ಮನ ಜ್ಞಾನಿಯಾಗುವ ಶರಣರ ಸೂತ್ರ

ಹೊತ್ತಿಗೊಂದು ಪರಿಯಹ ಮನವ ಕಂಡು
ದಿನಕ್ಕೊಂದು ಪರಿಯಹ ತನುವ ಕಂಡು
ಅಂದಂದಿಂಗೆ ಭಯ ದೋರುತ್ತಿದೆ
ಒಂದು ನಿಮಿಷಕ್ಕನಂತವನೆ ನೆನೆವ ಮನವ ಕಂಡು
ಅಂದಂದಿಂಗೆ ಭಯವಾಗುತ್ತಿದೆ
ಈ ಮನ ನಿಮ್ಮ ನೆನೆಯಲೀಯದು
ಮನ ಹಗೆಯಾದುದಯ್ಯಾ
ಸದ್ಗುರುವೆ ಪುರದ ಮಲ್ಲಯ್ಯಾ !

-ಗುರುಪುರದ ಮಲ್ಲಯ್ಯ ಶರಣರು

ತನುವಿನಲ್ಲಿ ಭಯವೂ ಇದೆ, ನಿರ್ಭಯವೂ ಇದೆ. ತನುವಿಗೆ ಯಾರೂ ಶತೃಗಳಿಲ್ಲ, ತನ್ನ ತನುವಿಗಾವರಿಸಿದ ಮನವೇ ತನಗೆ ಶತೃ. ತನುವಿನ ಕಣಕಣದಲ್ಲಿ ಬೆರೆತ ಅರಿವೇ ತನುವಿಗೆ ಶಾಶ್ವತ ಮಿತ್ರ !

ಗುರುಪುರದ ಮಲ್ಲಯ್ಯ ಶರಣರು ಕ್ಷಣಕ್ಕೊಮ್ಮೆ ವಿಕೃತಗೊಳ್ಳುವ ಮನವನ್ನು ಮನದ ತನುವನ್ನು ಕಂಡು ಭಯ ತೋರುತ್ತಲಿದೆ ಎನ್ನುತ್ತಾರೆ.

ಒಂದು ನಿಮಿಷಕ್ಕೆ ಅನಂತವನ್ನು ನೆನೆದು ಅದೆಲ್ಲವನ್ನು ತನುವಿನ ಸಹಾಯದಿಂದ ಪಡೆದು ಭೋಗಿಸಬೇಕೆಂಬ ದುರುಳ ಮನವನ್ನು ಕಂಡು ಭಯವಾಗುತ್ತಿದೆ.

ರಾಜನ ತನುವಿನಲ್ಲಿ ಆವರಿಸಿದ ಮನ ಕಿರೀಟದಾಸೆಗಾಗಿ ನೆರೆಯ ರಾಜನನ್ನು ಸೈನಿಕರನ್ನು ಕೊಂದು, ಸಾವು ನೋವುಗಳೊಂದಿಗೆ ಸುಖಿಸುವುದನ್ನು ಕಂಡು ಭಯವಾಗುತ್ತಿದೆ. ಕಿರೀಟ ನೋಡಿದ ದುರುಳ ಮನ ಲೋಹ ನೋಡಲಿಲ್ಲ. ನೆರೆಯ ರಾಜ, ಸೈನಿಕರ ಸಾವು ನೋವುಗಳಿಗಿಂತಲೂ ಕಿರೀಟಕ್ಕೆ ಮೆತ್ತಿದ ಬಣ್ಣ ಅಧಿಕವೇ ಎಂದು ಮನ ತಿಳಿಯಲಿಲ್ಲ. ರಾಜನ ಮನ ರಾಜನ ತನುವಿಗೆ ಮುಳುವಾದುದು ರಾಜನಿಗೆ ತಿಳಿಯಲಿಲ್ಲ.

ಅಧಿಕಾರಿಯ ತನುವಿನ ಮನ ಕಾಯ್ದೆ ಕನೂನು ಕರೆನ್ಸಿಯೊಂದಿಗೆ ಸುಖಿಸಿ ಅನ್ಯ ತನುಗಳನ್ನು ಘಾಸಿಗೊಳಿಸಿ ತನ್ನ ತನುವನ್ನು ವಿಕೃತಗೊಳಿಸಿತೆ ಹೊರತು ತಾನು ಸಮಾಧಾನಿಯಾಗಲಿಲ್ಲ ; ಅನ್ಯ ತನುಗಳ ಸುಖಕ್ಕೆ ನೆರವಾಗಲಿಲ್ಲ. ತನುವಿನ ಮನ ತನ್ನ ತನುವಿಗೆ ವೈರಿಯಾದುದನು ಕಂಡು ಕ್ಷಣ ಕ್ಷಣಕೂ ಭಯವಾಗುತ್ತದೆ.

ರಾಜಕಾರಣಿಯ ತನುವಿನ ಮನ ಅನ್ಯತನುಗಳ ದ್ರವ್ಯ , ಭೂಮಿ ಕರೆನ್ಸಿ ದೋಚಿ ವಿಷಯ ದೊಂದಿಗೆ ಸುಖಿಸಿತೆ ಹೊರತು ಅನ್ಯತನುಗಳನು ಸಂತುಷ್ಟ ಪಡಿಸಲಿಲ್ಲ. ತನ್ನ ತನುವಿನ ಮನ ತನಗೆ ಶತ್ರುವಾದುದನು ಮುತ್ಸದ್ಧಿ ವೇಷದ ವಿಷಯದ ಮನ ತಿಳಿಯಲೇ ಇಲ್ಲ.

ಒಂದು ನಿಮಿಷಕ್ಕನಂತವನೇ ನೆನೆದು ತನುವನ್ನೇ ಹಿಂಸಿಸುವ ಮನವ ಕಂಡು ಭಯವಾಗುತ್ತದೆ. ಅಂದಂದಿಂಗೆ ಭಯವಾಗುತ್ತಿದೆ.

ಆಭರಣ ನೋಡಿ ತನುವಿನೊಂದಿಗೆ ದೋಚಿ ಕಳ್ಳ ಎಂದು ಬಿರುದು ಪಡೆಯುವ ಮನಕ್ಕೆ ಆಭರಣದಲ್ಲಿಯ ಲೋಹ ನೋಡಿ ಸುಮ್ಮನಾಗುವ ಅರಿವಾಗಲಿಲ್ಲ. ಕರೆನ್ಸಿನೋಡಿ ತನುವಿನೊಂದಿಗೆ ಕದಿಯುವ ಮನಕ್ಕೆ ಕರೆನ್ಸಿಯೊಳಗಣ ಕಾಗದ ನೋಡಿ ಸುಮ್ಮನಾಗುವ ಅರಿವಾಗಲಿಲ್ಲ.

ರೂಪ ನೋಡಿ ತನುವಿನೊಂದಿಗೆ ಭೋಗಕ್ಕಿಳಿಯುವ ದುರುಳ ಮನಕ್ಕೆ ಆ ರೂಪದಲ್ಲಿಯ ನಿರೂಪ ಅರ್ಥವಾಗಲಿಲ್ಲ. ತನ್ನಂತೇ ಇರುವ ತನುವೆಂದೂ ಅರಿವಾಗಲಿಲ್ಲ. ತನ್ನ ತನುವಿನ ಮನ ತನಗೇ ಹಗೆಯಾದುದ ಕಂಡು ಭಯವಾಗುತ್ತಿದೆ.

**ಈ ಮನ ನಿಮ್ಮ ನೆನೆಯಲೀಯದು, ಮನ ಹಗೆಯಾದುದಯ್ಯಾ. ಸದ್ಗುರುವೆ ಪುರದ ಮಲ್ಲಯ್ಯ :**

ತನುವೆಂಬುದೊಂದು ಅರಿವಿನ ಪುರ. ಅದರ ಒಡೆಯ ಮಲ್ಲಯ್ಯನೆಂಬ ಅರಿವು. ತನುವನ್ನು ಆವರಿಸಿಕೊಂಡ ಮನ ರಕ್ಕಸ. ವಸ್ತುವನ್ನು ನೋಡಿ ಪಡೆದು ಸುಖಿಸಲು ತನುವಿಗೆ ಆದೇಶ ನೀಡುತ್ತಾನೆ. ಸರಳವಾಗಿ ದೊರೆತರೆ ಒಂದು ಕ್ಷಣ ಸುಖಿಸಿ ಮತ್ತೊಂದನ್ನು ಬಯಸುತ್ತಾನೆ. ಸರಳ ವಾಗಿ ದೊರೆಯದಿದ್ದರೆ ಕಳವು, ದರೋಡೆ, ಕೊಲೆ, ಹಾದರಕ್ಕೆಳಸಿ ವಿಕೃತವಾಗಿ ಸುಖಿಸುತ್ತಾನೆ. ತನುವಿ ನಿಂದ ಸುಖಿಸಿದ ರಕ್ಕಸ ಮನಕ್ಕೆ ಶಿಕ್ಷೆಯಿಲ್ಲ. ನಿರಪರಾಧಿ ಅರಿವಿನ ತನುವಿಗೆ ಶಿಕ್ಷೆ! ತನುವಿನ ಮನದಿಂದಲೇ ತನುವಿಗೆ ಶಿಕ್ಷೆ! ತನುವಿನ ಅರಿವು ಬಳಕೆಯಾಗದ್ದಕ್ಕಾಗಿ ತನುವಿಗೆ ಶಿಕ್ಷೆ!

ತನುವಿನ ಅರಿವು ಬಳಕೆ ಯಾದರೆ ಆಭರಣವೆನ್ನುವುದು ಒಂದು ಹಳದಿ ಲೋಹದ ತುಂಡು, ಅದು ಜಡ. ಲೋಹದ ತುಂಡಿಗಾಗಿ ರಾಜ ಯುದ್ಧ ಮಾಡುವುದಿಲ್ಲ. ಕಳ್ಳ ಕಳುವು ಮಾಡುವುದಿಲ್ಲ, ರಾಜಕಾರಣಿ ಅಧಿಕಾರಿ ಚಿನ್ನ ಸಂಗ್ರಹ ಮಾಡುವುದಿಲ್ಲ. ಕೊಲೆ ಸುಲಿಗೆ ಅತ್ಯಾಚಾರಗಳು ನಡೆಯುವು ದಿಲ್ಲ. ಲೋಹ ನೋಡಿದ ಕಣ್ಣು ಲೋಹ ಬೇಡುವುದಿಲ್ಲ. ತನುವಿಗೆ ಯಾತನೆಯನ್ನುಂಟು ಮಾಡು ವುದಿಲ್ಲ.

ವಸ್ತು ನೋಡುವ ಮುನ್ನ ತನುವನ್ನಾವರಿಸಿದ ಮನ ತನುವಿನ ಅರಿವು ನೋಡಿದರೆ ಆ ಅರಿವೇ ತಾನಾಗುತ್ತಾನೆ. ಸದ್ಗುರು ಪುರದ ಮಲ್ಲಯ್ಯನಾಗುತ್ತಾನೆ. ಜ್ಞಾನದ ವಿಜ್ಞಾನಿಯಾಗುತ್ತಾನೆ.

□

**ಅರಿವಿನ ಪರಿಮಳ :**

- ಆಭರಣ ನೋಡಿ ತನುವಿನೊಂದಿಗೆ ದೋಚಿ ಕಳ್ಳ ಎಂದು ಬಿರುದು ಪಡೆಯುವ ಮನಕ್ಕೆ ಆಭರಣದಲ್ಲಿಯ ಲೋಹ ನೋಡಿ ಸುಮ್ಮನಾಗುವ ಅರಿವಾಗಲಿಲ್ಲ, ಕರೆನ್ಸಿನೋಡಿ ತನುವಿನೊಂದಿಗೆ ಕದಿಯುವ ಮನಕ್ಕೆ ಕರೆನ್ಸಿಯೊಳಗಣ ಕಾಗದ ನೋಡಿ ಸುಮ್ಮನಾಗುವ ಅರಿವಾಗಲಿಲ್ಲ.
- ತನುವಿನ ಅರಿವು ಬಳಕೆ ಯಾದರೆ ಆಭರಣವೆನ್ನುವುದು ಒಂದು ಹಳದಿ ಲೋಹದ ತುಂಡು, ಅದು ಜಡ. ಲೋಹದ ತುಂಡಿಗಾಗಿ ರಾಜ ಯುದ್ಧ ಮಾಡುವುದಿಲ್ಲ. ಕಳ್ಳ ಕಳುವು ಮಾಡುವುದಿಲ್ಲ, ರಾಜಕಾರಣಿ ಅಧಿಕಾರಿ ಚಿನ್ನ ಸಂಗ್ರಹ ಮಾಡುವುದಿಲ್ಲ. ಕೊಲೆ ಸುಲಿಗೆ ಅತ್ಯಾಚಾರಗಳು ನಡೆಯುವುದಿಲ್ಲ. ಲೋಹ ನೋಡಿದ ಕಣ್ಣು ಲೋಹ ಬೇಡುವುದಿಲ್ಲ. ತನುವಿಗೆ ಯಾತನೆಯನ್ನುಂಟು ಮಾಡುವುದಿಲ್ಲ.

# ಅರಿವಿದ್ದೂ ಅರಿವಾಗದ ಮುಠ್ಠಾಳ

**ನಾ ನಿನ್ನ ಕೇಳಿಹೆನೆಂದಡೆ**
**ನಾನಂಗಿ ನೀ ನಿರಂಗಿ**
**ನಾ ನಿನಗೆ ಹೇಳಿಹೆನೆಂದಡೆ**
**ನಾ ಸಂಗಿ ನೀ ನಿಸ್ಸಂಗಿ**
**ನಿನ್ನಂಗ ಎನ್ನಂಗದಲ್ಲಿ ಪ್ರೇರಿಸಿ**
**ನಿನ್ನರಿವು ಎನ್ನ ಆತ್ಮದಲ್ಲಿ ನಿಂದು ಅರಿವಹನ್ನಕ್ಕ**
**ನನಗೂ ನಿನಗೂ ತತ್ತು ಗೊತ್ತು**
**ಗೋರಕ್ಷ ಪಾಲಕ ಮಹಾಪ್ರಭು**
**ಸಿದ್ಧ ಸೋಮನಾಥ ಲಿಂಗವು ಸರಿಹುದುಗು**

**–ಗೋರಕ್ಷಕ ಶರಣ**

ಶ್ರೀಶೈಲದಲ್ಲಿ ಅಲ್ಲಮಪ್ರಭುಗಳು ಗೋರಕ್ಷಕರನ್ನು ಸಂದರ್ಶಿಸಿದ ನಂತರ ಅವರ ವಜ್ರಕಾಯ ಮೃದುವಾಗುತ್ತದೆ. ಅವರ ಮನ ಘನಮನವಾಗುತ್ತದೆ. ಗೋರಕ್ಷಕ ಶರಣರು ತನುವಿನ ಜ್ಞಾನಕ್ಕೆ ಶರಣು ಹೋಗಿ ಶರಣರಾಗುತ್ತಾರೆ. ಆ ಬಗೆಯನ್ನು ತಮ್ಮ ವಚನದ ಮೂಲಕ ವಿವರಿಸಿದ್ದಾರೆ.

**ನಾ ನಿನ್ನ ಕೇಳಿಹೆನೆಂದೊಡೆ ನಾನಂಗಿ ನೀ ನಿರಂಗಿ:**

ತನುವಿನಲ್ಲಿ ಜ್ಞಾನವಿದೆ. ಮನ ತನುವನ್ನು ಆವರಿಸಿದೆ. ತನು ಜ್ಞಾನದ ತೊತ್ತು ; ಆವರಿಸಿದ ಮನ ಜ್ಞಾನದೊಂದಿಗೆ ಬೆರೆತರೆ ಮಾತ್ರ ತನು ಜ್ಞಾನಿ ಇಲ್ಲದಿದ್ದರೆ ರಕ್ಕಸ !

**ನಾ ನಿನ್ನ ಕೇಳಿಹೆನೆಂದೊಡೆ ನಾ ಸಂಗಿ ನೀ ನಿರಂಗಿ**

ಆಭರಣವನ್ನು ಕಣ್ಣಿನಿಂದ ನೋಡಿ ತನುವಿನ ಮೇಲೆ ಧರಿಸಿ ಆನಂದಪಡುವ ಬಯಕೆ ನನಗಾದರೆ , ನಿನಗೆ ಆ ಬಯಕೆಯೇ ಇಲ್ಲ. ನಿನ್ನಿಂದ ನೋಡಲ್ಪಡುವ ನನಗೆ ಅಂಗವಿದೆ; ನಿನಗೆ ಅಂಗ ವಿಲ್ಲ!

ರೂಪ ನೋಡಿ ಆ ರೂಪದೊಂದಿಗೆ ಸುಖಿಸುವ ಆಸೆ ನನಗಾದರೆ ಆ ಆಸೆಯೇ ನಿನಗಿಲ್ಲ. ನೋಡುವ ನೋಟದಲ್ಲೂ ಸ್ಪರ್ಶಿಸುವ ಚರ್ಮದಲ್ಲೂ ನೀನಿದ್ದರೂ ನಿನಗೆ ಅಂಗವಿಲ್ಲ; ನನಗೆ ಅಂಗವಿದೆ !

ಕೇಳುವ ಕಿವಿಯಿಂದ ಶಬ್ದದ ರುಚಿ ಸವಿದು ಆನಂದ ಪಡುವ, ಒಮ್ಮೊಮ್ಮೆ ಸಂಕಟ ಪಡುವ ಯಾತನೆ ನನಗಾದರೆ ನಿನಗೆ ಆ ಬಯಕೆಯೂ ಇಲ್ಲ, ಸಿಟ್ಟೂ ಇಲ್ಲ. ಏಕೆಂದರೆ ನಿನ್ನಿಂದ ಕೇಳಲ್ಪಡುವ ನಾನು ಅಂಗಿ ; ನೀನು ನಿರಂಗಿ, ನಿಶ್ಶಬ್ದ ಬ್ರಹ್ಮ.

ಮೂಗಿನಿಂದ ವಾಸಿಸಿ ಆನಂದ ಪಡುವ ಅಸಹ್ಯ ಹೊಂದುವ ಯಾತನೆ ನನಗಾದರೆ ನಿನಗಾವುದೂ ಇಲ್ಲ; ನಿನ್ನಿಂದಲೇ ವಾಸಿಸಲ್ಪಡುವ ಅಂಗಿ ನಾನು ನಿರಂಗಿ ನೀನು.

ರುಚಿಸುವ ನಾಲಗೆಯಲ್ಲಿ ನೀನಿದ್ದು ನಿನ್ನಿಂದ ರುಚಿಸಲ್ಪಡುವ ನನಗೆ ಸುಖವೂ ಉಂಟು, ದುಃಖವೂ ಉಂಟು. ನಿನಗಾವುದೂ ಇಲ್ಲ, ಏಕೆಂದರೆ ನಾನು ಅಂಗವುಳ್ಳವನು, ನೀ ನಿರಂಗಿ !

**ನಾನು ನಿನಗೆ ಹೇಳಿಹೆನೆಂದೊಡೆ ನಾ ಸಂಗಿ ನೀ ನಿಸ್ಸಂಗಿ :**

ರೂಪು ರುಚಿ ಸ್ಪರ್ಶ ಶಬ್ದ ವಾಸನೆಯಿಂದುಂಟಾಗುವ ಸುಖ ದುಃಖಗಳನ್ನು ನಾನು ನಿನಗೆ ಹೇಳಿಹೆನೆಂದೊಡೆ ನಾನು ಅಂಗದೊಂದಿಗಿದ್ದ ಅಂಗದ ಸಂಗಿ; ನೀನು ಅಂಗದೊಳಗಿದ್ದೂ ಅಂಗಕ್ಕೆ ಆಧಾರವಾಗಿದ್ದೂ ಅಂಗ ಸೋಂಕದೆ ಅಂಗ ಬೆಳಗುವ ನಿಸ್ಸಂಗಿ; ಬೆಳಗಿಂಗೆ ಬೆಳಗಾಗಿ ಬೆಳಗುವ ಬೆಳಗು.

**ನಿನ್ನಂಗ ಎನ್ನಂಗದಲ್ಲಿ ಪ್ರೇರಿಸಿ ನಿನ್ನರಿವು ಎನ್ನ ಆತ್ಮದಲ್ಲಿ ನಿಂದು ಅರಿವಹನ್ನಕ್ಕ ನನಗೂ ನಿನಗೂ ತತ್ತು ಗೊತ್ತು :**

ಅಂಗವಿಲ್ಲದೆ ಅಂಗಕ್ಕೆ ತಿಳಿ ಹೇಳುವ ನಿನ್ನಂಗ ಎನ್ನಂಗದಲ್ಲಿ ಪ್ರೇರಿಸಿ ನಿನ್ನರಿವು ಎನ್ನ ಆತ್ಮದಲ್ಲಿ ನಿಂತು ಮನದಿಂದ ನಿನ್ನ ತಿಳಿದು ನಿನ್ನಲ್ಲಿ ಲೀನವಾಗುವವರೆಗೆ ನನಗೂ ನಿನಗೂ ತತ್ತು ಗೊತ್ತು.

ನನ್ನನ್ನು ಬಿಗಿದಪ್ಪಿ ಸದಾ ಸಂತೈಸಿದರೂ ನಿನ್ನ ಸಾಂತ್ವನದ ನುಡಿಗಳು ಕೇಳದ ಕಿವುಡ ನಾನು; ನನಗೂ ನಿನಗೂ ತತ್ತು ಗೊತ್ತು ! ಸ್ಪರ್ಶಿಸುವ ಚರ್ಮದಲ್ಲಿ ನೀನಿದ್ದು ಶಾಶ್ವತ ಸುಖ ನೀಡುವ ಬಯಕೆ ನಿನಗೆ ! ಕ್ಷಣಿಕ ಸುಖಿಸಿ ದುಃಖಿಸಿ ದುರಾಸೆ ಪಡುವ ಬಯಕೆ ನನಗೆ, ನೀ ನಿದ್ದೂ ನಿನ್ನನ್ನು ತಿಳಿಯದ ದುಃಖಿ ನಾನು.

ರುಚಿಸುವ ನಾಲಗೆಯಲ್ಲಿ, ವಾಸಿಸುವ ಮೂಗಿನಲ್ಲಿ, ನೋಡುವ ನೋಟದಲ್ಲಿ ನೀನಿದ್ದೂ ನಿನ್ನ ದರ್ಶನ ಪಡೆಯದ ಮುಠ್ಠಾಳ ನಾನು. ನನಗೂ ನಿನಗೂ ತತ್ತು ಗೊತ್ತು.

**ಗೋರಕ್ಷ ಪಾಲಕ ಮಹಾಪ್ರಭು ಸಿದ್ಧಸೋಮನಾಥ ಲಿಂಗವು ಸರಿಹುದುಗು:**

ನಾನು ಗೋವು, ನನ್ನೊಡಲೊಳಗಿದ್ದ ವೃಷಭ ನೀನು. ನಾನು ಸತಿಯಾದರೆ ನೀನು ಪತಿ. ಶರಣ ಸತಿಯಾದರೆ ಲಿಂಗ ಪತಿ. ನಾನು ಅಂಗವಾದರೆ ನೀನು ಲಿಂಗ, ನಾನು ಹೆಣ್ಣಾದರೆ ನೀನು ಗಂಡು ! ನಾನು ಗೋವಾದರೆ ಅದನ್ನು ಪಾಲನೆ ಮಾಡುವ ಮಹಾಪ್ರಭು ನೀನು. ನಿನ್ನಿಂದಲೇ ಸಕಲ ವೇದ ಶಾಸ್ತ್ರ ಪುರಾಣ ಆಗಮ ಉಪನಿಷತ್‌ಗಳು.ಅವುಗಳನ್ನು ನನ್ನ ಅಂಗದಿಂದಲೇ ರಚಿಸಿದ ಸಿದ್ಧ ಸೋಮನಾಥನೆಂಬ ಮಹಾ ಬೆಳಗಿನ (ಅರಿವು) ಲಿಂಗ ನೀನು. ನನಗೆ ಸರಿಯಾಗಿ ಕಾಣುವಂತೆ ನನ್ನ ಅಂಗದಲ್ಲಿ ನೀನು ಅಡಗು; ನಿನ್ನಿಂದ ನಾನು ಬೆಳಗುವೆನು. ಬೆಳಗಿಂಗೆ ಬೆಳಗಾಗಿ, ಸೂರ್ಯ ನಾಚುವಂತೆ ಸೂರ್ಯನಿಗೂ ಮಿಗಿಲಾಗಿ ಬೆಳಗುವೆನು. ಮಹಾಪ್ರಭು ಸಿದ್ಧಸೋಮನಾಥನೆ ಸರಿ ಹುದುಗು ಎಂದು ಅಂಗದೊಡೆಯ ನಿರಂಗಿಯನ್ನು ಬೇಡುತ್ತಿದ್ದಾರೆ ಗೋರಕ್ಷಕ ಶರಣರು.

□

---

**ಅರಿವಿನ ಪರಿಮಳ :**

□ ನನ್ನನ್ನು ಬಿಗಿದಪ್ಪಿ ಸದಾ ಸಂತೈಸಿದರೂ ನಿನ್ನ ಸಾಂತ್ವನದ ನುಡಿಗಳು ಕೇಳದ ಕಿವುಡ ನಾನು; ನನಗೂ ನಿನಗೂ ತತ್ತು ಗೊತ್ತು ! ಸ್ಪರ್ಶಿಸುವ ಚರ್ಮದಲ್ಲಿ ನೀನಿದ್ದು ಶಾಶ್ವತ ಸುಖ ನೀಡುವ ಬಯಕೆ ನಿನಗೆ ! ಕ್ಷಣಿಕ ಸುಖಿಸಿ ದುಃಖಿಸಿ ದುರಾಸೆ ಪಡುವ ಬಯಕೆ ನನಗೆ, ನೀ ನಿದ್ದೂ ನಿನ್ನನ್ನು ತಿಳಿಯದ ದುಃಖಿ ನಾನು.

# ವ್ಯವಹಾರಕ್ಕಿಳಿದ ತನು ಜ್ಞಾನ ಕಾಣಲಿಲ್ಲ

**ಎಂಭತ್ತು ನಾಲ್ಕು ಲಕ್ಷ ರತ್ನದ ವ್ಯವಹಾರಿಗಳು**
**ರತ್ನವ ಕೆಡಿಸಿ ಅರಸುತ್ತೈದಾರೆ ನೋಡಾ**
**ರತ್ನ ಮಂಜಿನ ರಂಜನೆ, ಆಗರಕ್ಕೆ ಸಲ್ಲದು**
**ಹುಟ್ಟಿ ಕೆಟ್ಟ ರತ್ನ ಕೆಟ್ಟ ಕೇಡಿಂಗಿನ್ನೆಂತೊ !**
**ಆಗುಹೋಗಿನ ನಿರ್ಣಯವನು ಸಾಗರ ನುಂಗಿತ್ತು**
**ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆ.**

**- ಘಟ್ಟಿವಾಳಯ್ಯ ಶರಣರು**

**ಎಂಭತ್ತು ನಾಲ್ಕು ಲಕ್ಷ ರತ್ನದ ವ್ಯವಹಾರಿಗಳು ರತ್ನವ ಕೆಡಿಸಿ ಅರಸುತ್ತೈದಾರೆ ನೋಡಾ :**

ಮನುಜರೆಲ್ಲ ಜ್ಞಾನ ರತ್ನದ ವ್ಯವಹಾರಿಗಳು. ಜ್ಞಾನ ಎನ್ನುವುದು ತನುವಿನ ರತ್ನ ! ಆ ರತ್ನವನ್ನು ಕೆಡಲು ಬಿಟ್ಟು ರತ್ನಕ್ಕಾಗಿ ಹೊರಗೆ ಹುಡುಕುತ್ತಿದ್ದಾರೆ. ಗುರುವಿನಲ್ಲಿ, ಪುಸ್ತಕದಲ್ಲಿ, ಪುಣ್ಯ ಕ್ಷೇತ್ರಗಳಲ್ಲಿ ದೇವಸ್ಥಾನಗಳಲ್ಲಿ ರತ್ನದ ಹುಡುಕಾಟ ನಡೆದಿದೆ. ಈ ವ್ಯವಹಾರ ಕಂಡು ಘಟ್ಟಿವಾಳಯ್ಯ ಶರಣರು ಮಮ್ಮಲ ಮರುಗಿದ್ದಾರೆ.

ತನುವಿಗೆ ಜ್ಞಾನದ ಮರು ಪೂರಣದ ಅವಶ್ಯಕತೆಯಿಲ್ಲ. ಶಿಕ್ಷಣ ತಜ್ಞರು, ಜ್ಞಾನದ ವಿಜ್ಞಾನಿಗಳು, ಪ್ರಾಜ್ಞರು ಎಂದೆನಿಸಿಕೊಳ್ಳುವವರು ಯಾಕೆ ಯೋಚಿಸುತ್ತಿಲ್ಲವೋ ತಿಳಿಯುತ್ತಿಲ್ಲ. ತಾನೇ ಹೊರಚೆಲ್ಲುವ ಜ್ಞಾನಾಮೃತದ ಬುಗ್ಗೆಯನ್ನು ತನುವು ಪುನಃ ಸ್ವೀಕರಿಸಲು ಸಾಧ್ಯವೇ? ಎಂದು ಶಿಕ್ಷಕನಾದವನು ಅರಿಯದಿರುವುದು ದುರ್ದೈವದ ಸಂಗತಿಯೇ ಆಗಿದೆ.

ಸದಾ ಅರಿವಿನ ಪರಿಮಳ ಬೀರಬೇಕಾದ ತನು; ತನ್ನ ಜ್ಞಾನ ರತ್ನ ತಾನೇ ಕೆಡಿಸಿಕೊಂಡು ರಂಜನೆಗೆ ಒಳಗಾಗಿದೆ.

**ರತ್ನ ಮಂಜಿನ ರಂಜನೆ, ಆಗರಕ್ಕೆ ಸಲ್ಲದು:**

ತನು ಮಂಜಿನ ಬಿಂದುವಿನಿಂದ ಜನಿಸಿ ಗಟ್ಟಿಗೊಂಡು ಜ್ಞಾನ ರತ್ನವೆನ್ನಿಸಿ ಕೊಂಡಿದೆ. ಈ ತನುವಿನಲ್ಲಿ ಉಂಟಾಗುವ ರಂಜನೆ ಮತ್ತು ವಿಷಯದ ರಸಾಯನಿಕ ಕ್ರಿಯೆಗಳನ್ನು ಕೂಡಾ ತನ್ನ ಜ್ಞಾನವೆಂಬ ರತ್ನದ ಬೆಳಕಿನಿಂದ ಪರಿಹರಿಸಿಕೊಳ್ಳಬಹುದಾಗಿದೆ. ಆದರೆ ಅದೆಲ್ಲವನ್ನು ಮರೆತು ರಂಜನೆಗೊಳಗಾಗಿ ಕೆಡುತ್ತಲಿದೆ.

**ಹುಟ್ಟಿ ಕೆಟ್ಟ ರತ್ನ ಕೆಟ್ಟ ಕೇಡಿಂಗಿನ್ನೆಂತೋ !**

ತನು ಜ್ಞಾನ ಬೆಳಗುವುದಕ್ಕಾಗಿ ಅದರ ಕಂಪು ಬೀರುವುದಕ್ಕಾಗಿ ಹುಟ್ಟಿದೆ. ಜ್ಞಾನವನ್ನು ವ್ಯವಹಾರಕ್ಕೆ ಬಳಕೆ ಮಾಡಿಕೊಳ್ಳಲು ಬರುವುದಿಲ್ಲ. ಗುರುವಿಗೆ ಭೂಮಿ , ಹೇಮ ನೀಡಿ ಕೊಳ್ಳಲು ಬರುವುದಿಲ್ಲ. ಗುರುವಾದರೂ ತನ್ನ ತನುವಿನಿಂದಲೇ ತಾನು ಬೆಳಗಿಕೊಳ್ಳಬೇಕು. ಶಿಷ್ಯನಾದರೂ ತನ್ನ ತನುವಿನಿಂದಲೇ ಜ್ಞಾನ ಬೆಳಗಿಸಿಕೊಳ್ಳಬೇಕು. ಗುರು ಶಿಷ್ಯರ ವ್ಯವಹಾರ ನಿಂತರೆ ಎರಡೂ ತನುಗಳು ಜ್ಞಾನ ರತ್ನಗಳೇ ! ಎರಡೂ ಜ್ಞಾನಕ್ಕಾಗಿ ಹುಟ್ಟಿದ ರತ್ನಗಳೇ. ಆದರೆ ಹಣ ದ್ರವ್ಯ ಹೇಮ ಕೊಟ್ಟು ಜ್ಞಾನ ಪಡೆಯುವ ಕೇಡು ಶಿಷ್ಯನನ್ನು ಆವರಿಸಿಕೊಂಡಿದೆ. ಇವೆಲ್ಲವುಗಳನ್ನು ಪಡೆದು ಜ್ಞಾನ ಕೊಡುವ ವಿಧಿ

ಎಂಬ ಕೇಡು ಗುರುವನ್ನು ಆವರಿಸಿಕೊಂಡಿದೆ.

ಭೂಮಿ ನಿನ್ನದಲ್ಲ. ಹೇಮ ನಿನ್ನದಲ್ಲ ಕಾಮಿನಿ ನಿನ್ನವಳಲ್ಲ ಇವು ಜಗಕ್ಕಿಕ್ಕಿದ ವಿಧಿ. ನಿನ್ನ ದೆಂಬುದು ಜ್ಞಾನ ರತ್ನ ! ಅಂತಪ್ಪ ದಿವ್ಯ ರತ್ನವ ಕೆಡಗೊಡದೆ ಆ ರತ್ನವ ನೀನು ಅಲಂಕರಿಸಿದೆಯಾದಡೆ ನಮ್ಮ ಗುಹೇಶ್ವರ ಲಿಂಗದಲ್ಲಿ ನಿನ್ನಿಂದ ಬಿಟ್ಟು ಸಿರಿವಂತರಿಲ್ಲ ಕಾಣಾ ಎಲೆ ಮನವೆ ಎನ್ನುವಂತೆ ತನುವಿನಲ್ಲಿ ಜ್ಞಾನವಿದ್ದು ಸ್ವತಃ ಜ್ಞಾನಿಗಳು ತಾವಾಗಿದ್ದೂ ಮರೆವಿನಿಂದ ಅದನ್ನು ಕೆಡಲು ಬಿಟ್ಟಿದ್ದಾರೆ. ಪುನಃ ಜ್ಞಾನಕ್ಕಾಗಿ ಕೊಡ ಕೊಳ್ಳುವ ವ್ಯವಹಾರದಲ್ಲಿ ಗುರುಶಿಷ್ಯರಂತೆ ಭಾಗಿಯಾಗಿದ್ದಾರೆ. ಇಂತಹ ಗುರು ಶಿಷ್ಯರಿಬ್ಬರು ಹುಟ್ಟಿ ಕೆಟ್ಟ ರತ್ನಗಳು. ಇವರು ಕೆಟ್ಟ ಕೇಡಿಂಗೆ ಏನೆನ್ನಬೇಕು?

**ಆಗುಹೋಗಿನ ನಿರ್ಣಯವನು ಸಾಗರ ನುಂಗಿತ್ತು. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲವೆಂದೆ:**

ತನ್ನ ತನುವಿನ ಜ್ಞಾನರತ್ನವನ್ನು ತಾನು ತಿಳಿದು ಸುಖಿಸದೆ ಜ್ಞಾನ ತಿಳಿಯುವ ಆಗುಹೋಗುಗಳ ಬಾಧೆಯಲ್ಲಿ ಹರಿದು ತಿನ್ನುವ ಸಾಗರೋಪಾದಿಯ ಸುಖ ದುಃಖಗಳು ನುಂಗಿ ಹಾಕುತ್ತವೆ. ತನುವಿನ ಜ್ಞಾನದೊಡೆಯನೆಂಬ ಸಿದ್ಧಲಿಂಗನಿಗೆ ಮನವೆಂಬ ಚಿಕ್ಕಯ್ಯನು ಪ್ರಿಯವಾಗದಿದ್ದರೆ ರತ್ನದ ಭಾಗ್ಯ ಇಲ್ಲ; ಈ ಜನ್ಮದಲ್ಲಿಯೇ ಇಲ್ಲವೆಂದಿದ್ದಾರೆ ಘಟ್ಟಿವಾಳಯ್ಯ ಶರಣರು.

□



**ಅರಿವಿನ ಪರಿಮಳ :**

- □ ತನುವಿಗೆ ಜ್ಞಾನದ ಮರು ಪೂರಣದ ಅವಶ್ಯಕತೆಯಿಲ್ಲ. ಶಿಕ್ಷಣ ತಜ್ಞರು, ಜ್ಞಾನದ ವಿಜ್ಞಾನಿಗಳು, ಪ್ರಾಜ್ಞರು ಎಂದೆನಿಸಿಕೊಳ್ಳುವವರು ಯಾಕೆ ಯೋಚಿಸುತ್ತಿಲ್ಲವೋ ತಿಳಿಯುತ್ತಿಲ್ಲ. ತಾನೇ ಹೊರಚೆಲ್ಲುವ ಜ್ಞಾನಾಮೃತದ ಬುಗ್ಗೆಯನ್ನು ತನುವು ಪುನಃ ಸ್ವೀಕರಿಸಲು ಸಾಧ್ಯವೇ? ಎಂದು ಶಿಕ್ಷಣಾದವನು ಅರಿಯದಿರುವುದು ದುರ್ದೈವದ ಸಂಗತಿಯೇ ಆಗಿದೆ.
- □ ಸದಾ ಅರಿವಿನ ಪರಿಮಳ ಬೀರಬೇಕಾದ ತನು; ತನ್ನ ಜ್ಞಾನ ರತ್ನ ತಾನೇ ಕೆಡಿಸಿಕೊಂಡು ರಂಜನೆಗೆ ಒಳಗಾಗಿದೆ.
- □ ತನು ಜ್ಞಾನ ಬೆಳಗುವುದಕ್ಕಾಗಿ ಅದರ ಕಂಪು ಬೀರುವುದಕ್ಕಾಗಿ ಹುಟ್ಟಿದೆ.
- □ ಗುರು ಶಿಷ್ಯರ ವ್ಯವಹಾರ ನಿಂತರೆ ಎರಡೂ ತನುಗಳು ಜ್ಞಾನ ರತ್ನಗಳೇ ! ಎರಡೂ ಜ್ಞಾನಕ್ಕಾಗಿ ಹುಟ್ಟಿದ ರತ್ನಗಳೇ.

# ಅರಿವು ಬಳಕೆ ಮಾಡಿಕೊಳ್ಳದೆ ಕೆಡುವ ತನು

**ತನು ತನ್ನ ಕಾಣದು, ಮನ ತನ್ನನರಿಯದು**
**ಏನಯ್ಯ ತನು ಕೆಟ್ಟು ಮನ ನಷ್ಟವಾಯಿತ್ತು .**
**ಅನಾಗತವೆಂದಡೆ ಅನಾಹತವಾಯಿತ್ತು .**
**ಜೀವರಾಶಿಗಳೆಲ್ಲಾ ನಡೆಗೆಟ್ಟು ಹೋದವು.**
**ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಇಲ್ಲೆಂಬೆನು.**

**-ಘಟ್ಟಿವಾಳಯ್ಯ ಶರಣರು.**

**ತನು ತನ್ನ ಕಾಣದು, ಮನ ತನ್ನನರಿಯದು ಏನಯ್ಯಾ ತನು ಕೆಟ್ಟು ಮನ ನಷ್ಟವಾಯಿತ್ತು :**

ಆಧ್ಯಾತ್ಮ ಎನ್ನುವುದು ಒಂದು ಫ್ಯಾಷನ್ ಅಲ್ಲ. ಜನ ಗೌರವಿಸುವ ಪದವಿಯೂ ಅಲ್ಲ. ಕಾವಿ ಹಾಕಿ ಮಠ, ಆಶ್ರಮ ಕಟ್ಟಿಕೊಂಡು ಅನುಭವಿಸಿ ಆನಂದಪಟ್ಟು ಇತರರಿಗೆ ಮಾರುತ್ತೇನೆ ಎನ್ನುವ ವಸ್ತುವೂ ಅಲ್ಲ. ಹಿಮಾಲಯದಲ್ಲಿ ಕುಳಿತು ಸಾಧನೆ ಮಾಡಿ ಸಿದ್ಧಿಸಿಕೊಳ್ಳುತ್ತೇನೆ ಎಂದು ಹಠದಿಂದ ಪಡೆಯುವ ವಸ್ತುವೂ ಅಲ್ಲ. ಹೀಗೆ ಜಪಿಸಿ ತಪಿಸಿ ಪಡೆಯುತ್ತೇನೆ ಎಂದಂತೆಲ್ಲ ಅರಿವು ತನುವಿನಿಂದ ಮರೆಯಾಗಿ ವ್ಯರ್ಥ ನಷ್ಟವಾಗುತ್ತದೆ; ಮೋಸಕ್ಕೊಳಗಾಗುತ್ತದೆ. ಇತರ ತನುಗಳಿಗೂ ಮೋಸ ಮಾಡುತ್ತದೆ. ಕೇಳಿದ ಆ ತನುಗಳು ಕೂಡಾ ತನ್ನ ತನುವಿನಂತೆ ಏನೂ ತಿಳಿಯದೆ ವ್ಯರ್ಥ ಹಾಳಾಗುತ್ತವೆ. ಇದೊಂದು ತೋರಿಕೆಯ ವ್ಯವಹಾರವಾಗುತ್ತದೆ.

ಆಧ್ಯಾತ್ಮಿಕ ಎನ್ನುವುದು ತನುವಿನ ವಿಜ್ಞಾನ. ತನು ಇರುವ ಅವಧಿಯ ಒಳಗಾಗಿ ಹೊರನೋಡುವ ಚಂಚಲ ಮನದಿಂದಲೇ ತನುವಿನ ಅರಿವನ್ನು ತಿಳಿಯಬೇಕು. ಆ ಅರಿವಿನಿಂದ ನೋಡುವುದು, ಅರಿವಿನಿಂದ ಕೇಳುವುದು, ಅರಿವಿನಿಂದ ಸ್ಪರ್ಶಿಸುವುದು, ಅರಿವಿನಿಂದ ವಾಸಿಸುವುದು ಹಾಗೂ ಅರಿವಿನಿಂದಲೇ ರುಚಿಸುವಂತಾಗಬೇಕು.

ವೇದ ಆಗಮ ಪುರಾಣ ಪುಣ್ಯ ಕತೆಗಳೆಲ್ಲ ತನುವಿನಿಂದಲೇ ಸೃಷ್ಟಿಯಾದವು. ಭಗವದ್ಗೀತೆ, ಬೈಬಲ್, ರಾಮಾಯಣ ಮಹಾಭಾರತಗಳೆಲ್ಲ ತನುವಿನಿಂದಲೇ ಸೃಷ್ಟಿಯಾದವು. ಅಂತೆಯೇ ವೈದ್ಯಕೀಯ, ವಿಜ್ಞಾನ, ಗಣಿತ, ಭೌತ, ರಸಾಯನಿಕ, ಜೀವಶಾಸ್ತ್ರ, ಐತಿಹಾಸಿಕ ಪುಸ್ತಕಗಳೆಲ್ಲ ತನುವಿನಿಂದಲೇ ಸೃಷ್ಟಿಯಾದವು. ಇವುಗಳನ್ನು ಹೊರತಂದ ತನುಗಳು ಹೇಗೆ ವಿಜ್ಞಾನಿ ತನುಗಳೊ ಹಾಗೆಯೇ ಈ ಪುಸ್ತಕಗಳನ್ನು ಓದುವ, ಕೇಳುವ, ಓದದೇ, ಕೇಳದೇ ಇರುವ ತನುಗಳು ಕೂಡಾ ವಿಜ್ಞಾನಿ ತನುಗಳೇ! ಮಹಾನ್ ಪುರುಷ ತನುಗಳೇ !! ಆದರೆ ತನು ನಷ್ಟವಾಗದ ಮುನ್ನ ತನುವಿನ ಮನ ನಷ್ಟವಾಗಬೇಕು. ತನುವಿನ ಮನ ತನುವಿನ ಅರಿವಿನಲ್ಲಿ ಲೀನವಾಗಬೇಕು. ಆ ತನುವೇ ಅರಿವಿನ ತನು. ಆ ತನುಗಳಿಂದಲೇ ಸಕಲ ವೇದ ಆಗಮ ಉಪನಿಷತ್ತು, ಬೈಬಲ್, ಭಗವದ್ಗೀತೆಗಳು ಹುಟ್ಟಿದವು. ಅವೇ ಅರಿವಿಗೆ ದಾಸನಾದ ತನುಗಳು. ಅರಿವಿಗೆ ಶರಣು ಹೋದ ತನುಗಳು. ಸಂತ, ಶ್ರೇಷ್ಠ, ಶರಣ, ದಾಸ ತನುಗಳು. *ನಿತ್ಯ ನಿರಂಜನ ತಾನೆಂದರಿಯದೆ ತತ್ವಮಸಿ ಎಂದು ಹೊರಗನೆ ಹಾಡಿ ಸತ್ತಿತ್ತಲ್ಲ ಜಗವೆಲ್ಲ ನಾಯಿಸಾವ. ತಮ್ಮ ತಾವರಿಯದೆ ಸತ್ತವರ ಪತ್ರವನು ಓದಿದಡೆ ಎತ್ತಣ ಮುಕ್ತಿ ಗುಹೇಶ್ವರಾ.*

ವೇದ ಆಗಮ ಉಪನಿಷತ್ತು, ಭಗವದ್ಗೀತೆ, ಬೈಬಲ್, ರಾಮಾಯಣ, ಮಹಾಭಾರತ ಮುಂತಾದ

ಪುಸ್ತಕಗಳೆಲ್ಲವನ್ನು ಬರೆದ ಮಹಾನುಭಾವರು ಸತ್ತು ಹೋಗಿದ್ದಾರೆ. ಈ ಪುಸ್ತಕಗಳೆಲ್ಲ ಅವರು ಬರೆದಿಟ್ಟ ಪತ್ರಗಳು! ಬರೆದಿಟ್ಟ ಆ ತನುಗಳಿಗೂ ಅವುಗಳನ್ನು ಓದಿ ಕೇಳಿ ಸಂತೋಷ ಪಡುವ ತನುಗಳಿಗೂ ಯಾವ ವ್ಯತ್ಯಾಸವೂ ಇಲ್ಲ.

ಕೆಲವು ಪುಸ್ತಕಗಳನ್ನು ಓದಿ, ಪದವಿ ಪಡೆದು, ಪಂಡಿತ, ಶಾಸ್ತ್ರಿ, ಮಠಾಧಿಪತಿ, ಪೀಠಾಧಿಪತಿಯಾಗಿ ಭಾಷಣ ಮಾಡಿ ಬರೆದವರನ್ನು ಹೊಗಳಿ ಆನಂದಪಟ್ಟರು. ಕೇಳಿದವರು ಭಾಷಣ ಮಾಡಿದವನನ್ನು ಹೊಗಳಿ ಆನಂದ ಪಟ್ಟರು. ಓದಿದ ಓದು ಓದಿದವರಲ್ಲಿ ಉಳಿಯದೆ ನಡೆಯುವಲ್ಲಿ ಎಡವಿದರು. ಕೇಳಿದ ಭಾಷಣ ಕೇಳುಗರಲ್ಲಿ ಉಳಿಯದೆ ನಡೆಯುವಲ್ಲಿ ಎಡವಿದರು.

ಓದಿದವರು ಕೇಳಿದವರು ತನುವಿನ ಅನುಭಾವಕ್ಕೆ ಶರಣು ಹೋಗಲಿಲ್ಲ. ವೇದ ಆಗಮ ಉಪನಿಷತ್ ಭಗವದ್ಗೀತೆ ಬೈಬಲ್‌ಗಳಿಗೆ ಶರಣು ಹೋದರು. ಅವು ತನುವಿನ ಅನುಭಾವಕ್ಕೆ ಕರೆದುಕೊಂಡು ಹೋಗುವ ಸೂತ್ರಗಳು. ಮಹಾನುಭಾವರು ಅನುಭವಿಸಿ ಆನಂದಪಟ್ಟರು. ಅದರಂತೆ ಸಕಲ ತನುಗಳು ಅನುಭಾವಕ್ಕೆ ಹೋಗಲಿ ಎಂದು ಸೂತ್ರಗಳನ್ನು ರಚಿಸಿದರು. ಆದರೆ ಪಂಡಿತ ಮಠಾಧೀಶರೆನ್ನುವವರು ಜೀವನ ಪರ್ಯಂತ ಪುಸ್ತಕ ಅಭ್ಯಾಸ ಮಾಡಿ ವೇದಿಕೆಗೆ ಬಳಸಿ ವ್ಯವಹಾರ ಮಾಡಿದರು. ಬರೆದವರ ಸಮಾಧಿ ಕಟ್ಟಿ ಜಾತ್ರೆ ಮಾಡಿದರು. ಕಿರೀಟ ಧರಿಸಿ ಪಲ್ಲಕ್ಕಿಯಲ್ಲಿ ಮೆರೆದರು. ಏನೆಲ್ಲಾ ಬರೆದವರನ್ನು ಹಾಡಿ ಹೊಗಳಿದರೆ, ಸತ್ತವರು ಬರೆದ ಮಾತುಗಳಾದವೇ ಹೊರತು ತಮ್ಮ ತನುವಿನ ಅನುಭಾವದ ಮಾತುಗಳಾಗಲಿಲ್ಲ. ಏನೆಲ್ಲಾ ಕೇಳಿದರೂ ಕೇಳುಗರಿಗೆ ಹೇಳಿದವನ ಮಾತುಗಳಾದವೇ ಹೊರತು ತಮ್ಮ ತನುವಿನ ಮಾತುಗಳಾಗಲಿಲ್ಲ.

ಅನುಭಾವಿಗಳು ಬರೆದದ್ದನ್ನು ಒಬ್ಬ ಓದಿ ಸಂತೋಷಪಟ್ಟು ಉತ್ತಮ ಓದುಗನಾದ, ಮತ್ತೊಬ್ಬ ಜೀವನ ಪರ್ಯಂತ ಓದಿ ಪಂಡಿತ, ಶಾಸ್ತ್ರಿ, ಮಠಾಧೀಶ, ಗುರುವಾದ . ಇವರೆಲ್ಲಾ ಜೀವನ ಪರ್ಯಂತ ಓದಿದ್ದನ್ನು ಕೇಳುಗರು ಕ್ಷಣಾರ್ಧದಲ್ಲಿ ಕೇಳಿ ಸಂತೋಷಪಟ್ಟರು. ಓದುಗನ ತನು, ಪಂಡಿತನ ತನು ಹಾಗು ಕೇಳುಗನ ತನುವಿನ ಸಂತೋಷ ಒಂದಾಗಲಿಲ್ಲವೇ?

ಅನುಭಾವಿಗಳಿಗೆ ಅಕ್ಷರದ ಅವಶ್ಯಕತೆಯಿಲ್ಲ. ಅಕ್ಷರ ತಿಳಿದವರು ಇತರ ತನುಗಳಿಗೆಲ್ಲ ಅನುಕೂಲವಾಗಲೆಂದು ಅನುಭಾವಕ್ಕೆ ಹೋಗುವ ಸೂತ್ರ ಬರೆದರು. ತಿಳಿದವರು ಹೇಳಿ ಬರೆಯಿಸಿ ಅಕ್ಷರೋತ್ತಮರಾದರು. ಅವರನ್ನು ನಿರಕ್ಷರಿಗಳು ಎನ್ನುವಂತಿಲ್ಲ.

ತನು ಅರಿವಿನ ಸಂಪತ್ತು. ಅದು ಇರುವುದರೊಳಗಾಗಿ ತಿಳಿಯಬೇಕು. ಅರಿವು ಸಕಲ ತನುಗಳಲ್ಲಿಯೂ ಇದೆ. ಆದರೆ ತನುವಿನಿಂದ ತನುವಿನ ಅರಿವನ್ನು ನೋಡಲು ಬರುವುದಿಲ್ಲ, ಮನ ತನ್ನನ್ನು ತಾನು ಅರಿಯಲು ಬರುವುದಿಲ್ಲ. ಹೀಗೆಯೆ ಜೀವನ ಪರ್ಯಂತ, ಜೀವ ವಿರುವ ತನುಗಳೆಲ್ಲ ಅರಿವಿದ್ದೂ ಬಳಕೆ ಮಾಡಿಕೊಳ್ಳದೆ, ತನುವಿನೊಡೆಯ ಅರಿವೆಂಬ ಸಿದ್ಧಲಿಂಗನಿಗೆ ಚಿಕ್ಕಯ್ಯನೆಂಬ ತನುವಿನ ಮನ ಪ್ರಿಯವಾಗದೆ ತನು ಕೆಟ್ಟು, ಮನ ನಷ್ಟವಾಗಿ ಅರಿವು ಇಲ್ಲ ಇಲ್ಲ ಇಲ್ಲೆಂಬೆನು ಎಂದು ಮೂರು ಬಾರಿ ಹೇಳಿದ್ದಾರೆ ಘಟ್ಟಿವಾಳಯ್ಯ ಶರಣರು.

□

**ಅರಿವಿನ ಪರಿಮಳ :**

- ಏನೆಲ್ಲಾ ಬರೆದವರನ್ನು ಹಾಡಿ ಹೊಗಳಿದರೆ, ಸತ್ತವರು ಬರೆದ ಮಾತುಗಳಾದವೇ ಹೊರತು ತಮ್ಮ ತನುವಿನ ಅನುಭಾವದ ಮಾತುಗಳಾಗಲಿಲ್ಲ. ಏನೆಲ್ಲಾ ಕೇಳಿದರೂ ಕೇಳುಗರಿಗೆ ಹೇಳಿದವನ ಮಾತುಗಳಾದವೇ ಹೊರತು ತಮ್ಮ ತನುವಿನ ಮಾತುಗಳಾಗಲಿಲ್ಲ.

# ಜಲದಿಂದಲೇ ಮಲ, ಜಲದಿಂದಲೇ ನಿರ್ಮಲ

**ಅಪ್ಪುವಿನಿಂದ ಸಕಲ ಮಯವೆಲ್ಲವು ಕಲ್ಪಿಸಿ**
**ಅಪ್ಪುವಿನಿಂದ ಮಲ ನಿರ್ಮಲವೆಂದಾಯಿತ್ತು**
**ವಸ್ತುವಿನಿಂದ ರೂಪು ನಿರೂಪೆಂದಾಯಿತ್ತು**
**ಜಲದಿಂದಾದ ಪಂಕವ ಜಲ ತೊಳೆದು ನಿರ್ಮಲವಾದಂತೆ**
**ನಿರೂಪು ಸ್ವರೂಪನಾಗಿ ಸ್ವರೂಪು ನಿರೂಪನಾಗಿ ಉಭಯವು ನೀನಾಗಿ**
**ನಾ ಕಂಡು ನುಡಿಯುವುದಕ್ಕೆ ಎನಗೊಂದೆಡೆಯಿಲ್ಲ**
**ಕಾಲಾಂತಕ ಭೀಮೇಶ್ವರ ಲಿಂಗವು ನೀನೆಯಾಗಿ**

**– ಡಕ್ಕೆಯ ಬೊಮ್ಮಣ್ಣ ಶರಣರು**

ಡಕ್ಕೆಯ ಬೊಮ್ಮಣ್ಣ ಶರಣರು ತಮ್ಮ ವಚನದಲ್ಲಿ ಜಲ ಮಲ ನಿರ್ಮಲ ಕೆಸರು ರೂಪು ನಿರೂಪು ಸ್ವರೂಪು ಎನ್ನುವ ಏಳು ಪದಗಳನ್ನು ಬಳಸಿದ್ದಾರೆ. ಈ ಪದಗಳ ಸುತ್ತ ವಚನ ರಚಿಸಿ ಸಕಲ ಓದುಗರನ್ನು ಅರಿವಿಗೆ ಕರೆದುಕೊಂಡು ಹೋಗಿದ್ದಾರೆ.

ಜಲದಿಂದಲೇ ಜಗತ್ತು . ಜಲದಿಂದಲೇ ಮಲ– ನಿರ್ಮಲ. ಜಲದಿಂದಲೇ ವಸ್ತು ,ರೂಪು – ನಿರೂಪು. ಜಲದಿಂದ ಆದ ಕೆಸರು ಜಲದಿಂದ ತೊಳೆದು ನಿರ್ಮಲವಾದಂತೆ. ಜಲಬಿಂದುವಿನಿಂದಾದ ರೂಪವೇ ನಿರೂಪವಾಗಿ ಸ್ವರೂಪವಾದಂತೆ ! ಆ ಸ್ವರೂಪವೇ ನಿರೂಪವಾಗಿ ಈ ಎರಡೂ ಸೇರಿ ಅರಿವಾದಂತೆ.

ಆ ಅರಿವೇ ನುಡಿದಲ್ಲಿ ನಾ ಕಂಡು ನುಡಿಯುವುದಕ್ಕೆ ಏನೂ ಉಳಿಯಲಿಲ್ಲ ಎಂದು ಬೊಮ್ಮಯ್ಯ ಶರಣರು ತನ್ನ ತನುವಿನಲ್ಲಿ ತನ್ಮಯವಾದ ಅರಿವಿನೊಂದಿಗೆ ಮಾತನಾಡಿದ್ದಾರೆ. ಆ ಅರಿವಿಗೆ ಕಾಲಾಂತಕ ಭೀಮೇಶ್ವರನೆಂದು ನಾಮಕಾರಣ ಮಾಡಿದ್ದಾರೆ.

ಅರಿವು ಮರೆವಾದರೆ ಮಲ, ಮಲದಿಂದಲೇ ಅಸಹ್ಯ. ಅರಿವಾದರೆ ಜಲದಿಂದಲೇ ಮಲ ಮತ್ತು ಕೆಸರಿನ ಸೃಷ್ಟಿ ! ಆಗ ಅವರೆಡೂ ಕಣ್ಣೆದುರಿಗಿದ್ದರೂ ನಿರ್ಮಲವೇ ! ಮಲ ಎನ್ನುವುದು ಜಲದ ಮತ್ತೊಂದು ರೂಪ ಅದು ಮಲ ಆಗಲು ಸಾಧ್ಯವೇ?

ಜಲದಿಂದಲೇ ಸಕಲ ತರಕಾರಿ ಗಿಡ ಮರಬಳ್ಳಿ ಹಣ್ಣು ಆಹಾರಧಾನ್ಯ . ಇವೆಲ್ಲ ಜಲದ ಮತ್ತೊಂದು ರೂಪ. ಇವೆಲ್ಲವುಗಳಿಗೆ ಅಯಾ ಹೆಸರು. ಇವುಗಳನ್ನು ಸೇವಿಸಿ ಹೊರಬಂದ ಪದಾರ್ಥಕ್ಕೆ ಮತ್ತೊಂದು ಹೆಸರೇ ಮಲ. ಅದು ಜಲವಲ್ಲದೆ ಮಲ ಆಗಲು ಸಾಧ್ಯವೆ? ಜಲದಿಂದಾದ ಮಲವೂ ನಿರ್ಮಲವೆಂದಾಗಲಿಲ್ಲವೆ? ಜಲದಿಂದಲೇ ವಸ್ತುವಾಯಿತು. ಆ ವಸ್ತು ಪುನಃ ಜಲ ಕಳೆದುಕೊಂಡು (ಆವಿಯಾಗಿ) ನಿರೂಪವಾಯಿತು. ಜಲದಿಂದಾದ ಕೆಸರು (ಪಂಕ) ಜಲದಿಂದಲೇ ತೊಳೆದು ನಿರ್ಮಲವಾದಂತೆ!

**ನಿರೂಪು ಸ್ವರೂಪನಾಗಿ ಸ್ವರೂಪು ನಿರೂಪನಾಗಿ ಉಭಯವು ನೀನಾಗಿ ನಾ ಕಂಡು ನುಡಿಯುವುದಕ್ಕೆ ಎನಗೊಂದೆಡೆಯಿಲ್ಲ. ಕಾಲಾಂತಕ ಭೀಮೇಶ್ವರಲಿಂಗವು ನೀನೇಯಾಗಿ :**

ಜಲಜನಕ ಆಮ್ಲಜನಕ ಕೂಡುವಿಕೆಯಿಂದ ಜಲಬಿಂದುವಾಯಿತು. ಅದೇ ಗರ್ಭ ಪ್ರವೇಶ ಮಾಡಿ ರೂಪಾಯಿತು. ರೂಪಿನ ಮೂಲ ನಿರೂಪು. ನಿರೂಪವೇ ಸ್ವರೂಪು, ಸ್ವರೂಪವೇ ನಿರೂಪ. ಒಂದರಿಂದ

ಮತ್ತೊಂದಾಗಿದೆ. ನಿರೂಪದಿಂದ ರೂಪಾದರೂ ರೂಪದ ಮೂಲ ನಿರೂಪವೇ ಆಗಿರುವುದರಿಂದ, ರೂಪು ನಿರೂಪು ಎನ್ನಲು ಬಾರದಂತಾಗಿ ಎರಡರಲ್ಲೂ ಅರಿವೆಂಬ ಭೀಮೇಶ್ವರ ಲಿಂಗವೇ ಭರಿತವಾಗಿದೆ. ನುಡಿಗೆ ಎಡೆಯಿಲ್ಲದಂತೆ ಅಂಗದಲ್ಲಿ ಭರಿತವಾದ ಲಿಂಗವೇ ನುಡಿಗೆಟ್ಟ ಅರಿವಿನ ನುಡಿಯನ್ನು ಸದಾ ನುಡಿಯುತ್ತಲಿದೆ. ಹೀಗೆ ಜಲದಿಂದಾದ ತನುವಿನಲ್ಲಿ ತನ್ಮಯವಾದ ಅರಿವಿನ ವೃತ್ತಾಂತವನ್ನು ಡಕ್ಕೆಯ ಬೊಮ್ಮಣ್ಣ ಶರಣರು ವಿವರಿಸಿದ್ದಾರೆ.

□



**ಅರಿವಿನ ಪರಿಮಳ :**

- □ ಜಲದಿಂದ ಆದ ಕೆಸರು ಜಲದಿಂದ ತೊಳೆದು ನಿರ್ಮಲವಾದಂತೆ. ಜಲಬಿಂದುವಿನಿಂದಾದ ರೂಪವೇ ನಿರೂಪವಾಗಿ ಸ್ವರೂಪವಾದಂತೆ !
- □ ಜಲದಿಂದಾದ ಪದಾರ್ಥ ಸೇವಿಸಿ ಹೊರ ಬಂದ ಪದಾರ್ಥವೆ ಮಲ. ಅದು ಜಲವಲ್ಲದೆ ಮಲ ಆಗಲು ಸಾಧ್ಯವೆ?

# ತನುವೆಂಬುದು ಜಲದಿಂದ ಹುಟ್ಟಿದ ಜಾತಿ ಮುತ್ತು

**ಉಪ್ಪಿನ ನೀರಿಂಗೆ ಪುನನಾಮ ಬಪ್ಪುದಲ್ಲದೆ**
**ಮುತ್ತಿನ ನೀರಿಂಗೆ ಪುನನಾಮವುಂಟೇ ?**
**ಪೂರ್ವವನಳಿದು ಪುನರ್ಜಾತನಾದಲ್ಲಿ ಮತ್ತೆ ಲೌಕಿಕವ ಬೆರೆಸಬಹುದೇ ?**
**ರುಂದಿಯ ಫಳದಂತೆ ಸಂದೇಹವಾಯಿತ್ತು.**
**ಭಕ್ತ ಜಂಗಮವಾಗಿ ಮರ್ತ್ಯರು ಎನ್ನವರೆಂದಡೆ**
**ಕರ್ತೃತ್ವ ಭಕ್ತಿಯಿತ್ತಲೇ ಉಳಿಯಿತ್ತು .**
**ಕಾಲಾಂತಕ ಭೀಮಮೇಶ್ವರ ಲಿಂಗನು ಅವರಿಗೆ ಕತ್ತಲೆಯಾಗಿರ್ಪನು**

**-ಡಕ್ಕೆಯ ಬೊಮ್ಮಣ್ಣ ಶರಣರು.**

ತನುವಿನ ಅರಿವು ಬಳಕೆ ಮಾಡಿಕೊಳ್ಳುವುದಕ್ಕಾಗಿಯೇ ಶಾಸ್ತ್ರ ಪುರಾಣ ವೇದ ವೇದಾಂತ ಭಗವದ್ಗೀತೆ ಬೈಬಲ್ ಗ್ರಂಥಗಳು ಹೊರಬಂದವು. ಜಪ ತಪ ಅನುಷ್ಠಾನ ಯೋಗ ನಿರ್ಮಾಣವಾಯಿತು. ಇವೆಲ್ಲವುಗಳು ತನುವಿನಿಂದಲೇ ರಚಿಸಲ್ಪಟ್ಟವು ಎಂದು ತಿಳಿಯದ್ದಕ್ಕಾಗಿ ತನುವಿನಿಂದಲೇ ಪೂಜಿಸಲ್ಪಟ್ಟವು. ಒಂದು ತನುವಿನ ಏಳ್ಗೆಗೆ ಮತ್ತೊಂದು ತನು ವ್ಯವಹಾರಕ್ಕಿಳಿಯಿತು. ತನು ಮತ್ತೊಂದು ತನುವಿನಲ್ಲಿ ಭೇದ ಹುಡುಕಿ ಹೀಯಾಳಿಸಿ ಆನಂದ ಪಟ್ಟಿತು, ದುಃಖಕ್ಕೊಳಗಾಯಿತು. ತನುವಿನಲ್ಲಿರುವ ಶಕ್ತಿ ತನುವಿನಲ್ಲೇ ಉಳಿದು ಕತ್ತಲೆಗೆ ಗುರಿಯಾಯಿತು. ತನುವಿನ ಅರಿವು ತನುವಿಗಾಗಲು ಸರಳ ಸೂತ್ರ ರಚಿಸಿದರು. ಡಕ್ಕೆಯ ಬೊಮ್ಮಣ್ಣ ಶರಣರು.

**ಉಪ್ಪಿನ ನೀರಿಂಗೆ ಪುನನಾಮ ಬಪ್ಪುದಲ್ಲದೆ ಮುತ್ತಿನ ನೀರಿಂಗೆ ಪುನನಾಮವುಂಟೇ ?:**

ಉಪ್ಪಿನ ಜನನ ನೀರಿನಿಂದಲೇ, ಮುತ್ತಿನ ಜನನವೂ ನೀರಿನಿಂದಲೇ,ಮಾಣಿಕ್ಯ ಸ್ಫಟಿಕದ ಜನನವೂ ನೀರಿನಿಂದಲೇ.ಉಪ್ಪು ನೀರಲ್ಲಿ ಹಾಕಿದರೆ ನೀರಾಯಿತು. ಮುತ್ತು ನೀರಲ್ಲಿ ಹಾಕಿದರೆ ಕರಗದೇ ಜನ್ಮ ಕೊಟ್ಟ ಜಲವನ್ನೇ ಹೊಳೆಯುವಂತೆ ಮಾಡಿತು. ಪುನಃ ನೀರಾಗಲಿಲ್ಲ!

**ಪೂರ್ವವನಳಿದು ಪುನರ್ಜಾತನಾದಲ್ಲಿ ಮತ್ತೆ ಲೌಕಿಕವ ಬೆರೆಸಬಹುದೇ ? ರುಂದಿಯ ಫಳದಂತೆ ಸಂದೇಹನಾಮವಾಯಿತ್ತು :**

ಜಲಬಿಂದುವಿನಿಂದಾದ ತನು ಕೂಡಾ ಹೊಳೆಯುವ ಮುತ್ತಿನಂತೆ ಜನ್ಮ ತಳೆದಿದೆ. ಮುತ್ತು ಮತ್ತು ತನುಗಳೆರಡೂ ಪೂರ್ವಾಶ್ರಯದ ಜಲ ಕಳೆದುಕೊಂಡು ಥಳಥಳನೆ ಹೊಳೆಯುತ್ತಲಿವೆ. ಹೀಗೆ ಹೊಳೆಯುವುದು ಬಿಟ್ಟು ಮತ್ತೆ ಉಪ್ಪಿನಂತೆ ಜಲಕ್ಕೆ ಮರಳಬಹುದೆ ?

ತನುವಿಗೆ ಹೆಸರಿಟ್ಟರೇನಾಯಿತು, ಅರಿಯದೇ ಕರೆದ ಸಂದೇಹ ನಾಮವದು. ಗರ್ಭದಿಂದ ಜಾತಿ ಮತ ಪಂಥ ಬಂದರೇನಾಯಿತು? ಜಲದಿಂದ ಹುಟ್ಟಿದ ತನು ಜಾತಿ ಮುತ್ತಲ್ಲದೆ ಬೇರಲ್ಲ.

*'ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು, ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು '*ಜಲದಿಂದ ಹುಟ್ಟಿದ ಮುತ್ತು ಮಾಣಿಕ್ಯ ಸ್ಫಟಿಕ, ಬೆಳಗುವುದರ ಮೂಲಕ ನುಡಿಯುತ್ತವೆ. ಅವು ಎಲ್ಲಿ ಬಿದ್ದರೂ ಬೆಳಗುವುದು ಬಿಡುವುದಿಲ್ಲ. ಹಾಗೆಯೇ ತನು ಕೂಡಾ ಯಾವ ಗರ್ಭದಲ್ಲಿ ಜನಿಸಿದರೂ ಬೆಳಗಬೇಕು.

**ಭಕ್ತ ಜಂಗಮವಾಗಿ ಮರ್ತ್ಯರು ಎನ್ನವರೆಂದಡೆ ಕರ್ತೃತ್ವ ಭಕ್ತಿಯಿತ್ತಲೆ ಉಳಿಯಿತ್ತು ,ಕಾಲಾಂತಕ ಭೀಮೇಶ್ವರ ಲಿಂಗನು ಅವರಿಗೆ ಕತ್ತಲೆಯಾಗಿರ್ಪನು:**

ತನ್ನ ತನುವಿನಲ್ಲಿರುವ ಅರಿವು ತಾನು ಕಂಡುಕೊಳ್ಳುವ ಹಂತದಲ್ಲಿರುವವನೆ ಭಕ್ತ . ತನುವಿನ ಅರಿವು ತಿಳಿದು ಅರಿವು ತಾನಾದವನೆ ಜಂಗಮ, ಜ್ಞಾನಿ. ಅವನು ಉಪ್ಪಿನಂತೆ ನೀರಾಗಲಾರ. ಸದಾ ಮುತ್ತಿನಂತೆ ಬೆಳಗುವನು. ಜಂಗಮನಾದವನಿಗೆ ಅನ್ಯ ತನುಗಳು ಕೂಡಾ ಮುತ್ತಿನಂತೆ ಬೆಳಗುವುದು ಗೋಚರಕ್ಕೆ ಬರುವುದು. ಹತ್ತಿರ ಬಂದ ತನುಗಳಿಗೆ ಬೆಳಗುವ ಸೂತ್ರ ಹೇಳುವನು. ಜ್ಞಾನಿಯನ್ನು ನಿಂದಿಸುವ ತನುಗಳು ಬೆಳಕಿದ್ದೂ ತಿಳಿಯದೇ ಬೆಳಕಿನಿಂದ ಬಹುದೂರವಷ್ಟೆ!

□



---

**ಅರಿವಿನ ಪರಿಮಳ :**

- ಒಂದು ತನುವಿನ ಏಳ್ಗೆಗೆ ಮತ್ತೊಂದು ತನು ವ್ಯವಹಾರಕ್ಕಿಳಿಯಿತು. ತನು ಮತ್ತೊಂದು ತನುವಿನಲ್ಲಿ ಭೇದ ಹುಡುಕಿ ಹೀಯಾಳಿಸಿ ಆನಂದ ಪಟ್ಟಿತು, ದುಃಖಕ್ಕೊಳಗಾಯಿತು. ತನುವಿನಲ್ಲಿರುವ ಶಕ್ತಿ ತನುವಿನಲ್ಲೇ ಉಳಿದು ಕತ್ತಲೆಗೆ ಗುರಿಯಾಯಿತು.
- ಉಪ್ಪಿನ ಜನನ ನೀರಿನಿಂದಲೇ, ಮುತ್ತಿನ ಜನನವೂ ನೀರಿನಿಂದಲೇ,ಮಾಣಿಕ್ಯ ಸ್ಫಟಿಕದ ಜನನವೂ ನೀರಿನಿಂದಲೇ.ಉಪ್ಪು ನೀರಲ್ಲಿ ಹಾಕಿದರೆ ನೀರಾಯಿತು. ಮುತ್ತು ನೀರಲ್ಲಿ ಹಾಕಿದರೆ ಕರಗದೇ ಜನ್ಮ ಕೊಟ್ಟ ಜಲವನ್ನೇ ಹೊಳೆಯುವಂತೆ ಮಾಡಿತು. ಪುನಃ ನೀರಾಗಲಿಲ್ಲ!
- ತನುವಿಗೆ ಹೆಸರಿಟ್ಟರೇನಾಯಿತು, ಅರಿಯದೇ ಕರೆದ ಸಂದೇಹ ನಾಮವದು. ಗರ್ಭದಿಂದ ಜಾತಿ ಮತ ಪಂಥ ಬಂದರೇನಾಯಿತು? ಜಲದಿಂದ ಹುಟ್ಟಿದ ತನು ಜಾತಿ ಮುತ್ತಲ್ಲದೆ ಬೇರಲ್ಲ.
- ತನ್ನ ತನುವಿನಲ್ಲಿರುವ ಅರಿವು ತಾನು ಕಂಡುಕೊಳ್ಳುವ ಹಂತದಲ್ಲಿರುವವನೆ ಭಕ್ತ . ತನುವಿನ ಅರಿವು ತಿಳಿದು ಅರಿವು ತಾನಾದವನೆ ಜಂಗಮ, ಜ್ಞಾನಿ. ಅವನು ಉಪ್ಪಿನಂತೆ ನೀರಾಗಲಾರ. ಸದಾ ಮುತ್ತಿನಂತೆ ಬೆಳಗುವನು.

# ತನುವಿನ ಜ್ಞಾನ ಷಟ್‌ಸ್ಥಲದ ಸೋಪಾನ

**ಇದಿರಿಡುವ ಪೂಜೆ ವಾಗ್ಬ್ರಹ್ಮದ ಷಡುಸ್ಥಲದ ಸೋಪಾನ**
**ಅಡಿಯ ಮೆಚ್ಚಿ ಅಡಿವಿಡಿವನ್ನಕ್ಕ**
**ಗೋಪಿನಾಥ ವಿಶ್ವೇಶ್ವರಲಿಂಗವು ಉಭಯನಾಮವಾಗಿಪ್ಪನು.**
**– ತುರುಗಾಹಿ ರಾಮಣ್ಣ ಶರಣರು**

**ಇದಿರಿಡುವ ಪೂಜೆ ವಾಗ್ಬ್ರಹ್ಮದ ಷಡುಸ್ಥಲದ ಸೋಪಾನ :**

ಕಾಯವೆನ್ನುವುದು ಅರಿವಿನ ಸ್ಥಲ. ಇದಕ್ಕೆ ಶರಣರು ಕರಸ್ಥಲ ಎಂದು ಕರೆದರು.ಜಗದಗಲ ಮುಗಿಲಗಲ ಮಿಗೆಯಗಲ ಪಾತಾಳದಿಂದತ್ತತ್ತ ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀ ಚರಣ, ಅಗಮ್ಯ ಅಗೋಚರ ಅಪ್ರಮಾಣ ಲಿಂಗವು ಎನ್ನಗಲದ ಕರಸ್ಥಲಕ್ಕೆ ಬಂದು ಚುಳುಕಾದಿರಯ್ಯ . ಅಂದರೆ ಗಮನಕ್ಕೂ ಗೋಚರಕ್ಕೂ ಪ್ರಮಾಣಕ್ಕೂ ನಿಲುಕದ ಜಗದಗಲ ಮುಗಿಲಗಲ, ಪಾತಾಳಕ್ಕೂ ನಿಲುಕದ ಅರಿವು ತನುವಿನಲ್ಲಿ ಬಂದು ಡಿಜಿಟಲ್ ಆಗಿದೆ. ಹೊರಗೆ ಕಾಣುವುದೆಲ್ಲ ತನುವಿನಿಂದಲೇ ಪುಸ್ತಕಗಳಲ್ಲಿ ದಾಖಲಿಸಲ್ಪಟ್ಟಿದೆ. ಹಾಗೆಯೇ ತನುವಿನಲ್ಲಿರುವ ಅರಿವು ತಿಳಿದು ಆ ಅರಿವು ಕೂಡಾ ಪುಸ್ತಕಗಳಲ್ಲಿ ದಾಖಲಿಸಲ್ಪಟ್ಟಿದೆ.

ಅರಿವು ತನುವಿನದಾದರೂ ಕೂಡಾ ತನುವಿಗೇ ಮರೆವಾಗಿದೆ. ತನ್ನ ಅರಿವು ತನುವಿನಲ್ಲಿ ತಾನೇ ತಿಳಿಯಲು ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ ಶರಣ, ಐಕ್ಯಸ್ಥಲವೆಂದು ಆರು ಸ್ಥಲಗಳಲ್ಲಿ ವಿಂಗಡಿಸಿ ಬರೆದಿಡಲಾಗಿದೆ. ಇದನ್ನು ಓದಿ ತಿಳಿಯಬಹುದು, ಬಲ್ಲವರಿಂದ ಕೇಳಿಯೂ ತಿಳಿಯಬಹುದಾಗಿದೆ.

ತನುವಿಗೆ ಸೋಪಾನವಾಗಬೇಕಾದ ಆರು ಸ್ಥಲಗಳುಳ್ಳ ಮಾಹಿತಿ ಪುಸ್ತಕಗಳು ಪೂಜೆಗೆ ಒಳಪಟ್ಟವು. ಈ ಕುರಿತು ಹೇಳುವ(ಬ್ರಹ್ಮನ) ಮಾತುಗಳು ಬಾಯಿಗೆ ತುತ್ತಾಗಿ ಭ್ರಮೆಯ ಮಾತಾದವು. ಓದುವ, ಕೇಳುವ , ಬರೆದಿಡುವ, ಹೇಳುವ, ವಾದ ಮಾಡುವ ತನುಗಳು ಸೃಷ್ಟಿಯಾದವು.

ಇದೆಲ್ಲವೂ ತನುವಿನಿಂದಲೇ ಬಂದ ಸಂಪತ್ತಾದರೂ ಪೂಜಿಸಿ, ವಾದಿಸಿ ನುಡಿದು ಹೇಳುವ ತನುವಿಗೆ ತನುವಿನ ಸಂಪತ್ತು ದೂರವಾಯಿತು.

ನೋಡಿ , ಕೇಳಿ, ಮುಟ್ಟಿ, ರುಚಿಸಿ, ವಾಸಿಸಿ, ತಿಳಿದ ತನು ತನ್ನಿಂದಲೇ ಸೃಷ್ಟಿಯಾದದ್ದೆಂದು ತಿಳಿದು ಆಸೆ ಪಡಲಿಲ್ಲ, ಓದಿ ಆನಂದ ಪಟ್ಟು ಪೂಜಿಸಲಿಲ್ಲ, ವ್ಯವಹರಿಸಲಿಲ್ಲ, ಪೀಠ, ಪಲ್ಲಕ್ಕಿ ಏರಲಿಲ್ಲ.

ಉಭಯ ಜ್ಞಾನ ಅಳಿದು ಜ್ಞಾನದಲ್ಲಿ ಉಳಿಯಲು ಷಟ್‌ಸ್ಥಲದ ಸೋಪಾನ ರಚಿಸಲಾಯಿತು.

**ಭಕ್ತ ಸ್ಥಲ :** ತನುವಿನಲ್ಲಿ ಅರಿವಿದೆ. ಆ ಅರಿವೇ ಗುರು. ಆ ಗುರುವಿಗೆ ಭಕ್ತಿ ಮಾಡುವುದು, ಅರಿವು ಹೇಳಿದಂತೆ ಕೇಳುವುದು, ತನುವಿನಲ್ಲಿಯ ಅರಿವನ್ನು ಸೂಚಿಸಿ ಅರಿವು ಹೇಳಿದ ಮಾರ್ಗದಲ್ಲಿ ನಡೆಯುವಂತೆ ಪ್ರೇರೇಪಿಸುವ ಮಹಾನುಭಾವನೇ ದೀಕ್ಷಾ ಗುರು. ತನುವಿನ ಅರಿವಿಗೆ ಭಕ್ತಿ ಮಾಡುವವನೇ ಭಕ್ತ. ಇದು ಭಕ್ತ ಸ್ಥಲ.

**ಮಾಹೇಶ್ವರ ಸ್ಥಲ :** ಮನದಿಂದ ಉಂಟಾಗುವ ಅಜ್ಞಾನವನ್ನು ಅರಿವಿನ ವೀರತ್ವದಿಂದ ಕಡಿದು ಛಲದಿಂದ ಅರಿವಿನಿಂದ ನಡೆಯುವುದೇ ಮಾಹೇಶ್ವರ ಸ್ಥಲ.

**ಪ್ರಸಾದಿ ಸ್ಥಲ :** ಅರಿವು ಹೇಳುವುದನ್ನು ಮಾತ್ರ ತನುವಿನಿಂದ ಭೋಗಿಸುವುದು ಉದಾ : ಸೆರೆಯ ರುಚಿಗಾಗಿ ಸೋತ ಮನ ತನುವಿಗೆ ಕುಡಿಸಿ ಆನಂದ ಪಡುತ್ತದೆ. ಅರಿವು ಅಡ್ಡಿ ಪಡಿಸುತ್ತದೆ. ಮನದ ಬಲ ಹೆಚ್ಚಾದರೆ ತನುವಿಗೆ ಸೆರೆಯ ಪ್ರಸಾದ. ಅರಿವಿನ ಬಲ ಹೆಚ್ಚಾದರೆ ತನುವಿಗೆ ಅರಿವಿನ ಪ್ರಸಾದ ! ಅರಿವು ಸೆರೆಯನ್ನು, ಅದರ ಮೂಲವನ್ನು, ಅದರಿಂದುಂಟಾಗುವ ದುಷ್ಪರಿಣಾಮವನ್ನು ಗಮನಿಸಿ ಅದರ ಸಂಪೂರ್ಣ ಮಾಹಿತಿಯನ್ನು ಮನಕ್ಕೆ ಮನದಟ್ಟು ಮಾಡಿ ತನ್ನ ಸ್ವಾಧೀನಕ್ಕೆ ತೆಗೆದುಕೊಳ್ಳುತ್ತದೆ. ತನುವನ್ನು (ಪ್ರಸಾದಿ) ಅರಿವಿನ ತನುವನ್ನಾಗಿ ಮಾಡುತ್ತದೆ.

**ಪ್ರಾಣ ಲಿಂಗಿಸ್ಥಲ :** ತನುವಿನಲ್ಲಿ, ತನುವಿನ ಪ್ರಾಣದಲ್ಲಿ ಅರಿವೇ ಬೆರೆತಿದೆ. ತನುವಿದ್ದೂ ಅರಿವು ಬಳಕೆಯಾಗದಿದ್ದರೆ ಪ್ರಾಣವಿದ್ದರೂ ವ್ಯರ್ಥ. ಭ್ರಷ್ಟ ಹಾದರಿಗ ವಿಷಯ ಲಂಪಟ ಕಳ್ಳ ಜಿಪುಣ ದಾನಿ ಹೆಣ್ಣ ಗಂಡು ಮಠಾಧಿಪತಿ ಪೀಠಾಧಿಪತಿ ಧರ್ಮಗುರು ಜಗದ್ಗುರು ರಾಜಕಾರಣಿ ಅಧಿಕಾರಿ ಎಂದು ಗುರುತಿಸಿಕೊಂಡು ತನು ಪ್ರಾಣ ಕಳೆದುಕೊಳ್ಳುತ್ತದೆ. ಸಿದ್ಧಾರ್ಥ ರಾಜನಾಗಿದ್ದರೆ ವ್ಯರ್ಥ ಪ್ರಾಣ ಕಳೆದುಕೊಳ್ಳುತ್ತಿದ್ದ . ಪ್ರಾಣದ ಅರಿವು ಪರಿಚಯವಾಗಿ ಸಿದ್ಧಾರ್ಥ ಸತ್ತು ಬುದ್ಧನಾದ! ಪ್ರಾಣಲಿಂಗಿಯಾದ ! ಅಂಗುಲಿ ಮಾಲನ ಪ್ರಾಣ ಕಳೆದು ಬುದ್ಧನಾಗಿಸಿದ.

**ಶರಣಸ್ಥಲ :** ತನುವಿನ ಅರಿವಿಗೆ ಮನ ಶರಣು ಹೋಗುವುದೇ ಶರಣಸ್ಥಲ. ಮನ ಆಭರಣ ನೋಡಿ ಖರೀದಿ ಮಾಡುವುದಕ್ಕೆ ಕಳುವು ಮಾಡುವುದಕ್ಕೆ ತನುವನ್ನು ಪ್ರೇರೇಪಿಸುತ್ತದೆ. ಶ್ರೀಮಂತ, ಕಳ್ಳ ಎನ್ನುವ ಹಣೆಪಟ್ಟಿ ತನುವಿಗೆ ಕಟ್ಟುತ್ತದೆ. ಆಭರಣ ನೋಡುವ ಮನ ಅರಿವಿಗೆ ಶರಣು ಹೋದರೆ , ಅರಿವು ಆಭರಣದಲ್ಲಿರುವ ಡಿಸೈನ್,ಬಣ್ಣ, ಲೋಹ ನೋಡಿ ಕದಿಯುವುದಿಲ್ಲ, ಖರೀದಿಸುವುದಿಲ್ಲ. ಅದನ್ನು ಮುಟ್ಟುವುದೂ ಇಲ್ಲ.ಮನ ಅರಿವಿಗೆ ಶರಣು ಹೋದರೆ ಅರಿವು ತನುವನ್ನು ಶರಣನನ್ನಾಗಿಸಿತು, ಮನವನ್ನು ಘನ ಮನವನ್ನಾಗಿಸಿತು. ಇದೇ ಶರಣಸ್ಥಲ !

**ಐಕ್ಯ ಸ್ಥಲ :** ತನುವಿನ ಅರಿವನ್ನು ಮನದಿಂದ ತಿಳಿದು, ಆ ಮನವನ್ನು ಅರಿವಿನಲ್ಲಿ ಐಕ್ಯಗೊಳಿಸುವುದು, ಆ ಅರಿವೇ ತಾನಾಗುವುದು. ನೋಡಿದ್ದೆಲ್ಲ ಅರಿವೇ, ಕೇಳಿದ್ದೆಲ್ಲ ಅರಿವೆ, ಮುಟ್ಟಿದ್ದೆಲ್ಲ ಅರಿವೇ, ವಾಸಿಸಿದ್ದು, ರುಚಿಸಿದ್ದೆಲ್ಲ ಅರಿವೆ.

ಹೀಗೆ ಒಂದು ತನುವಿನಲ್ಲಿ ಆರು ಸ್ಥಲಗಳನ್ನು ತಿಳಿಯುತ್ತಾನೆ. ಆ ಆರೂ ಸ್ಥಲಗಳನ್ನು ಅಳಿದು ಅರಿವೆಂಬ ಗುರುದೇವ, ಮಹಾದೇವ, ಸದಾಶಿವನಾಗುತ್ತಾನೆ. ಸಾಕ್ಷಾತ್ ಪರಬ್ರಹ್ಮನೇ ತಾನಾಗುತ್ತಾನೆ. ಗೋಪಿನಾಥ ವಿಶ್ವೇಶ್ವರಲಿಂಗವೇ ತಾನಾಗುತ್ತಾನೆ.

□

---

**ಅರಿವಿನ ಪರಿಮಳ :**

- □ ಕಾಯವೆನ್ನುವುದು ಅರಿವಿನ ಸ್ಥಲ. ಇದಕ್ಕೆ ಶರಣರು ಕರಸ್ಥಲ ಎಂದು ಕರೆದರು.
- □ ಅರಿವು ತನುವಿನದಾದರೂ ಕೂಡಾ ತನುವಿಗೇ ಮರೆವಾಗಿದೆ. ತನ್ನ ಅರಿವು ತನುವಿನಲ್ಲಿ ತಾನೇ ತಿಳಿಯಲು ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ ಶರಣ, ಐಕ್ಯಸ್ಥಲವೆಂದು ಆರು ಸ್ಥಲಗಳಲ್ಲಿ ವಿಂಗಡಿಸಿ ಬರೆದಿಡಲಾಗಿದೆ. ಇದನ್ನು ಓದಿ ತಿಳಿಯಬಹುದು , ಬಲ್ಲವರಿಂದ ಕೇಳಿಯೂ ತಿಳಿಯಬಹುದಾಗಿದೆ.
- □ ತನುವಿಗೆ ಸೋಪಾನವಾಗಬೇಕಾದ ಆರು ಸ್ಥಲಗಳುಳ್ಳ ಮಾಹಿತಿ ಪುಸ್ತಕಗಳು ಪೂಜೆಗೆ ಒಳಪಟ್ಟವು. ಈ ಕುರಿತು ಹೇಳುವ(ಬ್ರಹ್ಮನ) ಮಾತುಗಳು ಬಾಯಿಗೆ ತುತ್ತಾಗಿ ಭ್ರಮೆಯ ಮಾತಾದವು. ಓದುವ, ಕೇಳುವ , ಬರೆದಿಡುವ, ಹೇಳುವ, ವಾದ ಮಾಡುವ ತನುಗಳು ಸೃಷ್ಟಿಯಾದವು.
- □ ನೋಡಿ , ಕೇಳಿ, ಮುಟ್ಟಿ, ರುಚಿಸಿ, ವಾಸಿಸಿ, ತಿಳಿದ ತನು ತನ್ನಿಂದಲೇ ಸೃಷ್ಟಿಯಾದದ್ದೆಂದು ತಿಳಿದು ಆಸೆ ಪಡಲಿಲ್ಲ, ಓದಿ ಆನಂದ ಪಟ್ಟು ಪೂಜಿಸಲಿಲ್ಲ, ವ್ಯವಹರಿಸಲಿಲ್ಲ, ಪೀಠ, ಪಲ್ಲಕ್ಕಿ ಏರಲಿಲ್ಲ.

# ಜ್ಞಾನ ಕಂಡು ಶಾಂತವಾದ ಮನ

**ಅಯ್ಯಾ ಅನಂತ ಭವಂಗಳಲ್ಲಿ ಬಂದು ನಾನು ಶಾಂತನಾದೆ**
**ಅಯ್ಯಾ, ನಿನ್ನ ಪ್ರಸಾದವ ನಾನಾ ಭವಂಗಳಲ್ಲಿ ಕಾಣೆ ತಂದೆ**
**ನಿನ್ನ ಪಾದೋದಕವ ನಾನಾ ಭವಂಗಳಲ್ಲಿ ಕಾಣೆ ತಂದೆ**
**ಇನ್ನು ನೀಂ ಕರುಣಿಸಾ ತಂದೆ, ಕಪಿಲೆಯ ಕಂದನಂತಾದೆನಯ್ಯಾ**

**-ಸಿದ್ಧರಾಮ ಶಿವಯೋಗಿ**

**ಅಯ್ಯಾ ಅನಂತ ಭವಂಗಳಲ್ಲಿ ಬಂದು ನಾನು ಶಾಂತನಾದೆ:**

ಅನಂತ ಜನ್ಮದೊಂದಿಗೆ ಮನ ಬರುತ್ತದೆ. ಮನ ಹೋದಡೆಯಲ್ಲೆಲ್ಲಾ ತನು ಸುಳಿಯುತ್ತದೆ. ಜ್ಞಾನ ಬಳಕೆಯಾಗದೆ ತನುವಿನಲ್ಲಿ ಹಾಗೇ ಉಳಿಯುತ್ತದೆ. ಮನ ತನುವನ್ನು ಬಳಕೆಮಾಡಿಕೊಂಡು ತನ್ನ ಸುಖಕ್ಕೆ ಹಾತೊರೆಯುತ್ತದೆ. ಮನ ನೆಟ್ಟ ಪದಾರ್ಥ ಸಿಕ್ಕರೆ ಕ್ಷಣಿಕ ಸುಖ, ಸಿಗದಿದ್ದರೆ ದುಃಖ, ಮನದ ಹಾದರ ತಿಳಿಯುವುದೇ ಇಲ್ಲ. ತನುವಿನ ನಿಂದೆ ನಿಲ್ಲುವುದೇ ಇಲ್ಲ. ''ಸುಖವನರಿಯದ ಹೆಣ್ಣು ಸೂಳೆಯಾದಳು'' ಎಂದು ಬಸವಣ್ಣನವರು ಮನಕ್ಕೆ ನಿಂದಿಸಿದರು.

ಮನಕ್ಕೆ ವಸ್ತು ಮಾತ್ರ ತಿಳಿಯುತ್ತದೆ. ಅದನ್ನು ಹಗಲಿರುಳು ದುಡಿದು ಅಥವಾ ಕಳುವಿನಿಂದ ಪಡೆಯಲು ದೇಹಕ್ಕೆ ಆದೇಶ ನೀಡುತ್ತದೆ. ಅದು ದೊರೆತ ಮರುಕ್ಷಣವೇ ಮತ್ತೊಂದಕ್ಕೆಳೆಸುತ್ತದೆ. ಹೀಗೆ ತನುವಿರುವವರೆಗೆ ನಿರಂತರ ಕ್ಷಣಿಕ ಸುಖ ದುಃಖಗಳನ್ನು ಮನ ಅನುಭವಿಸುತ್ತದೆ. ಶಾಶ್ವತ ಸುಖದ ಪರಿಚಯ ಮನಕ್ಕೆ ಹೊಳೆಯುವುದಿಲ್ಲ. ಹೀಗೆ ಅನಂತ ಭವಂಗಳಲ್ಲಿ ಬಂದು ಹೊರನೋಡುವ ಮನದ ಚಿತ್ತ ಜ್ಞಾನದೊಳಗೆ ನೆಟ್ಟರೆ ಹುರಿದ ಬೀಜದಂತಾಗಿ ಮತ್ತೆ ಹುಟ್ಟಿಲ್ಲದೆ ಶಾಂತನಾಗುತ್ತಾನೆ.

ಹುಟ್ಟಿದಂದಿನಿಂದ ಸಾಯುವವರೆಗೆ ಬರೀ ಸುಖ ದುಃಖಗಳೇ. ನಿಶ್ಚಿಂತದ ಮಾತೇ ಇಲ್ಲ. ಒಮ್ಮೆ ಶಬ್ದದಿಂದ ಸುಖ, ಮತ್ತೊಮ್ಮೆ ದುಃಖ, ಒಮ್ಮೆ ಸ್ಪರ್ಶದಿಂದ ಸುಖ ಮತ್ತೊಮ್ಮೆ ದುಃಖ. ಹೀಗೆ ಶಬ್ದ, ಸ್ಪರ್ಶ, ವಾಸನೆ,ರೂಪ, ರುಚಿಯಿಂದ ಸುಖ-ದುಃಖಗಳುಂಟಾಗುತ್ತವೆ. ಜ್ಞಾನದ ಸುಖ ನಾನಾ ಭವಂಗಳಲ್ಲಿ ಕಾಣುವುದಿಲ್ಲ.ಇನ್ನು ನಿನ್ನ ಕಂಡ ಬಳಿಕ ನೀನೇ ಆ ಶಾಶ್ವತ ಸುಖದ ದಾರಿಯನ್ನು ತೋರಿಸು ತಂದೆ, ನೀನು ತೋರಿದಂತೆ ನಾನು ನಡೆಯುವೆ ಎಂದು ಸಿದ್ಧರಾಮ ಶಿವಯೋಗಿಗಳು ತನುವಿನ ಕಣ ಕಣದಲ್ಲಿ ಬೆರೆತ ಅರಿವಿನ ತಂದೆಯನ್ನು ಪ್ರಾರ್ಥಿಸಿದ್ದಾರೆ.

□

---

**ಅರಿವಿನ ಪರಿಮಳ :**

- □ ಮನ ನೆಟ್ಟ ಪದಾರ್ಥ ಸಿಕ್ಕರೆ ಕ್ಷಣಿಕ ಸುಖ, ಸಿಗದಿದ್ದರೆ ದುಃಖ, ಮನದ ಹಾದರ ತಿಳಿಯುವುದೇ ಇಲ್ಲ.
- □ ಅನಂತ ಭವಂಗಳಲ್ಲಿ ಬಂದು ಹೊರನೋಡುವ ಮನದ ಚಿತ್ತ ಜ್ಞಾನದೊಳಗೆ ನೆಟ್ಟರೆ ಹುರಿದ ಬೀಜದಂತಾಗಿ ಮತ್ತೆ ಹುಟ್ಟಿಲ್ಲದೆ ಶಾಂತನಾಗುತ್ತಾನೆ.

# ಜ್ಞಾನಿಗೆ ಕೋಟಿ ಬ್ರಹ್ಮಾಂಡಗಳು ಕಾಕೆಯ ಹಣ್ಣಿಗೆ ಸಮ

**ಬ್ರಹ್ಮಾಂಡ ಕೋಟಿಗಳುರುಳಿ ಬೀಳುವಲ್ಲಿ**
**ಕಾಕೆಯ ಹಣ್ಣೆಂದು ಒಬ್ಬ ಮೆಲಿದನಾ ಶರಣನು.**
**ಮುಗಿಲ ಮುಟ್ಟುವವನ ಉದ್ದವ ನೋಡಿರೆ !**
**ಗಗನವ ನುಂಗುವವನ ಬಾಯಗಲವ ನೋಡಿರೆ !! ಎಂಬಂತೆ**
**ಇಂತಪ್ಪ ಶರಣರು ತೆಲುಗೇಶ್ವರಾ ನಿಮ್ಮವರು**
**-ತೆಲುಗೇಶ ಮಸಣಯ್ಯ ಶರಣರು**

**ಬ್ರಹ್ಮಾಂಡ ಕೋಟಿಗಳುರುಳಿ ಬೀಳುವಲ್ಲಿ ಕಾಕೆಯ ಹಣ್ಣೆಂದು ಒಬ್ಬ ಮೆಲಿದನಾ ಶರಣನು :**

ತನುವಿನಿಂದ ಎಲ್ಲವನ್ನು ನೋಡಬಹುದು, ಕೇಳಬಹುದು, ಮುಟ್ಟಬಹುದು, ರುಚಿಸಬಹುದು, ವಾಸಿಸಬಹುದು. ಆದರೆ ತನುವಿನ ಜ್ಞಾನವನ್ನು ನೋಡುವುದು, ಬಳಕೆ ಮಾಡಿಕೊಳ್ಳುವುದು ಸುಲಭದ ಮಾತಲ್ಲ. ಅದು ಬ್ರಹ್ಮಾಂಡದಿಂದತ್ತತ್ತ ಪಾತಾಳದಿಂದತ್ತತ್ತ ಗಮನಕ್ಕೂ ಗೋಚರಕ್ಕೂ ಪ್ರಮಾಣಕ್ಕೂ ನಿಲುಕದ ಸತ್ಯವಸ್ತುವು ತನುವಿನಗಲಕ್ಕೆ ಬಂದು ಚುಳುಕಾದುದನ್ನು ನೋಡಿಕೊಳ್ಳುವುದು ಕಷ್ಟಸಾಧ್ಯ! ಶರಣರಿಗೆ ಮಾತ್ರ ಸಾಧ್ಯ. ಪ್ರಯತ್ನ ಪಟ್ಟರೆ ಸರ್ವರಿಗೂ ಸಾಧ್ಯ!!

'ಕೋಟಿ ಸೂರ್ಯಂ ಸಮಪ್ರಭಾ' ತನುವಿನ ಜ್ಞಾನ ಕೋಟಿ ಸೂರ್ಯನ ಬೆಳಕಿಗೆ ಸಮಾನವಾದದ್ದು. ಒಂದು ಕೋಟಿ ಬ್ರಹ್ಮಾಂಡಗಳುರುಳಿ ಬಿದ್ದರೆ ತನುವಿನ ಜ್ಞಾನಕ್ಕೆ ಒಂದು ಬಸರೆಯ ಹಣ್ಣಿನ ಸಮ ಎಂದಿದ್ದಾರೆ ತೆಲುಗೇಶ ಮಸಣಯ್ಯ ಶರಣರು.

ತನುವಿನ ಜನನ ಬಯಲು, ಭೂಮಿ, ನೀರು, ಗಾಳಿ, ಬೆಂಕಿ ಎಂಬ ಪಂಚ ಭೂತಗಳಿಂದಾಯಿತು. ಭೂಮಿ ಬಿರಿದು ಲಾವಾರಸ ಉಕ್ಕಿ ಹರಿದರೂ ಬಯಲಿಗೆ ಕಿಂಚಿತ್ತು ನೋವಿಲ್ಲ. ಬೆಂಕಿ ಹತ್ತಿ ಉರಿದಾಗ, ಜಲಪ್ರಳಯವಾದಾಗ , ಚಂಡ ಮಾರುತಗಳು ಬೀಸಿದಾಗ ಬಯಲಿಗೆ ಕಿಂಚಿತ್ತೂ ನೋವಿಲ್ಲ. ಈ ನಾಲ್ಕು ಭೂತಗಳು ಹಾಗೂ ಸೂರ್ಯ, ಚಂದ್ರ, ನಕ್ಷತ್ರಗಳು ಬಯಲಿನ ಗರ್ಭದಲ್ಲಿಯೆ ಇವೆ. ಈ ಬಯಲ ಗರ್ಭದಲ್ಲಿರುವ ಬ್ರಹ್ಮಾಂಡಗಳೆಲ್ಲ ಉರುಳಿ ಬಿದ್ದರೆ ಕಾಕೆ (ಬಸರೆ)ಯ ಹಣ್ಣಿನಂತೆ ಆ ಬಯಲೇ ಸ್ವೀಕರಿಸುತ್ತದೆ.

ತನುವಿನಲ್ಲಿ ಬಯಲು ಜ್ಞಾನವಾಗಿ ಕಾರ್ಯ ನಿರ್ವಹಿಸುತ್ತದೆ. ಗಾಳಿ ಮನವಾಗಿ ಕಾರ್ಯ ನಿರ್ವಹಿಸುತ್ತದೆ. ನೀರು ಬೆಂಕಿ ಭೂಮಿ ತನುವಿನಲ್ಲಿ ಗಟ್ಟಿಗೊಂಡು ತನುವಾಗಿ ಕಾರ್ಯ ನಿರ್ವಹಿಸುತ್ತವೆ. ಗಾಳಿ ಬೆಂಕಿ ನೀರು ಭೂಮಿಗೆ ಚಲನೆಯಿದೆ. ಬಯಲಿಗೆ ಚಲನೆಯಿಲ್ಲ. ಇವುಗಳ ಚಲನೆಯೆಲ್ಲ ಬಯಲ ಗರ್ಭದಲ್ಲಿಯೇ. ಬಯಲನ್ನು ಬಿಟ್ಟು ಯಾವ ಭೂತಗಳೂ ವಾಸಿಸಲರಿಯವು. ಐದು ಭೂತಗಳಿಂದ ತನು ನಿರ್ಮಾಣ ವಾದರೂ ನಾಲ್ಕು ಭೂತಗಳು ಬಯಲನರಿಯದ ಕಾರಣ ತನು ಬೆಂಕಿಯಂತೆ ಸುಡುತ್ತದೆ. ಭೂಮಿಯಂತೆ ಬಿರಿಯುತ್ತದೆ. ಗಾಳಿಗೆ ನಲುಗುತ್ತದೆ. ನೀರಿನ ರಭಸಕ್ಕೆ ತತ್ತರಿಸುತ್ತದೆ. ಶಬ್ದ ಸ್ಪರ್ಶ ರೂಪ ವಾಸನೆ ರುಚಿಗಾಗಿ ಒಮ್ಮೆ ಸುಖಿಸುತ್ತದೆ ಮತ್ತೊಮ್ಮೆ ದುಃಖಿಸುತ್ತದೆ. ಮನ ತನುವಿಗೆ ಕಾರಣವಾದ ಬಯಲ(ಜ್ಞಾನ)ನರಿತು ಅದಕ್ಕೆ ಶರಣು ಹೋದರೆ ಆ ಮನದ ತನುವೇ ಶರಣ (ಜ್ಞಾನ) ತನುವೆಂದು ಕರೆಯಿಸಿಕೊಳ್ಳುತ್ತದೆ. ಆಗ ಆ ಶರಣನಿಗೆ ಉಳಿದ ನಾಲ್ಕು

ಭೂತಗಳೆಲ್ಲ ಕಾಕೆಯ ಹಣ್ಣಿನಂತೆ. ಕೋಟಿ ಬಾರಿ ಬ್ರಹ್ಮಾಂಡಗಳುರುಳಿದರೂ ಆ ಬಯಲಲ್ಲಿ ಬಯಲಾಗಿ ಆ ಬಯಲೇ ಆದ ಮಹಾಜ್ಞಾನಿ ಶರಣನೊಬ್ಬ ಒಂದು ಕಾಕೆಯ ಹಣ್ಣಿನಂತೆ ಮೆಲ್ಲು ತ್ತಾನೆ.

**ಮುಗಿಲ ಮುಟ್ಟುವವನ ಉದ್ದವ ನೋಡಿರೆ ! ಗಗನವ ನುಂಗುವವನ ಬಾಯಗಲವ ನೋಡಿರೆ !! ಎಂಬಂತೆ ಇಂತಪ್ಪ ಶರಣರು ತೆಲುಗೇಶ್ವರಾ ನಿಮ್ಮವರು :**

ಬಯಲು ಜಗದಗಲ ಮುಗಿಲಗಲ. ಪಾತಾಳದಿಂದತ್ತತ್ತ.ಬ್ರಹ್ಮಾಂಡವೆಲ್ಲ ಬಯಲಗರ್ಭದೊಳಗಡೆಯೇ ಇರುವಾಗ,ಗಗನವೂ ಬಯಲ ಬಾಯೊಳಗೆ; ಭೂಮಿ, ಗಾಳಿ, ಬೆಂಕಿ, ನೀರು ಕೂಡಾ ಬಯಲ (ಶರಣನ) ಬಾಯೊಳಗೆ. ಶರಣ ವಿರಾಟ ಸ್ವರೂಪಿ ! ಶ್ರೀಕೃಷ್ಣ ತನ್ನ ತನುವಿನೊಳಗೆ ಸಕಲ ಬ್ರಹ್ಮಾಂಡವನ್ನು ತೋರಿಸಿ ವಿರಾಟ ಸ್ವರೂಪವನ್ನು ಮೆರೆದಂತೆ. ಇದು ಶ್ರೀಕೃಷ್ಣನಿಗೆ ಮಾತ್ರ ಸಾಧ್ಯ ವೆಂದಂತಲ್ಲ; ತಿಳಿದರೆ ಭೂಮಿಯ ಮೇಲೆ ವಾಸಿಸುವ ಸಕಲ ಮನುಕುಲಕ್ಕೂ ಸಾಧ್ಯ ! ಎಂದು ತೆಲುಗೇಶ ಮಸಣಯ್ಯ ಶರಣರು ನುಡಿದಿದ್ದಾರೆ. ತನುವಿನ ಜ್ಞಾನವನ್ನು ಬಳಕೆ ಮಾಡಿಕೊಳ್ಳಬೇಕಷ್ಟೆ.

□

**ಅರಿವಿನ ಪರಿಮಳ :**

- □ 'ಕೋಟಿ ಸೂರ್ಯಂ ಸಮಪ್ರಭಾ' ತನುವಿನ ಜ್ಞಾನ ಕೋಟಿ ಸೂರ್ಯನ ಬೆಳಕಿಗೆ ಸಮಾನವಾದದ್ದು. ಒಂದು ಕೋಟಿ ಬ್ರಹ್ಮಾಂಡಗಳುರುಳಿ ಬಿದ್ದರೆ ತನುವಿನ ಜ್ಞಾನಕ್ಕೆ ಒಂದು ಬಸರೆಯ ಹಣ್ಣಿನ ಸಮ ಎಂದಿದ್ದಾರೆ ತೆಲುಗೇಶ ಮಸಣಯ್ಯ ಶರಣರು.
- □ ಐದು ಭೂತಗಳಿಂದ ತನು ನಿರ್ಮಾಣ ವಾದರೂ ನಾಲ್ಕು ಭೂತಗಳು ಬಯಲನರಿಯದ ಕಾರಣ ತನು ಬೆಂಕಿಯಂತೆ ಸುಡುತ್ತದೆ. ಭೂಮಿಯಂತೆ ಬಿರಿಯುತ್ತದೆ. ಗಾಳಿಗೆ ನಲುಗುತ್ತದೆ. ನೀರಿನ ರಭಸಕ್ಕೆ ತತ್ತರಿಸುತ್ತದೆ. ಶಬ್ದ ಸ್ಪರ್ಶ ರೂಪ ವಾಸನೆ ರುಚಿಗಾಗಿ ಒಮ್ಮೆ ಸುಖಿಸುತ್ತದೆ ಮತ್ತೊಮ್ಮೆ ದುಃಖಿಸುತ್ತದೆ. ಮನ ತನುವಿಗೆ ಕಾರಣವಾದ ಬಯಲ(ಜ್ಞಾನ)ನರಿತು ಅದಕ್ಕೆ ಶರಣು ಹೋದರೆ ಆ ಮನದ ತನುವೇ ಶರಣ (ಜ್ಞಾನ) ತನುವೆಂದು ಕರೆಯಿಸಿಕೊಳ್ಳುತ್ತದೆ. ಆಗ ಆ ಶರಣನಿಗೆ ಉಳಿದ ನಾಲ್ಕು ಭೂತಗಳೆಲ್ಲ ಕಾಕೆಯ ಹಣ್ಣಿನಂತೆ.
- □ ಬ್ರಹ್ಮಾಂಡವೆಲ್ಲ ಬಯಲಗರ್ಭದೊಳಗಡೆಯೇ ಇರುವಾಗ,ಗಗನವೂ ಬಯಲ ಬಾಯೊಳಗೆ; ಭೂಮಿ, ಗಾಳಿ, ಬೆಂಕಿ, ನೀರು ಕೂಡಾ ಬಯಲ (ಶರಣನ) ಬಾಯೊಳಗೆ. ಶರಣ ವಿರಾಟ ಸ್ವರೂಪಿ ! ಶ್ರೀಕೃಷ್ಣ ತನ್ನ ತನುವಿನೊಳಗೆ ಸಕಲ ಬ್ರಹ್ಮಾಂಡವನ್ನು ತೋರಿಸಿ ವಿರಾಟ ಸ್ವರೂಪವನ್ನು ಮೆರೆದಂತೆ. ಇದು ಶ್ರೀಕೃಷ್ಣನಿಗೆ ಮಾತ್ರ ಸಾಧ್ಯವೆಂದಂತಲ್ಲ; ತಿಳಿದರೆ ಭೂಮಿಯ ಮೇಲೆ ವಾಸಿಸುವ ಸಕಲ ಮನುಕುಲಕ್ಕೂ ಸಾಧ್ಯ !

# ಅರಿವೆಂಬುದು ತನುವಿನ ಒಡವೆ

ಉದುರಿ ಬೀಳುವನ್ನಕ್ಕ ನಿನ್ನ ಹಂಗು
ಉದುರಿ ಬಿದ್ದಲ್ಲಿ ಎನ್ನೊಡವೆ
ನಾ ಪೂಜಿಸದನ್ನಕ್ಕ ದೇವ
ಎನ್ನ ಪೂಜೆಗೊಳಗಾದಲ್ಲಿ ನೀ ಭಕ್ತ, ನಾ ನಿತ್ಯ.
ಇಂತೀ ಸರ್ವರ ದಯವಸ್ತು ಬೀಜವಲ್ಲಾ
ಸರ್ವರ ಮಲತ್ರಯ ದೂರ, ಸರ್ವಾಂಗ ಸಂತೋಷ ನಿಗರ್ವಿ
ದಸರೇಶ್ವರ ಲಿಂಗವು ತಥ್ಯಮಿಥ್ಯದವನಲ್ಲಾ.

– ದಸರಯ್ಯ ಶರಣರು

**ಉದುರಿ ಬೀಳುವನ್ನಕ್ಕ ನಿನ್ನ ಹಂಗು ಉದುರಿ ಬಿದ್ದಲ್ಲಿ ಎನ್ನೊಡವೆ:**

ತಾಯಿ ಗರ್ಭ ಸೇರಿದ ಅರಿವಿನ ಬೀಜ ರಕ್ತ ಮಾಂಸ ಮಜ್ಜೆ, ಮೇದಸ್ಸು ಚರ್ಮದ ಕವಚ ದಲ್ಲಿ ಬಂಧಿಸಿಕೊಂಡು ಅರಿವಿನ ಅಂಕುರದೊಂದಿಗೆ ಹೊರ ಬಂದು ಅರಿವುಳ್ಳ ಎಲುಬಿನ ಮರವಾಗಿ ಬೆಳೆದಿದೆ. ಈ ತನುವಿನಲ್ಲಿ ಮರೆವು ಎಂಬ ಮನವೂ ಸೇರಿದೆ.

ಎಂದೋ ನುಡಿದು ಕೇಳಿಸಿಕೊಂಡ ಬಿರುನುಡಿಗಳ ಶಬ್ದ, ಎಂದೋ ಮಾಡಿದ ಕೊಲೆ, ಅತ್ಯಾಚಾರ,ಹಾದರ;ಶ್ರೀಮಂತಿಕೆ ಬಡನತನ,ಅಧಿಕಾರ ಪಾಂಡಿತ್ಯಗಳು ತನುವಿನಲ್ಲಿ ಸಂಗ್ರಹವಾಗಿ, ನೆನಪಾದಾಗೊಮ್ಮೆ ನರಕ ಯಾತನೆ ಅನುಭವಿಸುತ್ತದೆ. ಸೇಡು ತೀರಿಸಿಕೊಳ್ಳಲು ಹವಣಿಸುತ್ತದೆ. ಇಲ್ಲ ಆತ್ಮಹತ್ಯೆಗೆ ಎಳೆಸುತ್ತದೆ. ಮನುಷ್ಯ ಜ್ಞಾನಿ ಎನ್ನಿಸಿಕೊಂಡರೂ ತನುವಿನಲ್ಲಿ ಸಂಗ್ರಹವಾದ ದುಃಖ ದುಗುಡ- ಭಯವನ್ನು ಅಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಈ ಶಿಕ್ಷಣ ಶಾಲಾ ಕಾಲೇಜುಗಳಲ್ಲಿ ಮಠ ಚರ್ಚ್‌ಗಳಲ್ಲಿ ಇಲ್ಲದ ನಿಮಿತ್ತ ಅವು ಕಲಿಸುವ ಧರ್ಮ ಶಿಕ್ಷಣದಿಂದ ತನು ಮತ್ತಷ್ಟು ರೋಗಗ್ರಸ್ತವಾಗಿ ಇಕ್ಕಟ್ಟಿಗೆ ಸಿಲುಕಿದೆ.

ದಸರಯ್ಯ ಶರಣರು ತನುವಿನಲ್ಲಿ ಸಂಗ್ರಹವಾದ ಅಜ್ಞಾನವನ್ನು ಉದುರಿಸುವ ಕಲೆ ಸೂತ್ರ ರೂಪದಲ್ಲಿ ಕರುಣಿಸಿದ್ದಾರೆ.

ತನುವನ್ನು ಬದಿಗಿಟ್ಟು, ಮನವನ್ನು ತನ್ನ ತೆಕ್ಕೆಗೆ ತಂದು, ಆ ಮನದಿಂದ ಅರಿವೆಂಬ ಗುರು ವಿನೊಂದಿಗೆ ಸಂಭಾಷಣೆ ನಡೆಸಿದ್ದಾರೆ.

ನಾನು ಅಜ್ಞಾನಿ. ನನ್ನಂತೆ ಇರುವ ತನುವನ್ನು ದ್ವೇಷಿಸುತ್ತೇನೆ. ಆರಾಧಿಸುತ್ತೇನೆ. ಪ್ರೀತಿಸು ತ್ತೇನೆ. ಕೊಲ್ಲುತ್ತೇನೆ. ಅತ್ಯಾಚಾರವೆಸಗುತ್ತೇನೆ. ತನುವಿನಿಂದಲೇ ದೊರೆತ ಚಿನ್ನಕ್ಕಾಗಿ ತನುವನ್ನೇ ಕೊ ಲ್ಲುತ್ತೇನೆ. ಅಧಿಕಾರ ಹಣಕ್ಕಾಗಿ ತಂದೆ ತಾಯಿ ಬಂಧು ಬಳಗವನ್ನು ಲೆಕ್ಕಿಸುವುದಿಲ್ಲ.

ಎಷ್ಟೊಂದು ಪುಸ್ತಕಗಳನ್ನು ಓದುತ್ತೇನೆ. ಬರೆದವರನ್ನು ಪ್ರೀತಿಸುತ್ತೇನೆ. ಆದರೂ ತನುವಿ ನಲ್ಲಿ ಮನೆ ಮಾಡಿಕೊಂಡ ಅಜ್ಞಾನ ಉದುರಿ ಬಿದ್ದಿಲ್ಲ. ತನುವಿನ ಮನದ ಅಜ್ಞಾನ ಕತ್ತಲು ; ತನು ವಿನಲ್ಲಿಯೇ ನುಡಿದು ಹೇಳುವ ಅರಿವೆಂಬ ಬೆಳಕಿನ ಗುರುವಿದ್ದಾನೆ. ತನುವಿನ ಬೆಳಕು ಪರಿಚಯ ವಾದರೆ ; ತನುವಿನ ಕತ್ತಲೂ ಬೆಳಕಾಯಿತು. ತನುವಿಗೆ ನೋವು ನೀಡುವ ಮನಕ್ಕಂಟಿದ ಅಜ್ಞಾನದ

ಹುಣ್ಣುಗಳೆಲ್ಲ ಮಾದು ಉದುರಿ ಬೀಳುತ್ತವೆ. ಕ್ಷಣ ಕ್ಷಣಕ್ಕೂ ಅರಿವಿನ ಆಸೆ ತೋರಿಸಿ ಸೆಳೆಯುವ ಶ್ರೀ ಗುರುವಿನ ಹಂಗು ನನಗಿಲ್ಲ. ಏಕೆಂದರೆ ಎನ್ನ ತನುವಿನ ಬೆಳಕಿನ ಒಡವೆ ಅರಿವಿನ ಆಭರಣ ನೀನೆ ಆಗಿರುವಿ.

ಅರಿವು ತಿಳಿಯದ ಮುನ್ನ ಕಲ್ಲು ಕಟ್ಟಿಗೆ ಗಿಡ ಮರಗಳನ್ನೇ ದೇವರೆಂದು ಪೂಜಿಸಿದೆ. ತನುವಿನ ಅರಿವೆಂಬ ಶ್ರೀಗುರುವೆ ನನ್ನ ಪೂಜೆಗೆ ಒಳಗಾದಲ್ಲಿ ಆ ಅರಿವಿನ ನಿತ್ಯಾರಾಧಕ ನಾನು ! ಸರ್ವರ ದಯ ವಸ್ತು. ಸರ್ವರ ಮಲತ್ರಯಗಳು ದೂರ, ಸರ್ವಾಂಗಗಳೂ ಸಂತೋಷದಿಂದ ನಲಿನಲಿದಾಡುತ್ತವೆ. ನಿಗರ್ವದಿಂದ ಬೀಗುತ್ತವೆ. ಸರ್ವ ಋತುಗಳಲ್ಲಿಯೂ ತನುಗಳು ಅರಿವಿನ ಫಲ ಹೊತ್ತು ಬಾಗುತ್ತವೆ. !

ಅರಿವೆಂಬ ದಸರೇಶ್ವರ ಲಿಂಗವು ತಥ್ಯವೂ ಅಲ್ಲ, ಮಿಥ್ಯವೂ ಅಲ್ಲ. ಸದಾ ಸಹಜವೆಂದು ದಸರಯ್ಯ ಶರಣರು ತಮ್ಮ ಸೂತ್ರದ ಮೂಲಕ ನಿರೂಪಿಸಿದ್ದಾರೆ. ದಸರಯ್ಯ ಶರಣರ ತನುವಿನ ಈ ಶಿಕ್ಷಣ ಸರ್ವ ಶಾಲಾ ಕಾಲೇಜುಗಳಲ್ಲಿ ಅವಶ್ಯ. ಮಠಮಾನ್ಯಗಳಲ್ಲಿ ಅತ್ಯವಶ್ಯ !

□

---

**ಅರಿವಿನ ಪರಿಮಳ :**

- □ ತನುವಿನ ಬೆಳಕು ಪರಿಚಯವಾದರೆ ; ತನುವಿನ ಕತ್ತಲೂ ಬೆಳಕಾಯಿತು. ತನುವಿಗೆ ನೋವು ನೀಡುವ ಮನಕ್ಕಂಟಿದ ಅಜ್ಞಾನದ ಹುಣ್ಣುಗಳೆಲ್ಲ ಮಾದು ಉದುರಿ ಬೀಳುತ್ತವೆ.
- □ ಅರಿವು ತಿಳಿಯದ ಮುನ್ನ ಕಲ್ಲು ಕಟ್ಟಿಗೆ ಗಿಡ ಮರಗಳನ್ನೇ ದೇವರೆಂದು ಪೂಜಿಸಿದೆ. ತನುವಿನ ಅರಿವೆಂಬ ಶ್ರೀಗುರುವೆ ನನ್ನ ಪೂಜೆಗೆ ಒಳಗಾದಲ್ಲಿ ಆ ಅರಿವಿನ ನಿತ್ಯಾರಾಧಕ ನಾನು ! ಸರ್ವರ ದಯ ವಸ್ತು. ಸರ್ವರ ಮಲತ್ರಯಗಳು ದೂರ, ಸರ್ವಾಂಗಗಳೂ ಸಂತೋಷದಿಂದ ನಲಿನಲಿದಾಡುತ್ತವೆ. ನಿಗರ್ವದಿಂದ ಬೀಗುತ್ತವೆ. ಸರ್ವ ಋತುಗಳಲ್ಲಿಯೂ ತನುಗಳು ಅರಿವಿನ ಫಲ ಹೊತ್ತು ಬಾಗುತ್ತವೆ. !

# ಅರಿವು ಪಂಚಭೂತಗಳನ್ನು ಬೆಳಗುವ ಬೆಳಕು

ಸರ್ವಜೀವ ನಿನ್ನ ಹಾಹೆ ಎಂಬೆನೆ ? ಅದು ಭಿನ್ನ ಭಾವ
ತ್ರಿಗುಣಾತ್ಮಕರುಂಟು, ಅದು ನಿನಗನ್ಯವೆಂಬೆನೆ ?
ಆ ತ್ರಿಗುಣಾತ್ಮಕರು ನಿನ್ನ ತಿಲಾಂಶ
ಇಂತೀ ಸರ್ವಭೂತಕ್ಕೆ ನಿನ್ನ ದಯ
ಎನಗಿದೇಕೆ ಗೆಲ್ಲ ಸೋಲವೆಂಬ ಖುಲ್ಲತನ
ಎಲ್ಲ ಜೀವಕ್ಕೂ ಸರಿ
ಅರುಣೋದಯದಂತೆ ಎನ್ನ ಚಿತ್ತದಲ್ಲಿ ಸರ್ವಜೀವಕ್ಕೆ
ಎಲ್ಲದಕ್ಕೂ ದಯವ ಮಾಡು, ಚೆನ್ನ ದಸರೇಶ್ವರಲಿಂಗಾ

-ದಸರಯ್ಯ ಶರಣರು

**ಸರ್ವಜೀವ ನಿನ್ನ ಹಾಹೆ ಎಂಬೆನೆ ? ಅದು ಭಿನ್ನ ಭಾವ ;**

ಸರ್ವ ಜೀವಗಳೂ ನಿನ್ನ ರೂಪು. ಆದರೂ ಒಂದು ತನುವಿನಂತೆ ಮತ್ತೊಂದು ತನುವಿಲ್ಲ. ಒಂದು ತನುವಿನ ಭಾವದಂತೆ ಮತ್ತೊಂದು ತನುವಿನ ಭಾವವಿಲ್ಲ. ಎಲ್ಲ ತನುಗಳೂ ಭಿನ್ನ ಭಿನ್ನ ಭಾವದಿಂದ ಕೂಡಿವೆ. ಸತ್ವ ರಜ ತಮ ಎಂಬ ಭಿನ್ನ ಭಿನ್ನ ಗುಣಗಳಿಂದ ಕೂಡಿವೆ. ತನುವಿನ ಭಾವ ಮತ್ತು ಗುಣಗಳು ತನುವಿನ ಜ್ಞಾನದ ತಿಲಾಂಶದಿಂದ ಬೆಳಗಿವೆ.

ನಿನ್ನ ಬೆಳಕದು ಜಗದಗಲ, ಮುಗಿಲಗಲ. ಸರ್ವಭೂತಗಳು ನಿನ್ನ ಬೆಳಕಿನ ದಯೆಯಿಂದ ಬೆಳಗಿವೆ. ನೋಡುವ ಕಣ್ಣಿನ ಬೆಳಕನ್ನು ಬದಿಗಿಟ್ಟು ಅಜ್ಞಾನದಿಂದ ನೋಡಿದೆ. ಕೇಳುವ ಕಿವಿಯ ಜ್ಞಾನವನ್ನು ಬದಿಗಿಟ್ಟು ಅಜ್ಞಾನದಿಂದ ಕೇಳಿದೆ. ಸ್ಪರ್ಶಿಸುವ ಚರ್ಮದ ಜ್ಞಾನವನ್ನು ಬದಿಗಿಟ್ಟು ಅಜ್ಞಾನದಿಂದ ಸ್ಪರ್ಶಿಸಿದೆ. ರುಚಿಸುವ ಜ್ಞಾನವನ್ನು ಬದಿಗಿಟ್ಟು ಅಜ್ಞಾನದ ನಾಲಿಗೆಯಿಂದ ರುಚಿಸಿದೆ. ವಾಸಿಸುವ ಜ್ಞಾನ ವನ್ನು ಬದಿಗಿಟ್ಟು ಅಜ್ಞಾನದ ಮೂಗಿನಿಂದ ವಾಸಿಸಿದೆ. ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ , ಸುಳಿದು ಬೀಸುವ ಗಾಳಿ ನಿಮ್ಮ ದಾನ ಮತ್ತು ನಿಮ್ಮ ದಯೆಯಿಂದ ನನಗೆ ತನು ಬಳುವಳಿಯಾಗಿ ಬಂದಿದೆ. ಆದರೂ ಗೆಲ್ಲುವ ಸೋಲುವ ಅಲ್ಪತನವೆಂಬ ಅಜ್ಞಾನ ಸರ್ವ ತನುಗಳಲ್ಲಿಯೂ ಸರಿಸಮವಾಗಿ ಬಂದಿದೆ.

ಅರುಣೋದಯದ ಬೆಳಕಿನಂತೆ ಎಲ್ಲ ತನುಗಳೂ ಸರಿಸಮವಾಗಿ ಬೆಳಗ ಬಾರದೇ ? ಚೆನ್ನ ದಸರೇಶ್ವರ ಲಿಂಗವೆಂಬ ಅರಿವಿನ ಪರಂಜ್ಯೋತಿಯೇ ಎಲ್ಲ ತನು ಗಳಿಗೂ ದಯವ ಮಾಡಿ ಬೆಳಗಿಂಗೆ ಬೆಳಕಾಗಿ ಬೆಳಗಬಾರದೇ ?

□

# ಲಿಂಗ ದೇವರಲ್ಲ ಅದೊಂದು ಪಾಠೋಪಕರಣ

**ಅಂಗದಲ್ಲಿ ಲಿಂಗ ವೇದಿಸಬೇಕೆಂಬಲ್ಲಿ**
**ಅಂಗಕ್ಕೂ ಲಿಂಗಕ್ಕೂ ಏನು ಸಂಬಂಧ?**
**ಅಂಗದ ಮೇಲೆ ವಿಷವ ತೊಡೆಯಲಿಕ್ಕಾಗಿ**
**ಚರ್ಮ ಹಿಂಗದೆ ಆತ್ಮಂಗೆ ಲಹರಿಕೊಂಡುದುಂಟೆ?**
**ಇಂತೀ ಅಂಗ ಲಿಂಗದಲ್ಲಿ ಅರ್ಚನೆ ಆವರಿಸಿ ಆತ್ಮ ಸ್ಥಿರಕರಿಸಿ**
**ಶಿಲೆ ಲೋಹದಂತೆ ಕೂಟಸ್ಥವಾದುದು ಅಂಗಲಿಂಗ ಸಂಬಂಧ.**
**ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳ ನೋಡಾ**
**ಮಾತುಳಂಗ ಮಧುಕೇಶ್ವರನು.**

**–ದಾಸೋಹದ ಸಂಗಣ್ಣ ಶರಣರು**

ಅಂಗದ ಕಣ ಕಣದಲ್ಲಿರುವ ಅರಿವನ್ನು ಭೇದಿಸಿ ಬಳಕೆ ಮಾಡಿಕೊಳ್ಳುವುದಕ್ಕಾಗಿ ಪೂರ್ವಜರು ಲಿಂಗ ಎಂಬ ವಸ್ತು ತಂದರು. ಮೊಟ್ಟೆಯಾಕಾರದ ಕಪ್ಪು (ಕತ್ತಲ)ವಸ್ತುವಿಗೆ ಲಿಂಗ ಎಂದು ಹೆಸರಿಸಿದರು. ಆ ಲಿಂಗವನ್ನೇ ಅರಿವಿನ ಪಾಠದ ಉಪಕರಣವನ್ನಾಗಿ ಶರಣರು ಬಳಸಿಕೊಂಡರು.

ಲಿಂಗವೆನ್ನುವುದು ಕಪ್ಪು ಮೊಟ್ಟೆ. ಇದರಲ್ಲಿ ಬೆಳಕಿನ ಮರಿ ಅಡಗಿದೆ. ಇದು ಭಿನ್ನವಾದರೆ ಮೊಟ್ಟೆಯೊಂದಿಗೆ ಮರಿಯೂ ಸಾಯುತ್ತದೆ. ಮೊಟ್ಟೆ ಭಿನ್ನವಾಗದ ಮುನ್ನ ಬೆಳಕಿನ ಮರಿಯನ್ನು ನೋಡಬೇಕು. ಬೆಳಕಿನ ಮರಿ ಕಂಡರೆ ಕಪ್ಪು ಮೊಟ್ಟೆಯೂ ಬೆಳಗುತ್ತದೆ. ಬೆಳಗಿಂಗೆ ಬೆಳಗಾಗಿ ಬೆಳಗುತ್ತದೆ.

ಇದರ ಹಾಗೆ ತನುವೆಂಬುದು ಕತ್ತಲ ಮೊಟ್ಟೆ, ಕತ್ತಲ ಕೆಲಸವೆಂದರೆ ತನುವಿಗೆ ಬಲು ಪ್ರೀತಿ. ಮನವೆಂಬುದೇ ತನುವನ್ನಾವರಿಸಿದ ಕತ್ತಲು. ಬೆಳಕಿನ ಕತೆ ಕೇಳುವುದರಿಂದ ಕತ್ತಲು ಕಳೆಯುವುದಿಲ್ಲ. ಕತ್ತಲಿಗೆ ಬೆಳಕಿನ ದರ್ಶನವಾಗಬೇಕು. ಆಗ ಕತ್ತಲು ಬೆಳಕಿನಲ್ಲಿ ಸೇರಿ ಬೆಳಕೇ ಆಗುತ್ತದೆ ಎಂದು ಶರಣರು ವಿವರಿಸಿ ಪಾಠ ಮಾಡಿದರು.

ಹೀಗೆ ಅರಿವಿನ ಪಾಠಕ್ಕೆಂದು ಬಳಕೆಯಾದ ಲಿಂಗವೆಂಬ ಪಾಠೋಪಕರಣವನ್ನೇ ಅಂಗದ ಮೇಲೆ ಹಾಕಿಕೊಂಡು ಹಗಲೂ ರಾತ್ರಿ ಪತ್ರೆ ಪುಷ್ಪ ಧರಿಸಿ ಪೂಜಿಸಹತ್ತಿದರೆ ಯಾರೇನು ಮಾಡಿಯಾರು?

ಲಿಂಗ ಎಂಬ ವಸ್ತು ಕೇರು ಎಂಬ ಪಾಷಾಣದಿಂದ ತಯಾರಿಸಲ್ಪಟ್ಟ ಪಾಠೋಪಕರಣ. ಅದು ವಿಷ. ವಿಷ ವಸ್ತುವನ್ನು ಅಂಗದ ಮೇಲೆ ಧರಿಸಿದರೆ ಚರ್ಮಕ್ಕೆ ಬಾಧೆಯಲ್ಲದೆ ಆತ್ಮಕ್ಕೆ ಆನಂದವನ್ನುಂಟು ಮಾಡಲು ಸಾಧ್ಯವೆ?

ಪಾಠಕ್ಕಾಗಿ ಬಳಸಿದ ಪಾಷಾಣವೆಂಬ ಲಿಂಗವನ್ನೇ ಅಂಗದ ಮೇಲೆ ಧರಿಸಿಕೊಂಡು ಆ ಲಿಂಗಕ್ಕೆ ಅರ್ಚನೆ ಪೂಜೆ ಅಭಿಷೇಕ ಮಾಡಿ ಆತ್ಮ ಸ್ಥಿರೀಕರಿಸಲು ಪ್ರಯತ್ನಿಸಿದರೆ ಶಿಲೆ ಮತ್ತು ಲೋಹ ಸಂಬಂಧದಂತೆ. ಅದು ಎಂದಾದರೂ ಕೂಟಸ್ಥವಾಗುತ್ತದೆಯೇ ?

ಶಿಲೆಯನ್ನು ಲಿಂಗವನ್ನಾಗಿ ಮಾಡಲು ಬಳಸಿದ ಲೋಹದ ಮೊಳೆ ತಾನು ಎಂದೂ ಲಿಂಗವಾ

ಗಲು ಅರಿಯದು. ಅಂತೆಯೇ ಅಂಗದ ಮೇಲೆ ಧರಿಸಿದ ಪಾಷಾಣವೆಂಬ ಲಿಂಗ ಅಂಗವನು ಅರಿಯದು. ಎರೆದರೆ ನೆನೆಯದು ಮರೆತರೆ ಬಾಡದು ಹುರುಳಿಲ್ಲ ಹುರುಳಿಲ್ಲ ಲಿಂಗಾರ್ಚನೆಎಂದಂತೆ.

**ಶಂಭುವಿನಿಂದಿತ್ತ ಸ್ವಯಂಭುವಿನಿಂದತ್ತ ಅತಿಬಳ ನೋಡಾ ಮಾತುಳಂಗ ಮಧುಕೇಶ್ವರನು:**

ತನುವನ್ನು ಸದಾ ಸಂಕಟದಲ್ಲಿ ಒಡ್ಡುವುದೇ ಮನದ ಕೆಲಸ. ಕತ್ತಲ ಮೊಟ್ಟೆಯಂತಿರುವ ಮನಕ್ಕೆ ಬೆಳಕಿನ ದರ್ಶನವಾಗಲಿ ಎಂದು ಶರಣರು ಲಿಂಗ ವಸ್ತುವನ್ನಾಗಿ ಮಾಡಿ ಪ್ರಾಯೋಗಿಕವಾಗಿ ಪಾಠ ಹೇಳಿದರು. ಆ ಪಾಷಾಣವನ್ನೇ ಅಂಗದ ಮೇಲೆ ಹಾಕಿ ತ್ರಿಕಾಲ ಪೂಜೆ ಮಾಡುವ ಮನ ಎಂದೂ ಬೆಳಕಿನ ಶಂಭುವಿನಲ್ಲಿ ಕೂಡಿ ಸ್ವಯಂಭುವಾಗಲಿಲ್ಲ; ಮಾತುಳಂಗ ಮಧುಕೇಶ್ವರ ತಾನಾಗಲಿಲ್ಲ. ಮನ ಶಂಭುವಿನಿಂದಿತ್ತ, ಸ್ವಯಂಭುವಿನಿಂದತ್ತ ಎಂದು ಸರಳವಾಗಿ ನುಡಿದು ಓದುಗರಿಗೆ ಪಾಠ ಮಾಡಿದ್ದಾರೆ ದಾಸೋಹದ ಸಂಗಣ್ಣ ಶರಣರು.

□

---

**ಅರಿವಿನ ಪರಿಮಳ :**

- ಲಿಂಗವೆನ್ನುವುದು ಕಪ್ಪು ಮೊಟ್ಟೆ. ಇದರಲ್ಲಿ ಬೆಳಕಿನ ಮರಿ ಅಡಗಿದೆ. ಇದು ಭಿನ್ನವಾದರೆ ಮೊಟ್ಟೆಯೊಂದಿಗೆ ಮರಿಯೂ ಸಾಯುತ್ತದೆ. ಮೊಟ್ಟೆ ಭಿನ್ನವಾಗದ ಮುನ್ನ ಬೆಳಕಿನ ಮರಿಯನ್ನು ನೋಡಬೇಕು.
- ಬೆಳಕಿನ ಕತೆ ಕೇಳುವುದರಿಂದ ಕತ್ತಲು ಕಳೆಯುವುದಿಲ್ಲ. ಕತ್ತಲಿಗೆ ಬೆಳಕಿನ ದರ್ಶನವಾಗಬೇಕು. ಆಗ ಕತ್ತಲು ಬೆಳಕಿನಲ್ಲಿ ಸೇರಿ ಬೆಳಕೇ ಆಗುತ್ತದೆ.
- ಅಂಗದ ಮೇಲೆ ಧರಿಸಿದ ಪಾಷಾಣವೆಂಬ ಲಿಂಗ ಅಂಗವನು ಅರಿಯದು.

# ಕಂಗಳ ಸೂತಕ ಕಳೆಯುವ ಶರಣರ ಸೂತ್ರ !

**ಬಂದಲ್ಲಿ ನಿಂದು ಕಂಡು ಸಂದೇಹವಳಿದ ಮತ್ತೆ**
**ಬೇರಂದವ ಕೇಳುವುದಕ್ಕೆ ಕಂಗಳ ಸೂತಕಕ್ಕೆ ಇಂಬಿಲ್ಲ.**
**ಆ ಉಭಯದಂಗದ ಸಂಗವ ಮರದಲ್ಲಿ**
**ನಿಜಗುಣಯೋಗಿಯ ಯೋಗ.**

**- ಶರಣ ನಿಜಗುಣಯೋಗಿ**

ಬಸವ ಪೂರ್ವಯುಗದ ಶರಣರಾದ ನಿಜಗುಣಯೋಗಿಗಳ ಈ ನಾಲ್ಕು ಸಾಲಿನ ವಚನದಲ್ಲಿ ಕಣ್ಣಿನ ಸೂತಕವನ್ನು ಕಳೆದು, ನೋಡುವ ವಸ್ತುವನ್ನೇ ನೋಡಿ ಕೂಡದಗಲದ ಕೂಟದ ಯೋಗವನ್ನು ಓದುಗರಿಗೆ ಸೂತ್ರ ರೂಪದಲ್ಲಿ ಕರುಣಿಸಿದ್ದಾರೆ.

ಯೋಗವೆಂದರೆ ಮೈ ಮುರಿದು ಆಸನಗಳನ್ನು ಮಾಡುವುದಲ್ಲ. ತನುವಿನ ಅಜ್ಞಾನ ತನುವಿನ ಜ್ಞಾನದಲ್ಲಿ ಕೂಡಿ ಜ್ಞಾನಿ ತನು ಆಗುವುದು. ಮನ ಘನದಲ್ಲಿ ಬೆರೆತು ಘನಮನವಾಗುವುದು. ಮರೆವು ಅರಿವಿನಲ್ಲಿ ಬೆರೆತು ಅರಿವೇ ಆಗುವುದು. ಕತ್ತಲು ಬೆಳಕಿನಲ್ಲಿ ಬೆರೆತು ಬೆಳಕೇ ಆಗುವುದು. ಯೋಗವೆಂದರೆ ಕೂಡುವುದು. ಹೀಗೆ ಕೂಡುವ ಕೂಟಕ್ಕೆ ಯೋಗವೆಂದಿದ್ದಾರೆ ಶರಣರು.

**ಬಂದಲ್ಲಿ ನಿಂದು ಕಂಡು ಸಂದೇಹವಳಿದ ಮತ್ತೆ ಬೇರಂದವ ಕೇಳುವುದಕ್ಕೆ ಕಂಗಳ ಸೂತಕಕ್ಕೆ ಇಂಬಿಲ್ಲ:**

ಕಣ್ಣು, ಕಿವಿ, ಮೂಗು, ನಾಲಿಗೆ ಹಾಗೂ ಚರ್ಮ ತನುವಿಗೆ ಸದ್ಬಳಕೆಯಾದರೆ ಸಂಪತ್ತು. ದುರ್ಬಳಕೆಯಾದರೆ ವಿಪತ್ತು. ಈ ಇಂದ್ರಿಯಗಳು ಮಾಡುವ ಸತ್ಕ್ರಿಯೆಯಿಂದ ತನು ಜ್ಞಾನಿ, ಯೋಗಿ, ಸತ್ಪುರುಷ, ಉತ್ತಮನೆನ್ನಿಸಿಕೊಳ್ಳುತ್ತದೆ. ಇಂದ್ರಿಯಗಳ ದುಷ್ಕ್ರಿಯೆಯಿಂದ ಕಳ್ಳ, ಹಾದರಿಗ, ಭ್ರಷ್ಟ, ಲಂಚಕೋರ, ಕುಡುಕ, ಜೂಜುಕೋರ, ವಿಷಯ ಲಂಪಟ, ವಿಟ, ವೇಶ್ಯೆ ಎಂದು ತನು ನಿಂದನೆಗೆ ಗುರಿಯಾಗುತ್ತದೆ.

ಕಣ್ಣುಅಂಗದ ರೂಪ ನೋಡಿ ಸಂಗ ಬಯಸಲು ಹಾತೊರೆಯುತ್ತದೆ. ತಾನೂ ಅಂಗ, ನೋಡುವ ಅಂಗವೂ ಅಂಗವೇ ಆದರೂ ಸಂಗಬಯಸುವುದು ಬಿಡುವುದಿಲ್ಲ. ಅಂಗ ಅಂಗದೊಂದಿಗೆ ಬೆರೆತು ಆನಂದಪಟ್ಟು ಸಂದೇಹ ಅಳಿದಮೇಲೂ ಅಂಗ ಮತ್ತೊಂದು ಅಂದದ ಅಂಗವನ್ನು ನೋಡುವುದು ಬಿಡುವುದಿಲ್ಲ. ಕಣ್ಣಿನ ಚಪಲಕ್ಕೆ ಕೊನೆಯಿಲ್ಲದ ಸೂತಕದ ಪೊರೆ ಆವರಿಸಿರುವುದರಿಂದ ಅಂಗವನ್ನು ತನ್ನ ತೆಕ್ಕೆಗೆ ತೆಗೆದುಕೊಂಡು ಮಂಗನಂತೆ ಕುಣಿಸುತ್ತದೆ. ಸೂತಕದ ಕಣ್ಣಿಗೆ ಶಿಕ್ಷೆಯಿಲ್ಲ. ಕಣ್ಣಿನ ಬಯಕೆಯಂತೆ ಕುಣಿದ ಅಂಗಕ್ಕೆ ಶಿಕ್ಷೆ ಹಾದರದ ಹಣೆಪಟ್ಟಿ!

**ಆ ಉಭಯದಂಗದ ಸಂಗವ ಮರೆದಲ್ಲಿ ನಿಜಗುಣ ಯೋಗಿಯ ಯೋಗ.**

ನೋಡೂದನ್ನ ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ ನೋಡೂದ ನೋಡುವಡೆ ಕೂಡಲಿಲ್ಲ ಅಗಲಲಿಲ್ಲ ಎಂದಿದ್ದಾರೆ ಅಲ್ಲಮ ಪ್ರಭುಗಳು. ನೋಡುವ ಕಣ್ಣಿಗೆ ಅಜ್ಞಾನದ ಸೂತಕವೆಂಬ ಪೊರೆ ಆವರಿಸಿರುವುದರಿಂದ ಕಣ್ಣು ಕಂಡರೂ ಕುರುಡು. ಚರ್ಮ ನೋಡಿದ ಕಣ್ಣು ಸಂಗಕ್ಕಾಗಿ ತನುವಿನಲ್ಲಿ ರಸಾಯನಿಕ ಕ್ರಿಯೆ ಉಂಟು ಮಾಡಿತು. ಅದು ತನ್ನಂತೇ ಇರುವ ಚರ್ಮ ! ಅದರೊಳಗಿರುವ ಮೂಳೆ,

ಮಾಂಸ, ರಕ್ತ, ಮಜ್ಜೆ, ಮೇದಸ್ಸು ಕೂಡಾ ತನ್ನ ತನುವಿನಂತೆಯೇ ಇದೆ. ತನ್ನ ಎಡ ಕೈ ಬಲಗೈಗೆ ತಾಗಿದರೆ ಏಕೆ ಆಸೆ ಹುಟ್ಟಲಿಲ್ಲ ಎಂದು ನೋಡುವ ಅರಿವು ಕಣ್ಣಿನಲ್ಲಿ ಮರೆಯಾಗಿರುವುದರಿಂದ, ಸೂತಕದ ಕಣ್ಣು ಮತ್ತೆ ಮತ್ತೆ ಬೇರೆ ಬೇರೆ ಅಂಗದೊಂದಿಗೆ ಸಂಗ ಬಯಸಿ ಅಂಗಕ್ಕೆ ಸಂಕಟವನ್ನೊಡ್ಡುತ್ತದೆ. ಹೀಗೆ ನೋಡೂದ ನೋಡುವಡೆ ಅಂಗದೊಂದಿಗೆ ಅಂಗ ಸಂಗ ಬಯಸುವುದಿಲ್ಲ ಎಂದಿದ್ದಾರೆ ಶರಣರು. ಇದು ನಿಜಗುಣಯೋಗಿಯ ಯೋಗ : ಕಣ್ಣಿನ ಸೂತಕ ಕಳೆದು ನೋಡೂದನ್ನೇ ನೋಡುವ ಚಾಳಿ ಕಲಿಸುವ ಶರಣರ ಸತ್ಯದ ಸೂತ್ರ ! □



**ಅರಿವಿನ ಪರಿಮಳ :**

- □ ಯೋಗವೆಂದರೆ ಮೈ ಮುರಿದು ಆಸನಗಳನ್ನು ಮಾಡುವುದಲ್ಲ. ತನುವಿನ ಅಜ್ಞಾನ ತನುವಿನ ಜ್ಞಾನದಲ್ಲಿ ಕೂಡಿ ಜ್ಞಾನಿ ತನು ಆಗುವುದು.
- □ ಕಣ್ಣು, ಕಿವಿ, ಮೂಗು, ನಾಲಿಗೆ ಹಾಗೂ ಚರ್ಮ ತನುವಿಗೆ ಸದ್ಬಳಕೆಯಾದರೆ ಸಂಪತ್ತು. ದುರ್ಬಳಕೆಯಾದರೆ ವಿಪತ್ತು. ಈ ಇಂದ್ರಿಯಗಳು ಮಾಡುವ ಸತ್ಕ್ರಿಯೆಯಿಂದ ತನು ಜ್ಞಾನಿ, ಯೋಗಿ, ಸತ್ಪುರುಷ, ಉತ್ತಮನೆನ್ನಿಸಿಕೊಳ್ಳುತ್ತದೆ. ಇಂದ್ರಿಯಗಳ ದುಷ್ಕ್ರಿಯೆಯಿಂದ ಕಳ್ಳ, ಹಾದರಿಗ, ಭ್ರಷ್ಟ, ಲಂಚಕೋರ, ಕುಡುಕ, ಜೂಜುಕೋರ, ವಿಷಯ ಲಂಪಟ, ವಿಟ, ವೇಶ್ಯೆ ಎಂದು ತನು ನಿಂದನೆಗೆ ಗುರಿಯಾಗುತ್ತದೆ.
- □ ಕಣ್ಣು ಅಂಗದ ರೂಪ ನೋಡಿ ಸಂಗ ಬಯಸಲು ಹಾತೊರೆಯುತ್ತದೆ. ತಾನೂ ಅಂಗ, ನೋಡುವ ಅಂಗವೂ ಅಂಗವೇ ಆದರೂ ಸಂಗಬಯಸುವುದು ಬಿಡುವುದಿಲ್ಲ. ಅಂಗ ಅಂಗದೊಂದಿಗೆ ಬೆರೆತು ಆನಂದಪಟ್ಟು ಸಂದೇಹ ಅಳಿದಮೇಲೂ ಅಂಗ ಮತ್ತೊಂದು ಅಂದದ ಅಂಗವನ್ನು ನೋಡುವುದು ಬಿಡುವುದಿಲ್ಲ.

# ಮನ ತಪ್ಪು ಮಾಡಿದರೆ ತನುವಿಗೆ ಶಿಕ್ಷೆಯೆ ?

**ಹರಿಗೋಲು ಹರಿದ ಮತ್ತೆ ಹೊಳೆಯೇನು ಮಾಡುವುದು ?**
**ಇರಿದವನಿದ್ದಂತೆ ಕೈದೇನ ಮಾಡುವುದು ?**
**ಎಚ್ಚವನಿದ್ದಂತೆ ಅಂಬಿಗೆ ಮುನಿವರೆ ?**
**ಎನ್ನ ಚಿತ್ತದಲ್ಲಿ ಕಲೆದೋರಿ, ನೀನಾಡಿಸಿದಂತೆ ಆಡಿದೆ.**
**ನೀ ಕೊಟ್ಟ ಕಾಯಕವ ಹೊತ್ತೆ, ನೀ ಹೇಳಿದ ಬಿಟ್ಟಿಯ ಮಾಡಿದೆ.**
**ಕುಳದವನಾದ ಮತ್ತೆ ಮಾನ್ಯರ ಒಲವರ. ಎನಗೊಂದು**
**ಗುಣವಿಲ್ಲ. ನೀನಾಡಿಸಿದಂತೆ ಆಡಿದೆ, ಆತುರವೈರಿ ಮಾರೇಶ್ವರಾ.**

**- ನಗೆಯ ಮಾರಿತಂದೆ ಶರಣರು**

ಹರಿಗೋಲು ಹರಿದರೆ ಹೊಳೆಯೇನು ಮಾಡೀತು ? ಇರಿದವನು ಇದ್ದಾಗ ಖಡ್ಗವೇನು ಮಾಡೀತು ? ಬಾಣ ಬಿಟ್ಟವನನ್ನು ಬಿಟ್ಟು ಬಾಣಕ್ಕೆ ನಿಂದಿಸುವರೆ ? ಎನ್ನ ತನುವಿನ ಚಿತ್ತದಲ್ಲಿ ಮೂಡಿ ಕಲೆದೋರಿ, ನೀನಾಡಿಸಿದಂತೆ ಆಡಿದೆ. ನೀ ಕೊಟ್ಟ ಕಾಯಕವ ಮಾಡಿದೆ. ನೀ ಹೇಳಿದ ಬಿಟ್ಟಿಯ ಕೆಲಸ ಕೇಳಿದೆ. ಕಳುವು ನಿಂದೆ ಹಾದರಗಳ ಮಾಡಲು ತನುವೇನು ಸ್ವತಂತ್ರವೆ ?

ಮನ ಅರಿವಿನ ನೆರಳು. ಅರಿವಿನ ಆಳಾಗಬೇಕಾದ ತನು ಮನದಾಳಾಗಿದೆಯಲ್ಲ! ತಪ್ಪು ಮಾಡದ ತನುವನ್ನು ತನುವಿನ ಜಾತಿಗಳಿಂದ ನಿಂದನೆ ಮಾಡಿಸುವುದೆ ? ತಪ್ಪು ಮಾಡಿದ ತನುವಿನ ಒಡೆಯನೂ ನೀನೇ ? ನಿಂದೆ ಮಾಡಿಸುವ ತನುವಿನ ಒಡೆಯನೂ ನೀನೇ ! ತನುವಿಗೆ ತನ್ನದೇ ಆದ ಒಂದೂ ಗುಣವಿಲ್ಲವೆಂದು ನಿನಗೆ ತಿಳಿದಿಲ್ಲವೆ ?

ಇರಿದವನನ್ನು ಬಿಟ್ಟು ಖಡ್ಗವನ್ನು ನಿಂದಿಸುವುದಿಲ್ಲ. ಬಿಲ್ಲು ಹೂಡಿದವನನ್ನು ಬಿಟ್ಟು ಬಾಣವನ್ನು ನಿಂದಿಸುವುದಿಲ್ಲ. ಹರಿದ ಹರಿಗೋಲಿನ ತಪ್ಪು ಹೊರತು ಹೊಳೆಯನ್ನು ಯಾರೂ ನಿಂದಿಸುವುದಿಲ್ಲ.

ಎನ್ನ ತನುವಿನಲ್ಲಿ ನಿನ್ನ (ಅರಿವಿನ) ನೆರಳಾದ ಮನ ಹೊಕ್ಕು ಅದು ಆಡಿಸಿದಂತೆ ತನು ಆಡುವುದು. ಅದಕ್ಕೆ ಕಾರಣ ನೀನಾದರೂ; ನಿನ್ನನ್ನು ನಿನ್ನಿಂದ ಜನ್ಮ ಪಡೆದ ನಿನ್ನ ನೆರಳಿನ ಮನವನ್ನು ಯಾರೂ ಗುರುತಿಸುವುದಿಲ್ಲ. ಮನಕ್ಕೆ ಕುಡಿಯುವ ಆಸೆಯಾದರೆ ಅದು ತನುವಿನೊಂದಿಗೆ ಕುಡಿಯುತ್ತದೆ. ಹಾದರ, ಕಳುವಿನ ಬಯಕೆಗಳನ್ನೂ ತನುವಿನಿಂದಲೇ ಮಾಡಿಸುತ್ತದೆ. ಲಂಚ ಭ್ರಷ್ಟಾಚಾರಗಳನ್ನು ತನುವಿನಿಂದಲೇ ಮಾಡಿಸುತ್ತದೆ. ತನುವಿಗಾದರೂ ನಿನ್ನ ಹೊರತಾಗಿ ಒಂದೂ ಗುಣಗಳಿಲ್ಲ. ತನು, ನೀನು ಮತ್ತು ನಿನ್ನ ನೆರಳಾದ ಮನ ಹೇಳಿದಂತೆ ಕೇಳುವ ಸಾಕಿದ ನಾಯಿ ! ಮನ ಮಾಡಿದ ತಪ್ಪು ತನು ಅನುಭವಿಸಬೇಕೆ ?

ನೀನಾಡಿಸಿದಂತೆ ಆಡುವೆ ಅತುರವೈರಿ ಮಾರೇಶ್ವರಾ ಎಂದು ನಗೆ ಮಾರಿತಂದೆಗಳು ಅರಿವಿನೊಂದಿಗೆ ಸಂಭಾಷಣೆ ಮಾಡುತ್ತಿದ್ದಾರೆ. ಅರಿವು ತನುವಿನ ಬೆಳಕಾದರೆ ಆ ಬೆಳಕಿನಿಂದ ಹುಟ್ಟಿದ ಕತ್ತಲೆಯೇ ಮನ ! ಮನಕ್ಕೆ ಇಷ್ಟವಾದ ಕೆಲಸಗಳನ್ನು ತನುವಿನೊಂದಿಗೆ ಮಾಡಿಸಿ ತನುವನ್ನು ಜೈಲಿಗೆ

ತಳ್ಳುತ್ತದೆ. ನಿಂದೆಗೆ ಗುರಿ ಮಾಡುತ್ತದೆ. ಇರಿದ ಖಡ್ಗಕ್ಕೆ ಶಿಕ್ಷೆಯಿಲ್ಲ. ತನುವಿಗೆ ಶಿಕ್ಷೆ. ನಿನ್ನಿಂದ ಹುಟ್ಟಿದ ಮನವನ್ನು ನೀನೇ ನಷ್ಟಮಾಡು ಎಂದು ತನುವಿನೊಡೆಯನಾದ ಆತುರವೈರಿ ಮಾರೇಶ್ವರನನ್ನು ನಗೆ ಮಾರಿತಂದೆಗಳು ಸ್ತುತಿಸಿದ್ದಾರೆ.

□

---

**ಅರಿವಿನ ಪರಿಮಳ :**

□ ಮನ ನಿನ್ನ ಅರಿವಿನ ನೆರಳು ಅರಿವಿನ ಆಳಾಗಬೇಕಾದ ತನು ಮನದಾಳಾಗಿದೆಯಲ್ಲ! ತಪ್ಪು ಮಾಡದ ತನುವನ್ನು ತನುವಿನ ಜಾತಿಗಳಿಂದ ನಿಂದನೆ ಮಾಡಿಸುವುದೆ ? ತಪ್ಪು ಮಾಡಿದ ತನುವಿನ ಒಡೆಯನೂ ನೀನೇ ? ನಿಂದೆ ಮಾಡಿಸುವ ತನುವಿನ ಒಡೆಯನೂ ನೀನೇ ! ತನುವಿಗೆ ತನ್ನದೇ ಆದ ಒಂದೂ ಗುಣವಿಲ್ಲವೆಂದು ನಿನಗೆ ತಿಳಿದಿಲ್ಲವೆ ?

□ ಎನ್ನ ತನುವಿನಲ್ಲಿ ನಿನ್ನ (ಅರಿವಿನ) ನೆರಳಾದ ಮನ ಹೊಕ್ಕು ಅದು ಆಡಿಸಿದಂತೆ ತನು ಆಡುವುದು. ಅದಕ್ಕೆ ಕಾರಣ ನೀನಾದರೂ; ನಿನ್ನನ್ನು ನಿನ್ನಿಂದ ಜನ್ಮ ಪಡೆದ ನಿನ್ನ ನೆರಳಿನ ಮನವನ್ನು ಯಾರೂ ಗುರುತಿಸುವುದಿಲ್ಲ. ಮನಕ್ಕೆ ಕುಡಿಯುವ ಆಸೆಯಾದರೆ ಅದು ತನುವಿನೊಂದಿಗೆ ಕುಡಿಯುತ್ತದೆ. ಹಾದರ, ಕಳುವಿನ ಬಯಕೆಗಳನ್ನೂ ತನುವಿನಿಂದಲೇ ಮಾಡಿಸುತ್ತದೆ. ಲಂಚ ಭ್ರಷ್ಟಾಚಾರಗಳನ್ನು ತನುವಿನಿಂದಲೇ ಮಾಡಿಸುತ್ತದೆ. ತನುವಿಗಾದರೂ ನಿನ್ನ ಹೊರತಾಗಿ ಒಂದೂ ಗುಣಗಳಿಲ್ಲ. ನೀನು ಮತ್ತು ನಿನ್ನ ನೆರಳಾದ ಮನ ಹೇಳಿದಂತೆ ಕೇಳುವ ಸಾಕಿದ ನಾಯಿ ! ಮನ ಮಾಡಿದ ತಪ್ಪು ತನು ಅನುಭವಿಸಬೇಕೆ?

# ತನುವಿನ ಇಂದ್ರಿಯಗಳು ನಿವೃತ್ತಿಯಾಗುವ ಸಂಗಯ್ಯ ಶರಣರ ಸೂತ್ರ

**ಪರಧನ ಪರಾನ್ನ ಪರಸ್ತ್ರೀಯರಾಸೆ ಬಿಡದು, ಶರಣನೆಂತೆಂಬೆ ಮರುಳೆ ?**
**'ಜಿಹ್ವೆದಗ್ಧ ಪರಾನ್ನಂಚ ಹಸ್ತದಗ್ಧ ಪ್ರತಿಗ್ರಹಂ ಚಕ್ಷುದಗ್ಧ ಪರಸ್ತ್ರೀನಾಂ ತಸ್ಯ ಜನ್ಮ ನಿರರ್ಥಕಂ'**
**ಎಂದು ಶೃತಿ ಸಾರಲು ಮತಿಗೆಡುವನಕಟಾ,**
**ನಿವೃತ್ತಿ ಸಂಗಯ್ಯ ನೆಂತೊಲಿವನವ್ವಾ !**

**– ನಿವೃತ್ತಿ ಸಂಗಯ್ಯ ಶರಣರು**

ಸಂಗಯ್ಯ ಶರಣರ ಮೂರು ವಚನಗಳು ದೊರೆತಿವೆ. ಅವು ಮೂರು ಸಾವಿರ ವಚನಗಳಿಗೆ ಸಮ ! ಜ್ಞಾನೇಂದ್ರಿಯಗಳಿಗೆ ಅಜ್ಞಾನದ ಸೂತಕದ ಪೊರೆ ಆವರಿಸಿರುವುದರಿಂದ ತನು ಸಂಕಟಕ್ಕೀಡಾಗಿದೆ. ಅವು ಕ್ರಿಯೆಯಿಂದ ನಿವೃತ್ತಿಯಾದರೆ ಸಾಕು ಜ್ಞಾನಿ ತನು, ಶರಣ ತನುವಾಗುತ್ತದೆ ಎನ್ನುತ್ತಾರೆ ಸಂಗಯ್ಯನವರು.

**ಪರಧನ ಪರಾನ್ನ ಪರಸ್ತ್ರೀಯರಾಸೆ ಬಿಡದು, ಶರಣನೆಂತೆಂಬೆ ಮರುಳೆ ? :**

ಶರಣನೆಂದು ಹೆಸರಿಟ್ಟುಕೊಂಡರೆ ತನು ಶರಣ ತನುವಾಗುವುದಿಲ್ಲ. ಪರಧನ ಪರಾನ್ನ ಪರಸ್ತ್ರೀಯರಾಸೆಗೆ ಮರುಳಾಗದವನು ಶರಣ ; ತನುವಿನಿಂದ ಭೋಗಿಸಲೆಳೆಸುವ ಕ್ರಿಯೆಯಲ್ಲಿ ತೊಡಗಿದ ಇಂದ್ರಿಯಗಳನ್ನು ನಿಗ್ರಹ ಮಾಡಿ ಮನದಲ್ಲಿ ಹಾದರ ಮಾಡುವವನು ಶರಣನಲ್ಲ. ಕಾರ್ಯನಿರ್ವಹಿಸುವ ಇಂದ್ರಿಯಗಳು ತನುವಿನಲ್ಲಿ ನಿವೃತ್ತಿ ಹೊಂದುವಂತೆ ಮಾಡುವುದು ತೋರಿಕೆಯ ಶರಣನಿಗೆ ಸಾಧ್ಯವಾಗುವುದಿಲ್ಲ. ಇಂದ್ರಿಯಗಳ ಮೂಲಕಾರ್ಯ, ಹೆಸರಿಟ್ಟುಕೊಂಡ ಶರಣನಿಗೆ ಅರ್ಥವಾಗುವುದಿಲ್ಲ. ಆತನಿಗೆ ಮಠದ ಸಂಪತ್ತು ಆಸ್ತಿಯ ಲೆಕ್ಕ ಸಿಕ್ಕುವುದೇ ಹೊರತು ತನುವಿನ ಸಂಪತ್ತಿನ ಲೆಕ್ಕ ಸಿಕ್ಕುವುದಿಲ್ಲ.

ರುಚಿ ಬಯಸುವ ನಾಲಿಗೆಯಿಂದ ತನುವಿನ ಕುದಿತ ನಿಲ್ಲುವುದಿಲ್ಲ. ಸಂಪತ್ತು ಮುಟ್ಟುವ ಕೈಗಳಿಂದ ತನುವಿನ ಚಂಚಲತೆ ನಿಲ್ಲುವುದಿಲ್ಲ. ಸೂತಕ ಮುಸುಕಿದ ಕಣ್ಣುಗಳಿಂದ ತನುವಿನ ಕಾಮಗುಣ ನಿಲ್ಲುವುದಿಲ್ಲ. ಇಂದ್ರಿಯಗಳನ್ನು ನಿವೃತ್ತಿಗೊಳಿಸದ ತನುವಿನ ಜನ್ಮ ನಿರರ್ಥಕ.

ಕಾವಿ ಹೊದ್ದು ಪೀಠದ ಮೇಲೆ ಕುಳಿತು ಇಂದ್ರಿಯಗಳು ನಿವೃತ್ತಿಯಾಗದ ತನುವಿಗೆ ಶರಣನೆಂತೆಂಬೆ ? ಅದು ಇಂದ್ರಿಯಗಳಿಗೆ ಶರಣು ಹೋದ ತನು. ಅವುಗಳನ್ನು ನಿವೃತ್ತಿಗೊಳಿಸಲು ತನುವಿನ ಜ್ಞಾನಕ್ಕೆ ಮನ ಶರಣು ಹೋದ ತನುವೇ ಶರಣ ತನು. ಆ ತನುವಿಗೆ ಕಾವಿ ಖಾದಿ ಖಾಕಿ ವಸ್ತ್ರಗಳು ಬೇಕಿಲ್ಲ. ಮಠ ಪೀಠ ಪಲ್ಲಕ್ಕಿಗಳ ಅವಶ್ಯಕತೆಯೂ ಇಲ್ಲ. ಇದು ತನ್ನನ್ನು ತಾನು ಪ್ರಯೋಗಕ್ಕೆ ಒಡ್ಡಿಕೊಂಡ ಶರಣನ ಕೆಲಸ. ಇಂದ್ರಿಯಗಳನ್ನು ನಿವೃತ್ತಿ ಮಾಡಿಕೊಂಡು ಜ್ಞಾನಕ್ಕೆ ಶರಣುಹೋದ ನಿವೃತ್ತಿ ಸಂಗಯ್ಯ ಶರಣರ ಕೆಲಸ.

□

# ಮರೆವಿನಿಂದಾದ ಕುತ್ತು ಅರಿವಿನಿಂದಲೇ ಬಯಲು

**ಇಲ್ಲದ ಕುತ್ತವ ಕೊಂಡು ಬಲ್ಲವರಬಾಯ ಹೊಗಹೋದಡೆ**
**ಆ ಬಲ್ಲ ಬಲ್ಲವರೆಲ್ಲ ಆ ಬಲ್ಲೆಯಲ್ಲಿ ಅಲ್ಲತ್ತಗೊಳುತ್ತಿದ್ದರು.**
**ಇದೆಲ್ಲಿಯ ಕುತ್ತವೆಂದು ತಿಳಿದು ವಿಚಾರಿಸಲು**
**ಅದಲ್ಲೇ ಬಯಲಾಯಿತ್ತು, ಗುರುಸಿದ್ಧ ಮಲ್ಲಾ**

**- ಪಂಡಿತಾರಾಧ್ಯ ಶರಣರು**

ಅರಿವಿನ ತನುವು ಕುತ್ತು ರಹಿತವಾದುದು. ಮರೆವಿನಿಂದ ತನುವಿಗೆ ಕುತ್ತು ಬಂದರೆ ಅದು ಬಲ್ಲತನುವಿನಿಂದ ಕುತ್ತು ಪರಿಹರಿಸಿಕೊಳ್ಳಬೇಕು. ಆದರೆ ಬಲ್ಲ ತನುಗಳು ತನಗೆ ಬಲ್ಲಂತೆ ಹೇಳಿ ತನುವಿನ ಕುತ್ತು ಇನ್ನೂ ಕುದಿಯುವಂತೆ ಮಾಡುತ್ತವೆಯೇ ಹೊರತು ಶಮನಗೊಳ್ಳುವುದಿಲ್ಲ.

ಮರೆವಿನಿಂದ ತನುವಿಗೆ ಬಂದ ಸಂಕಟವನ್ನು ತನ್ನಂತೆ ಇರುವ ಮತ್ತೊಂದು ತನು ಪರಿಹರಿಸಬಲ್ಲುದೆ ? ತನುವಿನ ಅಜ್ಞಾನದಿಂದಾದ ಸಂಕಟವನ್ನು ತನುವಿನ ಜ್ಞಾನದಿಂದಲೇ ಪರಿಹರಿಸಿಕೊಳ್ಳಬೇಕು.

'ಬಡ ಪಶು ಪಂಕದಲ್ಲಿ ಬಿದ್ದಡೆ ಕಾಲ ಬಡಿವುದಲ್ಲದೆ ಮತ್ತೇನ ಮಾಡಬಲ್ಲುದಯ್ಯಾ? '

ಅಜ್ಞಾನದಿಂದ ಪಶು ಹುದಲಿನಲ್ಲಿ ಬಿದ್ದಾಗ ಪಶುಪತಿಯೆಂಬ ಜ್ಞಾನದಿಂದಲೇ ವಿಚಾರಿಸಿ ಪಶು ಮೇಲೇರಬೇಕು.

ಬಲ್ಲವರು ಬಲ್ಲೆವೆಂಬ ರೋಗದಿಂದ ಬಳಲುತ್ತಿದ್ದಾರೆ. ಬಲ್ಲೆನೆಂಬ ತನುವಿನ ರೋಗ ಹುದುಲಿನಲ್ಲಿ ಬಿದ್ದ ಹೊಂಡದ ಕುತ್ತಿಗಿಂತ ದೊಡ್ಡದು.

**ಇದೆಲ್ಲಿಯ ಕುತ್ತವೆಂದು ತಿಳಿದು ವಿಚಾರಿಸಲು ಅದಲ್ಲೇ ಬಯಲಾಯಿತ್ತು , ಗುರುಸಿದ್ಧ ಮಲ್ಲಾ :**

ತನುವಿನ ಮನದಿಂದಾದ ಕುತ್ತು ತನುವಿನ ಅರಿವಿನಿಂದ ವಿಚಾರಿಸಲು ಆ ಅರಿವಿನಲ್ಲಿಯೇ ಬಯಲಾಯಿತು. ಎಂದು ಪಂಡಿತಾರಾಧ್ಯರು ತನುವಿನ ಸಂಕಟವನ್ನು ತನುವಿನಲ್ಲಿಯೇ ಪರಿಹರಿಸಿಕೊಳ್ಳುವ ಸೂತ್ರ ಕರುಣಿಸಿದ್ದಾರೆ.

□

**ಅರಿವಿನ ಪರಿಮಳ :**

- □ ತನುವಿನ ಅಜ್ಞಾನದಿಂದಾದ ಸಂಕಟವನ್ನು ತನುವಿನ ಜ್ಞಾನದಿಂದಲೇ ಪರಿಹರಿಸಿಕೊಳ್ಳಬೇಕು.
- □ ಬಲ್ಲವರು ಬಲ್ಲೆವೆಂಬ ರೋಗದಿಂದ ಬಳಲುತ್ತಿದ್ದಾರೆ. ಬಲ್ಲೆನೆಂಬ ತನುವಿನ ರೋಗ ಹುದುಲಿನಲ್ಲಿ ಬಿದ್ದ ಹೊಂಡದ ಕುತ್ತಿಗಿಂತ ದೊಡ್ಡದು.

# ಜಂಗಮ ಎನ್ನುವುದು ಜಾತಿಯಲ್ಲ ಅರಿವಿನ ದಾಸೋಹದ ಪರಂಜ್ಯೋತಿ

**ಗುರು ಪೂಜಕರು ಲಿಂಗವನೆತ್ತಬಲ್ಲರು ?**
**ಲಿಂಗ ಪೂಜಕರು ಜಂಗಮವನೆತ್ತ ಬಲ್ಲರು ?**
**ಜಂಗಮ ದಾಸೋಹವೆಂಬುದು ಉಭಯದ ನಾಸ್ತಿ ;**
**ಚಂದೇಶ್ವರ ಲಿಂಗವೆಂಬ ಲಿಂಗದ ಪೂಜೆ**

**- ನುಲಿಯ ಚಂದಯ್ಯ ಶರಣರು**

**ಗುರು ಪೂಜಕರು ಲಿಂಗವನೆತ್ತ ಬಲ್ಲರು ? :**

ಶರಣರು ಸಕಲ ತನುಗಳು ಸುಖವಾಗಿರಲೆಂದು ಬಯಸಿದ ಮಹಾನುಭಾವರು. ತನು ಮನದಲ್ಲಿದ್ದ ಸೂಕ್ಷ್ಮದೋಷಗಳನ್ನು ಅರಿವಿನಿಂದ ಕಳೆದುಕೊಂಡು ಅರಿವಿನ ತನುವಾಗಬೇಕೆಂದು ಪ್ರಯತ್ನಿಸಿದವರು. ಅದಕ್ಕಾಗಿಯೇ ನುಲಿಯ ಚಂದಯ್ಯ ಶರಣರು ಸೂಕ್ಷ್ಮಾತಿ ಸೂಕ್ಷ್ಮ ವಿಷಯಗಳನ್ನು ಈ ವಚನದಲ್ಲಿ ಪ್ರಸ್ತಾಪಿಸಿದ್ದಾರೆ.

ತನುಗಳೆಲ್ಲ ಒಂದೇ. ಕಲಿತು ಗುರುವಾಯಿತು. ಕೇಳಿ ಶಿಷ್ಯನಾಗಿ ಗುರುವಿನ ತನುವನ್ನು ಆರಾಧಿಸಿತು. ಹಗಲಿರುಳೂ ಸೇವೆ ಮಾಡಿತು. ಪುಸ್ತಕದಲ್ಲಿರುವುದೆಲ್ಲ ಓದಿದರೆ ತನುವಿಗೆ ತಿಳಿಯುತ್ತದೆ. ಓದಿ ವೇಷ ಹಾಕಿ ಗುರು ತನುವಾಯಿತು. ಕೇಳಿ ಸೇವೆ ಮಾಡಿ ಶಿಷ್ಯ ತನುವಾಯಿತು. ಓದಿದ ತನು ಪುಸ್ತಕವನ್ನು ಆರಾಧಿಸಿತು. ಕೇಳಿದ ತನು ಹೇಳಿದ ಗುರು ತನುವನ್ನು ಆರಾಧಿಸಿತು.

ಇವೆರಡೂ ತನುಗಳಿಗೆ ತನುವಿನಲ್ಲಿದ್ದ ಅರಿವು ದೂರವಾಯಿತು. ಗುರು ತನುವಿಗೆ ಪುಸ್ತಕದಲ್ಲಿದ್ದ ಸಂಪತ್ತು ತನುವಿನ ಸಂಪತ್ತೇ ಎಂದು ತಿಳಿಯಲಿಲ್ಲ. ಶಿಷ್ಯ ತನುವಿಗೆ ಏನೂ ಓದದಿದ್ದರೂ ಹೇಳಿದ್ದು ತಿಳಿಯುತ್ತದಲ್ಲ ; ಹೇಳಿದ ತನು ಕೇಳಿದ ತನುವಿನಲ್ಲಿದ್ದ ಶಕ್ತಿ ಒಂದೇ ಆಗಿರಬೇಕಲ್ಲ ಎನ್ನುವುದನ್ನು ಯೋಚಿಸಲಿಲ್ಲ. ಹೀಗಿರುವ ಗುರು ಶಿಷ್ಯ ತನುಗಳೆರಡೂ ಅರುವನೆತ್ತ ಬಲ್ಲವು ? ಎಂದು ಪ್ರಶ್ನಿಸಿದ್ದಾರೆ ನುಲಿಯ ಚಂದಯ್ಯನವರು.

**ಲಿಂಗ ಪೂಜಕರು ಜಂಗಮವನೆತ್ತ ಬಲ್ಲರು ?**
**ಜಂಗಮ ದಾಸೋಹವೆಂಬುದು ಉಭಯದ ನಾಸ್ತಿ ;**

ಲಿಂಗವೆನ್ನುವುದು ತನುವಿನಲ್ಲಿರುವ ಅರಿವು ಬಳಕೆ ಮಾಡಿಕೊಳ್ಳುವುದಕ್ಕಾಗಿ ಪೂರ್ವಜರು ಸಿದ್ಧಪಡಿಸಿದ ಒಂದು ಉಪಕರಣ. ಹೊರಾವರಣ ಕಪ್ಪು ಕವಚದಿಂದ ಕೂಡಿ ಒಳಗೆ ಪಾಣಿವಾಟವಿದೆ. ಪಾಣಿವಾಟ ಕಾಣುವುದಿಲ್ಲ. ಹಾಗೆಯೇ ತನುವಿನೊಳಗಣ ಅರಿವೂ ಕಾಣುವುದಿಲ್ಲ. ಕತ್ತಲ ಕೋಣೆಯಲ್ಲಿ ಬಲ್ಬ್ ಕಾಣುವುದಿಲ್ಲ. ಬಟನ್ ಹುಡುಕಿ ಆನ್ ಮಾಡಿದರೆ ಬಲ್ಬ್ ಬೆಳಗುತ್ತದೆ. ಕೋಣೆಯೆಲ್ಲಾ ಬೆಳಕಾಗುತ್ತದೆ. ಅಲ್ಲಿದ್ದ ಕತ್ತಲು ಬೆಳಕಿನಲ್ಲಿ ಸೇರಿ ಜಂಗಮವಾಗಿ ಬೆಳಗುತ್ತದೆ. ಬೆಳಕಿನಲ್ಲಿ ಸೇರಿದ ಕತ್ತಲು ಮತ್ತೆ ಕತ್ತಲಾಗಲರಿಯದು. ಹೀಗೆ (ಲಿಂಗ) ಅರಿವು ತೋರಿದ ಗುರು, ನೋಡಿದ ಶಿಷ್ಯರಿಬ್ಬರು ಜಂಗಮರು.

ಜಂಗಮರಾಗಿ ತನುವಿನ ಅರಿವನ್ನು ಅನುಭವಿಸಬೇಕು ; ಪಾಲಿಸಬೇಕು.

ಅದು ಜಂಗಮನ ಕರ್ತವ್ಯ ! ಆಗ ಗುರುವಿಗೆ ಗುರುತನವೆಂಬ ಹಿರಿತನವೂ ಇಲ್ಲ. ಶಿಷ್ಯನಿಗೆ ಶಿಷ್ಯನೆಂಬ ಕಿಂಕರತ್ವವೂ ಇಲ್ಲ. ಗುರುಶಿಷ್ಯರಿಬ್ಬರೂ ಅರಿವಿನ ಜ್ಯೋತಿಯಾಗಿ ಬೆಳಗುವ ಜಂಗಮರು. ಚಂದೇಶ್ವರ ಲಿಂಗವೆಂಬ ಅರಿವಿನ ಹಣತೆಯನ್ನು ಚುಂಬಿಸಿ ಬೆಳಗುವ ಕಾಯಕದಲ್ಲಿ ತೊಡಗಿದ ಸೇವಕರು.

ಜಂಗಮ ಎನ್ನುವುದು ಜಾತಿಯಲ್ಲ; ಅರಿವಿನ ದಾಸೋಹ ! ಗುರು ಶಿಷ್ಯ ಎನ್ನುವ ಅಹಂಕಾರವನ್ನು ನಷ್ಟಮಾಡಿಕೊಂಡು ಬೆಳಗಿಂಗೆ ಬೆಳಕಾಗಿ ಬೆಳಗುವ ಪರಂಜ್ಯೋತಿ.

□

**ಅರಿವಿನ ಪರಿಮಳ :**

□ ಓದಿ ವೇಷ ಹಾಕಿ ಗುರು ತನುವಾಯಿತು. ಕೇಳಿ ಸೇವೆ ಮಾಡಿ ಶಿಷ್ಯ ತನುವಾಯಿತು. ಓದಿದ ತನು ಪುಸ್ತಕವನ್ನು ಆರಾಧಿಸಿತು. ಕೇಳಿದ ತನು ಹೇಳಿದ ಗುರು ತನುವನ್ನು ಆರಾಧಿಸಿತು.

# ತನುವಿನ ಮನಕ್ಕೆ ಅರಿವಿನ ಕಡಿವಾಣ

**ಇಂದು ಬಂದ ಬಹುರೂಪವ ನೋಡಿರಯ್ಯ**
**ಗತಿಯ ಹೊದ್ದದೆ,ಮತಿಯ ಹೊದ್ದದೆ ಸ್ಥಿತಿಯ ಹೊದ್ದದೆ,**
**ಸ್ಥಾನವ ಹೊದ್ದದೆ, ಐವರು ಕಟ್ಟಿದ ಕಟ್ಟಳೆಯ ಮೀರಿ**
**ನಾನಾಡುವೆ ಬಹುರೂಪವ.**
**ರೇಕಣ್ಣ ಪ್ರಿಯ ನಾಗಿನಾಥಾ, ಬಸವಣ್ಣ ನಿಂದ ಬದುಕಿದೆ**

**- ಬಹುರೂಪಿ ಚೌಡಯ್ಯ ಶರಣರು**

ತನು ರೂಪವಾಗಿ ಕಂಡರೂ ರೂಪದ ಹಿಂದೆ ಬಹುರೂಪದ ರಾಕ್ಷಸತ್ವವೇ ಅಡಗಿರುತ್ತದೆ. ಗತಿ ಮತಿ ಸ್ಥಿತಿ ಸ್ಥಾನ ಮಾನಗಳ ಅರಿವೇ ಇಲ್ಲದ ಅಧಿಕಾರಿ,ಶಾಸಕ, ಸಚಿವ, ನ್ಯಾಯಮೂರ್ತಿ,ಗುರು, ಶಿಕ್ಷಕ, ಒಡೆಯ ಸ್ಥಾನ ಮಾನದ ತನುಗಳು ಅರಿವಿನ ಕಟ್ಟಳೆ ಮೀರಿ ಬಹುರೂಪದ ರಕ್ಕಸ ತನುಗಳಾಗಿ ವರ್ತಿಸುತ್ತವೆ.

ಗುರುವಾದ ತನು ಅರಿವಿನ ಪಾಠ ಮಾಡದೆ ಹಣ , ಹಾದರಕ್ಕೆಳೆಸುತ್ತದೆ. ಶಾಸಕ ಸಚಿವ ತನು ಸೇವೆ ಮರೆತು ಸಂಪತ್ತು ಅಧಿಕಾರ,ಹಾದರಕ್ಕೆಳೆಸುತ್ತದೆ. ಅಧಿಕಾರಿ ತನು ಸೇವಾ ಕಟ್ಟಳೆಗನ್ನು ಮರೆತು ಭ್ರಷ್ಟಾಚಾರಕ್ಕೆಳೆಸುತ್ತದೆ. ನ್ಯಾಯ ಕೊಡಬೇಕಾದ ತನು ಹಣಕ್ಕಾಗಿ ಅನ್ಯಾಯದ ಹಾದರಕ್ಕೆಳೆಸುತ್ತದೆ.

ಒಡೆಯನ ತನುವಿನ ಬಹುರೂಪೀ ಹಗರಣಗಳಿಂದ ಸ್ವರ್ಗದಂತಿರಬೇಕಾದ ಮನೆ ನರಕಕ್ಕೆಳೆಸುತ್ತದೆ. ಹೀಗೆ ತನುಗಳು ಪಡುವ ಸಂಕಟ ಮನೆ ಹಳ್ಳಿ ಪಟ್ಟಣ ರಾಜ್ಯ ದೇಶಕ್ಕೆ ಮಾತ್ರ ಸೀಮಿತವಲ್ಲ. ಇಡೀ ಪ್ರಪಂಚದ ತನುಗಳು ಮುಖವಾಡದ ಬಹುರೂಪದಿಂದ ಯಾತನೆ ಅನುಭವಿಸುತ್ತಲಿವೆ. ಅರಿವಿನ ತನುಗಳನ್ನು ಹೊರತು ಪಡಿಸಿ.

ತನುವಿನಲ್ಲಿ ಅರಿವೂ ಇದೆ. ಅರಿವನ್ನು ಮರೆಮಾಡುವ ಬಹು ರೂಪೀ ಮನವೆಂಬ ಮರೆವೂ ಇದೆ.

**ಐವರು ಕಟ್ಟಿದ ಕಟ್ಟಳೆಯ ಮೀರಿ ನಾನಾಡುವೆ ಬಹುರೂಪವ :**

ಕಣ್ಣು,ಕಿವಿ,ಮೂಗು, ನಾಲಿಗೆ, ಚರ್ಮ ಇವು ತನುವಿನ ಐದು ಅರಿವಿನ ಕಟ್ಟಳೆಗಳು. ಅರಿವಿನ ಕಣ್ಣಿನಲ್ಲಿ ಬಹುರೂಪದ ಮನ ಸೇರಿ ಆಭರಣ ನೋಡಿ ಖರೀದಿಸುಂತೆ, ಇಲ್ಲ ಕದಿಯುವಂತೆ ಮಾಡುತ್ತದೆ. ರೂಪ ನೋಡಿ ಹಾದರಕ್ಕೆಳೆಸುತ್ತದೆ. ಕರೆನ್ಸಿ ನೋಡಿ ಭ್ರಷ್ಟಾಚಾರಕ್ಕೆಳೆಸುತ್ತದೆ. ತನುವಿನ ಸ್ಥಾನಮಾನಗಳನ್ನು ಮನ ಲೆಕ್ಕಿಸುವುದಿಲ್ಲ.ಐದೂ ಜ್ಞಾನೇಂದ್ರಿಯಗಳನ್ನು ಮನ ಬಹುರೂಪಕ್ಕೆಳಸಿ ತನುವನ್ನು ಸದಾ ಸಂಕಟಕ್ಕೀಡು ಮಾಡುತ್ತದೆ. ಮಾಡಿದ ಹಾದರ, ಹಗರಣ,ಕಳುವು, ಸುಲಿಗೆ, ಕೊಲೆ ಅತ್ಯಾಚಾರಗಳು ತನುವಿನಲ್ಲಿ ಸಂಗ್ರಹವಾಗಿ ನೆನಪಾದಾಗೊಮ್ಮೆ ತನು ಸಂಕಟಕ್ಕೀಡಾಗುತ್ತದೆ. ಅರಿವು ತನ್ನತ್ತ ಸೆಳೆಯಲು ಮನದ ಬಹುರೂಪದ ಹಗರಣಗಳನ್ನು ನೆನಪು ಮಾಡಿ ಮನವನ್ನು ಕುಕ್ಕಿ ಕುಕ್ಕಿ ಕೊಲ್ಲುತ್ತದೆ. ಅರಿವೆಂಬ ಬೆಕ್ಕಿಗೆ ಚೆನ್ನಾಟವಾದರೆ ಮನವೆಂಬ ಬಹುರೂಪೀ ಇಲಿಗೆ ಪ್ರಾಣ ಸಂಕಟ.

ಅರಿವಿನ ಕಣ್ಣಿಗೆ ಹಳದಿ ಲೋಹ ಕಂಡರೆ,ಬಹುರೂಪೀ ಕಣ್ಣಿಗೆ ಆಭರಣ ಕಾಣುತ್ತದೆ. ಅರಿವಿನ ಕಣ್ಣಿಗೆ ತನ್ನಂತೆ ಇರುವ ಚರ್ಮ ಕಂಡರೆ, ಬಹುರೂಪಿ ಕಣ್ಣು ಕಾಮಕ್ಕೆಳೆಸುತ್ತದೆ. ಮನ ವಸ್ತು

ವಿನ ಬಹುರೂಪ ನೋಡಿ ತನುವಿನೊಂದಿಗೆ ಸುಖಿಸಲು ಮುಂದಡಿಯಿಟ್ಟರೆ, ಅರಿವು ವಸ್ತುವಿನ ಸತ್ಯ ತಿಳಿದು ತನುವನ್ನು ತಡೆದು ತನ್ನ ಹಾಗೂ ವಸ್ತುವಿನ ದರ್ಶನ ಮಾಡಿಸಿ ಜ್ಞಾನ ತನುವನ್ನಾಗಿಸುತ್ತದೆ.

ಕ್ಷಣ ಕ್ಷಣಕ್ಕೂ ಬಹುರೂಪ ಧರಿಸಿ ಸಂಕಟದಲ್ಲಿರುವ ತನು ಪೀಠದಲ್ಲಿ ಕುಳಿತು ಪಾಠ ಮಾಡುವ ಗುರುವಾದರೇನು? ಶಾಸಕ, ಸಚಿವ ಮಂತ್ರಿ ಪ್ರಧಾನಿಯಾದರೇನು? ವಿದ್ಯಾರ್ಥಿ ಅಧ್ಯಾಪಕ ಮನೆಯ ಒಡೆಯನಾದರೇನು? ಬಹುರೂಪಿ ಮನವೆಂಬ ಕಾಯಿಲೆಗೆ ತುತ್ತಾದವನೇ. ತನು ಯಾವ ಸ್ಥಾನದಲ್ಲಿದ್ದರೇನು? ಆ ಸ್ಥಾನಕ್ಕೆ ಹಾಗೂ ಅರಿವಿನ ತನುವಿಗೆ ಗೌರವವನ್ನು ತಂದು ಕೊಡಲಾರದು. ಸರಕಾರ,ಕೋರ್ಟ್, ಜನ ಅಪರಾಧ ಮಾಡಿದ ತನುವನ್ನು ಗುರುತಿಸುತ್ತಾರೆ. ಅಪರಾಧಕ್ಕೆ ಕಾರಣವಾದ ಬಹುರೂಪಿ ಮನವನ್ನು ಗುರುತಿಸಲರಿಯರು.

ತನುವಿನ ಮಾಧ್ಯಮ ಅರಿವು ಮಾತ್ರ. ಅದು ನಿಶ್ಚಲ ! ತನುವಿನಲ್ಲಿ ಬೆರೆತ ಬಹುರೂಪಿ ಮನವನ್ನು ಅತ್ತ ಇತ್ತ ಹೋಗದಂತೆ ಹೆಳವನನ್ನಾಗಿ ಮಾಡಿದರು ಬಸವಣ್ಣ. ಕಣ್ಣಿನಲ್ಲಿ ಬೆರೆತ ಬಹು ರೂಪಿ ಮನವನ್ನು ಸುತ್ತಿ ಸುಳಿದು ನೋಡದಂತೆ ಅಂಧಕನನ್ನಾಗಿ ಮಾಡಿದರು ಬಸವಣ್ಣ. ಕಿವಿಯಲ್ಲಿ ಬೆರೆತ ಬಹುರೂಪಿ ಮನವನ್ನು ಮತ್ತೊಂದ ಕೇಳದಂತೆ ಕಿವುಡನನ್ನಾಗಿ ಮಾಡಿದರು ಬಸವಣ್ಣ. ಅರಿವಿನ ಶರಣರ ಸಂಗವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಬಹೂರೂಪಿ ಮನವನ್ನು ತನುವಿನ ಮಾಧ್ಯಮವಾದ ಅರಿವಿನಲ್ಲಿ ಬೆರೆಸುವ ಬಗೆ ಹೇಳುತ್ತಾ ಪಾಠ ಮಾಡಿದ ಬಸವಣ್ಣ ಮಹಾ ಮಾಧ್ಯಮ ಪುರುಷರೂ ಹೌದು !

ಆ ಮಹಾನುಭಾವರಿಂದ ಜಾತಿ ಮತ, ಪಂಥ ಹೆಣ್ಣು ಗಂಡು ಎಂಬ ತನುವಿನ ಬಹುರೂಪಿ ರೋಗ ಉದುರಿಹೋಯಿತು. ಶ್ರೀಮಂತ ಬಡವ, ರಾಜ ಪ್ರಧಾನಿ ಕಾಲಾಳು, ಅಧಿಕಾರಿ ಎಂಬ ಬಹುರೂಪಿ ವ್ಯವಹಾರಿಕ ರೋಗವು ಉದುರಿಹೋಯಿತು. ಮಾನ ಅಪಮಾನ ಎಂದು ಸದಾ ಸಂಕಟಪಡುವ ತನುವಿನ ರೋಗವು ಉದುರಿಹೋಯಿತು.

ಹೀಗೆ ಅರಿವಿನ ತನುವಾಗಲು ತಾಂತ್ರಿಕ ಪಾಠ ಮಾಡಿದ ಮಾಧ್ಯಮ ಪುರುಷ ಬಸವಣ್ಣ ದಿ ಗ್ರೇಟ್ ಜರ್ನಲಿಸ್ಟ್. ತನುವಿನ ಕಣ್ಣು,ಕಿವಿ,ಮೂಗು, ನಾಲಿಗೆ ಚರ್ಮ ಎಂಬ ಮನದ ಕಟ್ಟಳೆ ಯನ್ನು ಅರಿವಿನಿಂದ ಬಿಚ್ಚಿದ ಬಸವಣ್ಣನಿಂದ ಬದುಕಿ ಸದಾ ಸುಖಿಯಾದೆ ಎಂದು ಚೌಡಯ್ಯ ಶರಣರು ಬೆಡಗಿನಿಂದ ವರದಿ ಮಾಡಿದ್ದಾರೆ.

□

**ಅರಿವಿನ ಪರಿಮಳ:**

- ಕ್ಷಣ ಕ್ಷಣಕ್ಕೂ ಬಹುರೂಪ ಧರಿಸಿ ಸಂಕಟದಲ್ಲಿರುವ ತನು ಪೀಠದಲ್ಲಿ ಕುಳಿತು ಪಾಠ ಮಾಡುವ ಗುರುವಾದರೇನು? ಶಾಸಕ,ಸಚಿವ ಮಂತ್ರಿ ಪ್ರಧಾನಿಯಾದರೇನು? ವಿದ್ಯಾರ್ಥಿ ಅಧ್ಯಾಪಕ ಮನೆಯ ಒಡೆಯನಾದರೇನು? ಬಹುರೂಪಿ ಮನವೆಂಬ ಕಾಯಿಲೆಗೆ ತುತ್ತಾದವನೇ.
- ಸರಕಾರ,ಕೋರ್ಟ್, ಜನ ಅಪರಾಧ ಮಾಡಿದ ತನುವನ್ನು ಗುರುತಿಸುತ್ತಾರೆ. ಅಪರಾಧಕ್ಕೆ ಕಾರಣವಾದ ಬಹುರೂಪಿ ಮನವನ್ನು ಗುರುತಿಸಲರಿಯರು.
- ತನುವಿನ ಮಾಧ್ಯಮ ಅರಿವು ಮಾತ್ರ. ಅದು ನಿಶ್ಚಲ ! ತನುವಿನಲ್ಲಿ ಬೆರೆತ ಬಹುರೂಪಿ ಮನವನ್ನು ಅತ್ತ ಇತ್ತ ಹೋಗದಂತೆ ಹೆಳವನನ್ನಾಗಿ ಮಾಡಿದರು ಬಸವಣ್ಣ. ಕಣ್ಣಿನಲ್ಲಿ ಬೆರೆತ ಬಹುರೂಪಿ ಮನವನ್ನು ಸುತ್ತಿ ಸುಳಿದು ನೋಡದಂತೆ ಅಂಧಕ ನನ್ನಾಗಿ ಮಾಡಿದರು ಬಸವಣ್ಣ. ಕಿವಿಯಲ್ಲಿ ಬೆರೆತ ಬಹುರೂಪಿ ಮನವನ್ನು ಮತ್ತೊಂದ ಕೇಳದಂತೆ ಕಿವುಡನನ್ನಾಗಿ ಮಾಡಿದರು ಬಸವಣ್ಣ. ಅರಿವಿನ ಶರಣರ ಸಂಗವಲ್ಲದೆ ಅನ್ಯ ವಿಷಯಕ್ಕೆಳಸದಂತೆ ಬಹೂರೂಪಿ ಮನವನ್ನು ತನುವಿನ ಮಾಧ್ಯಮವಾದ ಅರಿವಿನಲ್ಲಿ ಬೆರೆಸುವ ಬಗೆ ಹೇಳುತ್ತಾ ಪಾಠ ಮಾಡಿದ ಬಸವಣ್ಣ ಮಹಾ ಮಾಧ್ಯಮ ಪುರುಷರೂ ಹೌದು !

# ಗುರು ಲಿಂಗ ಜಂಗಮ ಪ್ರಸಾದಿ ಭಕ್ತ ಎಂಬ ಅರಿವು ಸಮ್ಮಿಲನಗೊಂಡ ತನು ಪರಮಜ್ಞಾನಿ

**ನನಗೆ ನಾನೆ ಗುರುವಾದೆನಯ್ಯಾ. ನನಗೆ ನಾನೆ ಲಿಂಗವಾದೆನಯ್ಯಾ.**
**ನನಗೆ ನಾನೆ ಜಂಗಮವಾದೆನಯ್ಯಾ. ನನಗೆ ನಾನೆ ಪ್ರಸಾದ ವಾದೆನಯ್ಯಾ.**
**ನನಗೆ ನಾನೆ ಭಕ್ತನಾದೆನಯಾ. ರೇಕಣ್ಣಪ್ರಿಯ ನಾಗಿನಾಥನಲ್ಲಿ**
**ಆಗು ಹೋಗನರಿಯೆನಯ್ಯಾ.**

**- ಬಹುರೂಪಿ ಚೌಡಯ್ಯ ಶರಣರು**

**ನನಗೆ ನಾನೆ ಗುರುವಾದೆನಯ್ಯಾ :**

ನಾನು ಶಿಷ್ಯ. ನನ್ನೊಳಗಿನ ಅರಿವು ಗುರು. ಶಿಷ್ಯನಿಗೆ ಹೊರಗಿನ ಗುರು ಬೋಧಿಸುವುದಿಲ್ಲ. ಏಕೆಂದರೆ ಆತನಿಗೆ ಈಗಾಗಲೇ ಒಳಗಿನ ಗುರುವಿದ್ದಾನೆ. ಶಿಷ್ಯನಿಗೆ ಗುರು ಯಾರೆಂದು ತಿಳಿಯದಿದ್ದರೆ; ತಿಳಿಸಿ ಹೇಳುವ ಗುರುವಾಗಬೇಕು. ಈತ ಒಂದೆರಡು ಗಂಟೆ ಹೇಳಿಯಾನು. ನಿರಂತರ 24X7 ತಿಳಿ ಹೇಳುವ ಗುರುವಿನಂತೆ ಹೇಳಲಾರ. ಹೊರಗೆ ಹೇಳುವಾತ ದಾರಿತೋರುವ ಗುರು. ಶಿಷ್ಯ ಕೇಳಿ ಸರಿ ಅನ್ನಿಸಿದರೆ ಆ ದಾರಿಯಲ್ಲಿ ನಡೆದು ಗುರಿಸೇರಬೇಕು. ಅರಿವೆಂಬ ಗುರುವೇ ತಾನಾಗಬೇಕು. ತನಗೆ ತಾನೆ ಗುರುವಾಗಬೇಕು.

**ನನಗೆ ನಾನೆ ಲಿಂಗವಾದೆನಯ್ಯಾ :**

ಗುರು ಶಿಷ್ಯನಿಗೆ ಬೋಧಿಸುತ್ತಾನೆ. ಶಿಷ್ಯ ಗುರುವಿನ ಬೋಧೆ ಕೇಳುತ್ತಾನೆ. ಕೇಳುವಾತ ಹೇಳುವಾತ ಒಂದೇ ಆದರೂ ಹೇಳುವ ಕೇಳುವ ಕೆಲಸ ನಡೆದಿದೆ. ಇವೆರಡೂ ಕ್ರಿಯೆ ನಿಲ್ಲುವುದೇ ನದಿಯೊಳಗೆ ನದಿ ಬೆರೆಸಿದಂತೆ, ಕಿಚ್ಚಿನೊಳಗೆ ಕೋಲು ಬಚ್ಚಿಟ್ಟಂತೆ. ಅತೀತನ ಮೇಲೆ ಆನಂದದ ಸಿಂಹಾಸನವನಿಕ್ಕಿ ಕುಳಿತಂತೆ. ಹೀಗೆ ಗುರು ಶಿಷ್ಯನೆಂಬ ನಾಮ ಹೊಂದಿಯೂ ಅನಾಮಿಕನಾಗುವುದೇ ತನಗೆ ತಾನೆ ಲಿಂಗವಾದಂತೆ.

**ನನಗೆ ನಾನೆ ಜಂಗಮವಾದೆನಯ್ಯಾ :**

ತನುವಿನಲ್ಲಿ ಅರಿವಿದೆ. ಆ ಅರಿವೇ ಗುರು. ಅರಿವನ್ನು ತಿಳಿದು ಬೋಧಿಸಬಲ್ಲ; ಪಾಲಿಸುವುದು ಜಟಿಲ.

ರೂಪ ಬಲು ಸುಂದರ. ಮನಕ್ಕೆ ಭೋಗಿಸುವ ಕಾತುರ. ಅರಿವಿನ ಎಚ್ಚರದ ಗಂಟೆಯನು ಮನ ಪಾಲಿಸಲರಿಯದು. ತನ್ನಂತೆ ಇರುವ ಚರ್ಮ ಮೂಳೆ ಮಾಂಸ ರಕ್ತ ಮಜ್ಜೆ ಮೇದಸ್ಸುಗಳ ಹೊತ್ತ ತನುವಿನ ವಿವರಣೆ ಅರಿವು ನೀಡಿದಾಗ ಅದನ್ನು ಸದಾ ಪಾಲಿಸುವ ವೀರನೇ ಜಂಗಮ. ತನಗೆ ತಾನೇ ಜಂಗಮ!

**ನನಗೆ ನಾನೇ ಪ್ರಸಾದವಾದೆನಯ್ಯಾ :**

ತನು ಬಿರುನುಡಿಗಳು ಕೇಳಿ ಸಂಕಟಗೊಳ್ಳುತ್ತದೆ. ನೋಡಿದ ದೃಶ್ಯದಿಂದ ಯಾತನೆ ಉಂಟಾಗುತ್ತದೆ. ಶಬ್ದ ದೃಶ್ಯ ತನುವಿನಲ್ಲಿ ಸಂಗ್ರಹವಾಗಿ ನೆನಪಾದಾಗೊಮ್ಮೆ ತನು ತಲ್ಲಣಗೊಳ್ಳುತ್ತದೆ. ಕೊಲೆ

ಆತ್ಮಹತ್ಯೆಕ್ಕೆಳೆಸುತ್ತದೆ. ಕ್ರಿಯೆಯಲ್ಲಿ ನಿರತವಾದರೆ ಸಂಕಟ ಉಲ್ಬಣಗೊಳ್ಳುತ್ತದೆ ಹೊರತು ಸುಖವಾಗುವುದಿಲ್ಲ.

ಅರಿವಿನಿಂದ ಕೇಳಿದರೆ ಶಬ್ದದಲ್ಲಿ ಹುರುಳಿಲ್ಲ. ಒಳ್ಳೆಯ ಶಬ್ದ ಕೆಟ್ಟ ಶಬ್ದವೆಂದು ಪಟ್ಟಿ ಮಾಡಿದರೆ, ಆ ಪಟ್ಟಿಯಲ್ಲಿ ಯಾವ ಶಬ್ದವೂ ಸೇರುವುದಿಲ್ಲ. ಪ್ರತಿ ಶಬ್ದವೂ ಅರಿವೇ. ಅರಿವಿನಿಂದ ಸ್ವೀಕರಿಸಿದರೆ ಕೇಳಿದ ತನುವಿಗೆ ಪ್ರಸಾದವಾಯಿತು. ಸಂಗ್ರಹವಾಗದೆ ಶಬ್ದ ಜೀರ್ಣವಾಯಿತು. ಎಂದೂ ಸಂಕಟವಾಗಲಿಲ್ಲ.

ಶಬ್ದದಂತೆ ದೃಶ್ಯವೂ ಯಾತನಾಮಯ. ದ್ರೌಪದಿಯ ವಸ್ತ್ರಾಪಹರಣಕ್ಕೆ (18 ಅಕ್ಷೋಹಿಣಿ ಸೈನ್ಯ)19,68,300 ಸೈನಿಕರು, 11,80,980 ಕುದುರೆಗಳು, 3,93,660 ಆನೆಗಳು ಬಲಿಯಾದವು. 3,93,660 ರಥಗಳು ಪುಡಿಯಾದವು. ದ್ರೌಪದಿಯ ಶಬ್ದ ಕೌರವರ ತನುಗಳಲ್ಲಿ, ಆಕೆಯ ವಸ್ತ್ರಾಪಹರಣದ ದೃಶ್ಯ ಪಾಂಡವರ ತನುಗಳಲ್ಲಿ ಸಂಗ್ರಹವಾಗಿ ಕ್ಷಣ ಕ್ಷಣಕ್ಕೂ ನರಕಯಾತನೆಯನ್ನುಂಟು ಮಾಡಿದವು.

ಶ್ರೀಕೃಷ್ಣನ ಅರಿವಿನ ಮಾತುಗಳು ರುಚಿಸಲಿಲ್ಲ. ಶಬ್ದ ದೃಶ್ಯಗಳೆರಡೂ ಪ್ರಸಾದವಾಗಲಿಲ್ಲ. ಅಮಾಯಕ ಆನೆ ಕುದುರೆ ಸೈನಿಕರನ್ನು ಬಲಿಪಡೆದವು. ಶಬ್ದ ದೃಶ್ಯಗಳೆರಡೂ ಪ್ರಸಾದವಾಗಿದ್ದರೆ ದ್ರೌಪದಿಯ ಶಬ್ದ ಕೇಳಿದ ಕೌರವರ ತನುಗಳು, ವಸ್ತ್ರಾಪಹರಣ ನೋಡಿದ ಪಾಂಡವರ ತನುಗಳು ಸುಖಿಸುತ್ತಿದ್ದವು.ಕುದುರೆ ಆನೆ ಸೈನಿಕರೂ ಸಾಯುತ್ತಿರಲಿಲ್ಲ.

**ನನಗೆ ನಾನೆ ಭಕ್ತನಾದೆನಯ್ಯಾ ರೇಕಣ್ಣ ಪ್ರಿಯ ನಾಗಿನಾಥನಲ್ಲಿ ಆಗು ಹೋಗನರಿಯೆನಯ್ಯಾ :**

ತನುವಿನಲ್ಲಿ ಅನಂತ ಅರಿವಿನ ಸಂಪತ್ತಿದೆ. ಅರಿವಿನಿಂದ ನೋಡಿ ಸಂಭ್ರಮಿಸುವ ಕಣ್ಣುಗಳು, ಅರಿವಿನಿಂದ ಕೇಳಿ ಆನಂದ ಪಡುವ ಕಿವಿಗಳು, ಅರಿವಿನಿಂದ ಸ್ಪರ್ಶಿಸಿ ಸುಖಿಸುವ ಚರ್ಮ, ಅರಿವಿನಿಂದ ವಾಸಿಸಿ ಆಹ್ಲಾದಿಸುವ ಮೂಗು, ಅರಿವಿನಿಂದ ರುಚಿಸಿ ಅಮೃತೀಕರಿಸುವ ನಾಲಿಗೆ ಎಂಬ ಅರಿವಿನ ಅನಂತ ಭಂಡಾರವೇ ತನುವಿನಲ್ಲಿದೆ.

ಈ ಅರಿವಿನ ಸಂಪತ್ತಿಗೆ ದಾಸನಾಗುವವನೇ ದಾಸ, ಶರಣು ಹೋಗುವವನೇ ಶರಣ. ಈ ಸಂಪತ್ತಿಗೆ ಭಕ್ತಿ ಮಾಡುವವನೇ ಭಕ್ತ. ಆತ ಆಗು ಹೋಗುಗಳನ್ನು ಅರಿಯದ ನಾಗಿನಾಥ! ತನುವಿನಲ್ಲಿಯೇ ಗುರು ಲಿಂಗ ಜಂಗಮ ಪ್ರಸಾದಿ ಭಕ್ತ ಎಂಬ ಅರಿವು ಸಮ್ಮಿಲನಗೊಂಡ ಪರಮ ಜ್ಞಾನಿ!! □

---

**ಅರಿವಿನ ಪರಿಮಳ :**

- ಶಬ್ದದಂತೆ ದೃಶ್ಯವೂ ಯಾತನಾಮಯ. ದ್ರೌಪದಿಯ ವಸ್ತ್ರಾಪಹರಣಕ್ಕೆ (18 ಅಕ್ಷೋಹಿಣಿ ಸೈನ್ಯ)19,68,300 ಸೈನಿಕರು, 11,80,980 ಕುದುರೆಗಳು, 3,93,660 ಆನೆಗಳು ಬಲಿಯಾದವು. 3,93,660 ರಥಗಳು ಪುಡಿಯಾದವು. ದ್ರೌಪದಿಯ ಶಬ್ದ ಕೌರವರ ತನುಗಳಲ್ಲಿ, ಆಕೆಯ ವಸ್ತ್ರಾಪಹರಣದ ದೃಶ್ಯ ಪಾಂಡವರ ತನುಗಳಲ್ಲಿ ಸಂಗ್ರಹವಾಗಿ ಕ್ಷಣ ಕ್ಷಣಕ್ಕೂ ನರಕಯಾತನೆಯನ್ನುಂಟು ಮಾಡಿದವು.
  ಶ್ರೀಕೃಷ್ಣನ ಅರಿವಿನ ಮಾತುಗಳು ರುಚಿಸಲಿಲ್ಲ. ಶಬ್ದ ದೃಶ್ಯಗಳೆರಡೂ ಪ್ರಸಾದವಾಗಲಿಲ್ಲ. ಅಮಾಯಕ ಆನೆ ಕುದುರೆ ಸೈನಿಕರನ್ನು ಬಲಿಪಡೆದವು. ಶಬ್ದ ದೃಶ್ಯಗಳೆರಡೂ ಪ್ರಸಾದವಾಗಿದ್ದರೆ ದ್ರೌಪದಿಯ ಶಬ್ದ ಕೇಳಿದ ಕೌರವರ ತನುಗಳು, ವಸ್ತ್ರಾಪಹರಣ ನೋಡಿದ ಪಾಂಡವರ ತನುಗಳು ಸುಖಿಸುತ್ತಿದ್ದವು.ಕುದುರೆ ಆನೆ ಸೈನಿಕರೂ ಸಾಯುತ್ತಿರಲಿಲ್ಲ.

# ತನುವಿನ ಜ್ಞಾನ-ಅಜ್ಞಾನದ ಯುದ್ಧ

**ಆವ ಪ್ರಾಣಿಗೆಯೂ ನೋವ ಮಾಡಬೇಡ.**
**ಪರನಾರಿಯರ ಸಂಗಬೇಡ.**
**ಪರಧನಕ್ಕಳುಪ ಬೇಡ, ಪರದೈವಕ್ಕೆರಗಬೇಡ.**
**ಈ ಚತುರ್ವಿಧ ತವಕವ ಮಾಡುವಾಗ**
**ಪರರು ಕಂಡಾರು ಕಾಣರು ಎಂದೆನಬೇಡ.**
**ಬಳ್ಳೇಶ್ವರಲಿಂಗಕ್ಕಾರು ಮರೆ ಮಾಡಬಾರದಾಗಿ**
**ಅಘೋರ ನರಕದಲ್ಲಿಕ್ಕುವ**

**- ಬಳ್ಳೇಶ ಮಲ್ಲಯ್ಯ ಶರಣರು**

**ಆವ ಪ್ರಾಣಿಗೆಯೂ ನೋವ ಮಾಡಬೇಡ:**

ತನುವಿನ ಅರಿವು ಬಳ್ಳೇಶ್ವರಲಿಂಗ! ಅದಕ್ಕೆ ಹಿಂಸೆ ಗೊತ್ತೇ ಇಲ್ಲ. ಸದಾ ಅಹಿಂಸಾ ಪರಿಪಾಲಕ! ಕೊಲೆ ಪರನಿಂದೆ ಪ್ರಾಣಿ ಹಿಂಸೆಯಲ್ಲಿ ತನುವಿನೊಂದಿಗೆ ಭಾಗಿಯಾಗಿ ಮನಕ್ಕೆ ಉಪ ದೇಶ ನೀಡುವುದೇ ಅರಿವಿನ ಕಾಯಕ. ಮನ ತನುವಿನೊಂದಿಗೆ ಬೆರೆತು ಯಾರೂ ನೋಡದದ ಜಾಗ ದಲ್ಲಿ ಆ ತನುವಿನಿಂದಲೇ ತನುವನ್ನು ಕೊಲೆ ಮಾಡುತ್ತದೆ. ಸಾಕ್ಷಿ ಇಲ್ಲದಿದ್ದರೆ ಸಮಾಜ,ಕೋರ್ಟು, ಪೊಲೀಸರು ಶಿಕ್ಷೆ ಕೊಡುವುದಿಲ್ಲ; ಆದರೆ ನೋಡಿದ ತನುವಿನ ಅರಿವು, ತನುವು ಇರುವವರೆಗೆ ಶಿಕ್ಷೆ ಕೊಡುವುದು ಬಿಡುವುದಿಲ್ಲ!

**ಪರನಾರಿಯರ ಸಂಗಬೇಡ:**

ಅಂಗ ಪರ ಅಂಗದೊಂದಿಗೆ ಸಂಗ ಬಯಸುವುದು ಮನದ ಚಪಲ. ಅಂಗ ಹೆಣ್ಣೂ ಅಲ್ಲ ಗಂಡೂ ಅಲ್ಲ; ಅದು ಅಂಗ ಮಾತ್ರ. ಶರಣರು ಇದಕ್ಕೆ ಹೆಣ್ಣು ಹೆಣ್ಣು ಕೂಡುವ ಕೂಟವದು ಲೋಕದ ಕೂಟ ಎಂದಿದ್ದಾರೆ. ಅಂಗದ ಮನ ಶರಣನಾದರೆ ಅಂಗದ ಅರಿವು ಪತಿ. ಶರಣ ಸತಿಯಾಗಿ ಅರಿವು ಪತಿಯಾಗಿ ಕೂಡುವ ಕೂಟವದು ಶರಣರ ಕೂಟ ; ಜ್ಞಾನಿಗಳ ಕೂಟ. ಕೂಡದಗಲದ ಕೂಟ ! ಅಂಗ ಅಂಗದೊಂದಿಗೆ ಕೂಡುವ ಕೂಟ ಕೂಡಿ ಅಗಲುವ ಕೂಟ. 'ಅಮೃತಕ್ಕೆ ಹಸಿವುಂಟೆ ? ಜಲಕ್ಕೆ ತೃಷೆ ಯುಂಟೆ ? ಘನ ಪುರುಷಂಗೆ ವಿಷಯವುಂಟೆ ?' ಯಾರೂ ನೋಡುವುದಿಲ್ಲವೆಂದು ಅಂಗ ಅಂಗ ದೊಂದಿಗೆ ಕೂಡಿದರೆ ಅಂಗದ ಅರಿವು ನೋಡಿ ಹಾದರವನ್ನು ಖಂಡಿಸದೆ ಬಿಡದು. ಕ್ಷಣ ಕ್ಷಣಕ್ಕೂ ನೆನಪಿಸಿ ಚುಚ್ಚಿ ಚುಚ್ಚಿ ಕೊಲ್ಲದೆ ಬಿಡದು.

**ಪರಧನಕ್ಕಳುಪಬೇಡ, ಪರದೈವಕ್ಕೆರಗಬೇಡ ಪರರು ಕಂಡಾರು ಕಾಣರು ಎಂದೆನಬೇಡ; ಬಳ್ಳೇಶ್ವರ ಲಿಂಗಕ್ಕಾರು ಮರೆ ಮಾಡಬಾರದಾಗಿ ಅಘೋರ ನರಕದಲ್ಲಿಕ್ಕುವ:**

ಮುತ್ತು ರತ್ನ ಮಾಣಿಕ್ಯ ಚಿನ್ನ ಬೆಳ್ಳಿ ಕರೆನ್ಸಿ ಎನ್ನುವ ಸಂಪತ್ತು ತನುವಿನ ಅರಿವಿನಿಂದ ವಿನಿಮಯಕ್ಕಾಗಿ ಸೃಷ್ಟಿಯಾದದ್ದು.ಅರಿವು ಮರೆಯಾದದ್ದಕ್ಕೆ ಮನ ತನುವಿನ ಹೆಗಲೇರಿ ಕಳುವಿಗೆ ಭಾಜನನ್ನಾಗಿ ಮಾಡಿದೆ. ಮನ ತನುವಿನೊಂದಿಗೆ ಕಳವು ಮಾಡಿದಾಗ ಅರಿವು ಎಚ್ಚರಿಸಿ ಅಘೋರ ನರಕದಲ್ಲಿಕ್ಕುವುದು.

**ಪರದೈವಕ್ಕರಗಬೇಡ:**

ಕಾಯಕ್ಕೆ ಅರಿವಾಗಲೆಂದು, ಅಂಗದಂತಿರುವ ಆಲಯ ಮಾಡಿ ಅರಿವನ್ನು ಸೂಚಿಸಲು ಅದರೊಳಗೆ ದೇವರನ್ನು ಕೂಡಿಸಲಾಯಿತು. ಮನವೆಂಬ ಮರ್ಕಟ ಆಲಯವನ್ನೇ ದೇವರೆಂದು ನಂಬಿ ಪೂಜಾರಿಯನ್ನಿಟ್ಟು ನಿತ್ಯವೂ ಪೂಜಿಸಿತು. ಪರದೈವಕ್ಕೆರಗುವ ಮರ್ಕಟವೆಂಬ ಮನ ಅರಿವಿನ ಅಂಗದೊಂದಿಗೆ ಅಲೆಯುವುದು ಬಿಡುವುದಿಲ್ಲ; ಅರಿವು ಮನ ಮಾಡಿದ ಪಾಪ ಪುಣ್ಯಗಳನ್ನು ನೆನೆಪಿಸಿ ನರಕದಲ್ಲಿಕ್ಕುವುದನ್ನು ಬಿಡುವುದಿಲ್ಲ. ಇದು ತನುವಿನಲ್ಲಿ ನಿರಂತರ ನಡೆಯುವ ಅರಿವು-ಮರೆವಿನ ಯುದ್ಧ; ಜ್ಞಾನ-ಅಜ್ಞಾನದ ಯುದ್ಧ; ಘನ-ಮನದ ಯುದ್ಧ.

ತನು ಹುತ್ತದಂತೆ; ಹುತ್ತಕ್ಕೆ ಪೆಟ್ಟು ಬಿದ್ದರೆ ಹಾವು ಸಾಯುವುದಿಲ್ಲ, ಕೋಲು ಮುರಿಯುವುದಿಲ್ಲ. ಅರಿವಾಗದಿದ್ದರೆ ತನು ಇರುವವರೆಗೆ ಮನದಿಂದ ನಿತ್ಯ ನೋವಿನ ನರಕ ತಪ್ಪುವುದಿಲ್ಲ!

□

---

**ಅರಿವಿನ ಪರಿಮಳ :**

- ಯಾರೂ ನೋಡುವುದಿಲ್ಲವೆಂದು ಅಂಗ ಅಂಗದೊಂದಿಗೆ ಕೂಡಿದರೆ ಅಂಗದ ಅರಿವು ನೋಡಿ ಹಾದರವನ್ನು ಖಂಡಿಸದೆ ಬಿಡದು. ಕ್ಷಣ ಕ್ಷಣಕ್ಕೂ ನೆನಪಿಸಿ ಚುಚ್ಚಿ ಚುಚ್ಚಿ ಕೊಲ್ಲದೆ ಬಿಡದು.
- ಮುತ್ತು ರತ್ನ ಮಾಣಿಕ್ಯ ಚಿನ್ನ ಬೆಳ್ಳಿ ಕರೆನ್ಸಿ ಎನ್ನುವ ಸಂಪತ್ತು ತನುವಿನ ಅರಿವಿನಿಂದ ವಿನಿಮಯಕ್ಕಾಗಿ ಸೃಷ್ಟಿಯಾದದ್ದು. ಅರಿವು ಮರೆಯಾದದ್ದಕ್ಕೆ ಮನ ತನುವಿನ ಹೆಗಲೇರಿ ಕಳುವಿಗೆ ಭಾಜನನ್ನಾಗಿ ಮಾಡಿದೆ. ಮನ ತನುವಿನೊಂದಿಗೆ ಕಳವು ಮಾಡಿದಾಗ ಅರಿವು ಎಚ್ಚರಿಸಿ ಅಘೋರ ನರಕದಲ್ಲಿಕ್ಕುವುದು.
- ಕಾಯಕ್ಕೆ ಅರಿವಾಗಲೆಂದು, ಅಂಗದಂತಿರುವ ಆಲಯ ಮಾಡಿ ಅರಿವನ್ನು ಸೂಚಿಸಲು ಅದರೊಳಗೆ ದೇವರನ್ನು ಕೂಡಿಸಲಾಯಿತು. ಮನವೆಂಬ ಮರ್ಕಟ ಆಲಯವನ್ನೇ ದೇವರೆಂದು ನಂಬಿ ಪೂಜಾರಿಯನ್ನಿಟ್ಟು ನಿತ್ಯವೂ ಪೂಜಿಸಿತು.
- ತನು ಹುತ್ತದಂತೆ; ಹುತ್ತಕ್ಕೆ ಪೆಟ್ಟು ಬಿದ್ದರೆ ಹಾವು ಸಾಯುವುದಿಲ್ಲ, ಕೋಲು ಮುರಿಯುವುದಿಲ್ಲ. ಅರಿವಾಗದಿದ್ದರೆ ತನು ಇರುವವರೆಗೆ ಮನದಿಂದ ನಿತ್ಯ ನೋವಿನ ನರಕ ತಪ್ಪುವುದಿಲ್ಲ!

# ಅಜ್ಞಾನವನ್ನು ಅರಿವಿನಿಂದ ಸ್ವೀಕರಿಸುವುದೇ ಪ್ರಸಾದ

**ಅಪ್ಪು ತುಂಬಿದ ಕುಂಭದಲ್ಲಿ ಕಿಚ್ಚು ಹಾಕಿ**
**ಕಟ್ಟಿಗೆಯನಿಕ್ಕಿ ಉರುಹಲಿಕ್ಕೆ ಅಪ್ಪುವ ಸುಟ್ಟುದುಂಟೆ ಕಿಚ್ಚು?**
**ಆ ಕುಂಭದ ತಪ್ಪಲಿನಲ್ಲಿ ಕಟ್ಟಿಗೆಯನಿಕ್ಕಿ ಉರುಹಲಿಕ್ಕೆ**
**ಕುಂಭದ ಲೆಪ್ಪದ ಮರೆಯಲ್ಲಿ ಅಪ್ಪುವ ಸುಡಬಲ್ಲುದೆ?**
**ಇದು ಕಾರಣ ಕ್ರೀಯ ಮರೆಯಲ್ಲಿರ್ದ ನಿಃ ಕ್ರೀ**
**ಶಿಲೆಯ ಮರೆಯಲ್ಲಿರ್ದ ನೆಲೆ ವಸ್ತುವ**
**ಚಿತ್ತದ ಒಲವರದಿಂದ ಅರಿಯಬೇಕು.**
**ಚೆನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನಲಿಂಗವನರಿವಲ್ಲಿ.**

**- ಪ್ರಸಾದಿ ಭೋಗಣ್ಣ ಶರಣರು**

ತನುವಿನ ಅರಿವನ್ನೇ ಪ್ರಸಾದ ರೂಪದಲ್ಲಿ ಭೋಗಿಸಿ ಪ್ರಸಾದ ಕಾಯವನ್ನಾಗಿ ಮಾಡಿಕೊಂಡ ಭೋಗಣ್ಣ ಶರಣರು, ಸೂಕ್ಷ್ಮಾತಿ ಸೂಕ್ಷ್ಮ ವಿಚಾರವನ್ನು ವಚನದ ಸೂತ್ರದ ಮೂಲಕ ಓದುಗರಿಗೆ ನೀಡಿದ್ದಾರೆ.

ನೀರು ತುಂಬಿದ ಮಡಕೆಯಲ್ಲಿ ಬೆಂಕಿ ಹಾಕಿ ಕಟ್ಟಿಗೆಯನಿಟ್ಟು ಉರಿ ಹಚ್ಚಲು ಮಡಕೆಯಲ್ಲಿರುವ ನೀರು ಸುಟ್ಟುದುಂಟೆ?

ಆ ಮಡಕೆಯ ಕೆಳಗಡೆ ಕಟ್ಟಿಗೆಯನ್ನಿಟ್ಟು ಉರಿ ಹಚ್ಚಲು ಮಡಕೆಯ ಬೋಕಿಯ ಮರೆಯಲ್ಲಿದ್ದ ಜಲ ಸುಡ ಬಲ್ಲುದೆ?

ಇದು ಕಾರಣ, ಕ್ರಿಯೆಯಲ್ಲಿದ್ದ ನಿಃ ಕ್ರಿಯೆ, ಶಿಲೆಯ ಮರೆಯಲ್ಲಿದ್ದ ನೆಲೆ ವಸ್ತುವ ಚಿತ್ತದ ಪ್ರೀತಿಯಿಂದ ತಿಳಿಯಬೇಕು, ಚೆನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನ ಲಿಂಗವನು ಅರಿಯುವಲ್ಲಿ ಎಂದಿದ್ದಾರೆ ಪ್ರಸಾದಿ ಭೋಗಣ್ಣ ಶರಣರು.

ಜಲ ಬಿಂದು ತಾಯಿ ಗರ್ಭ ಸೇರಿ ರಕ್ತ ಮೂಳೆ ಮಾಂಸ ಮಜ್ಜೆ ಮೇಧಸ್ಸಾಗಿ ಚರ್ಮದ ಹೊದಿಕೆಯಿಂದ ಕಂಗೊಳಿಸುತ್ತಾ ಜಲತುಂಬಿದ ಮಡಕೆಯಂತಿದೆ.

ಜಲ ತುಂಬಿದ ಮಡಕೆಯಲ್ಲಿ ಕಿಚ್ಚು ಹಾಕಿ ಕಟ್ಟಿಗೆಯನ್ನಿಟ್ಟು ಉರುಹಿದರೆ ಜಲ ಸುಡುವುದಿಲ್ಲ. ಹಾಗೆಯೇ ಮಡಕೆಯ ಕೆಳಗಡೆ ಕಟ್ಟಿಗೆಯನಿಟ್ಟು ಉರಿಹಚ್ಚಲು ಮಡಕೆಯಾಗಲು ಕಾರಣವಾದ ಮಡಕೆಯ ಮರೆಯಲ್ಲಿದ್ದ ಜಲವೂ ಸುಡುವುದಿಲ್ಲ.

ಆದರೆ ಜಲದಿಂದಾದ ತನು ಶಬ್ದಕ್ಕೆ ಸುಡುತ್ತದೆ. ನೋಟಕ್ಕೆ, ಸ್ಪರ್ಶಕ್ಕೆ, ರುಚಿಗೆ ಸುಡುತ್ತದೆ. ವಾಸನೆಗೂ ಕಿಚ್ಚಿನಂತೆ ಸುಡುತ್ತದೆ. ಶಬ್ದದ ಮರೆಯಲ್ಲಿದ್ದ ಜ್ಞಾನವನ್ನು ಚಿತ್ತದಿಂದ ತಿಳಿದು ಶಬ್ದ ನಿಶಬ್ದ ಮಾಡುವುದು ಸಾಧ್ಯವಾಗುತ್ತಿಲ್ಲ.

ಸ್ಪರ್ಶದ ಮರೆಯಲ್ಲಿದ್ದ ಜ್ಞಾನವನ್ನು ತಿಳಿದು ಚರ್ಮದ ಚರ್ಮವಾಗಬೇಕು. ವಾಸನೆ ಮರೆಯಲ್ಲಿದ್ದ ವಸ್ತುವನ್ನು, ನೋಟದ ಮರೆಯಲ್ಲಿದ್ದ ವಸ್ತುವನ್ನು ರುಚಿಯ ಮರೆಯಲಿದ್ದ ಪದಾರ್ಥದ ಮೂಲವನ್ನು ತಿಳಿದರೆ ಅವೆಲ್ಲ ಜ್ಞಾನವಾಗಿ ತನು ಸುಡುವುದಿಲ್ಲ.

ಜಲದ ಮರೆಯಲ್ಲಿದ್ದ ಕಿಚ್ಚು ಜಲವನ್ನು ಸುಡುವುದಿಲ್ಲ. ಶಿಲೆಯ ಮರೆಯಲ್ಲಿದ್ದ ಕಿಚ್ಚು ಶಿಲೆಯನ್ನು ಸುಡುವುದಿಲ್ಲ. ಹಾಗೆಯೇ ತನುವಿನ ಮರೆಯಲ್ಲಿದ್ದ ಜ್ಞಾನ ತನುವಿನಿಂದ ಸಿಡಿದ ಶಬ್ದವನ್ನು ಅರಿವಿನಿಂದ ಸ್ವೀಕರಿಸಿದರೆ ತನುವೂ ಸುಡುವುದಿಲ್ಲ.

ಭೋಗಣ್ಣ ಶರಣರು ತನುವಿನ ಅರಿವಿಗೆ ಚೆನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನ ಲಿಂಗ ಎಂದು ನಾಮಕರಣ ಮಾಡಿದ್ದಾರೆ. ನೋಡುವ ಕಣ್ಣಿನಲ್ಲಿ ಮನವಿದೆ, ಅರಿವಿದೆ. ಅದರಂತೆಯೇ ಕೇಳುವ ಕಿವಿಯಲ್ಲಿ ,ಸ್ಪರ್ಶಿಸುವ ಚರ್ಮದಲ್ಲಿ ವಾಸಿಸುವ ಮೂಗಿನಲ್ಲಿ ರುಚಿಸುವ ನಾಲಿಗೆಯಲ್ಲಿ ಮನವಿದೆ ಅರಿವಿದೆ. ಅರಿವಿನಿಂದ ನೋಡಿದರೆ ನೋಡಿದ ನೋಟ ಜ್ಞಾನವಾಗಿ ತನು ಸುಡುವುದಿಲ್ಲ, ಮನದಿಂದ ನೋಡಿದರೆ ಸುಡದೆ ಬಿಡುವುದಿಲ್ಲ. ಹಾಗೆಯೇ ಅರಿವಿನಿಂದ ರುಚಿಸಿದ, ವಾಸಿಸಿದ ಸ್ಪರ್ಶಿಸಿದ, ಕೇಳಿದ ಶಬ್ದವೆಲ್ಲ ಜ್ಞಾನವಾಗಿ ಸುಡುವುದಿಲ್ಲ, ತನುವಿನ ಜ್ಞಾನಕ್ಕೆ ಸರ್ವವನ್ನು ಪ್ರಸಾದ ರೂಪದಿಂದ ಸ್ವೀಕರಿಸುವ ಬಲವಿದೆ. 'ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಾ' ಎನ್ನುವಂತೆ ಭೋಗಣ್ಣ ಶರಣರು ತನುವಿಗೆ ತಾಕಿದ ಶಬ್ಧ ಸ್ಪರ್ಶ ರುಚಿ ವಾಸನೆ ನೋಟವನ್ನು ಜ್ಞಾನ ದಿಂದ ತಿಳಿದು ಪ್ರಸಾದ ರೂಪದಲ್ಲಿ ಭೋಗಿಸಿ ಸದಾ ಆನಂದಿತರಾಗಿ ಶರಣರಿಂದ ಪ್ರಸಾದಿ ಭೋಗಣ್ಣ ಎಂಬ ಪದವಿ ಪಡೆದಿದ್ದಾರೆ. ಅಜ್ಞಾನವನ್ನು ಅರಿವಿನಿಂದ ಸ್ವೀಕರಿಸುವುದೇ ಪ್ರಸಾದವೆಂದು ದಾಖಲಿಸಿದ್ದಾರೆ.

□

---

**ಅರಿವಿನ ಪರಿಮಳ :**

- □ ಆದರೆ ಜಲದಿಂದಾದ ತನು ಶಬ್ದಕ್ಕೆ ಸುಡುತ್ತದೆ. ನೋಟಕ್ಕೆ, ಸ್ಪರ್ಶಕ್ಕೆ, ರುಚಿಗೆ ಸುಡುತ್ತದೆ. ವಾಸನೆಗೂ ಕಿಚ್ಚಿನಂತೆ ಸುಡುತ್ತದೆ. ಶಬ್ದದ ಮರೆಯಲ್ಲಿದ್ದ ಜ್ಞಾನವನ್ನು ಚಿತ್ತದಿಂದ ತಿಳಿದು ಶಬ್ದ ನಿಶಬ್ದ ಮಾಡುವುದು ಸಾಧ್ಯವಾಗುತ್ತಿಲ್ಲ.
- □ ಸ್ಪರ್ಶದ ಮರೆಯಲ್ಲಿದ್ದ ಜ್ಞಾನವನ್ನು ತಿಳಿದು ಚರ್ಮದ ಚರ್ಮವಾಗ ಬೇಕು. ವಾಸನೆ ಮರೆಯಲ್ಲಿದ್ದ ವಸ್ತುವನ್ನು, ನೋಟದ ಮರೆಯಲ್ಲಿದ್ದ ವಸ್ತುವನ್ನು ರುಚಿಯ ಮರೆಯಲಿದ್ದ ಪದಾರ್ಥದ ಮೂಲವನ್ನು ತಿಳಿದರೆ ಅವೆಲ್ಲ ಜ್ಞಾನವಾಗಿ ತನು ಸುಡುವುದಿಲ್ಲ.
- □ ಜಲದ ಮರೆಯಲ್ಲಿದ್ದ ಕಿಚ್ಚು ಜಲವನ್ನು ಸುಡುವುದಿಲ್ಲ. ಶಿಲೆಯ ಮರೆಯಲ್ಲಿದ್ದ ಕಿಚ್ಚು ಶಿಲೆಯನ್ನು ಸುಡುವುದಿಲ್ಲ. ಹಾಗೆಯೇ ತನುವಿನ ಮರೆಯಲ್ಲಿದ್ದ ಜ್ಞಾನ ತನುವಿನಿಂದ ಸಿಡಿದ ಶಬ್ದವನ್ನು ಅರಿವಿನಿಂದ ಸ್ವೀಕರಿಸಿದರೆ ತನುವೂ ಸುಡುವುದಿಲ್ಲ.

# ನೋಟ ಮಾಟವನು ಬೆಳಗುವ ಬೆಳಕು

**ಕಂಡುದೆಲ್ಲವೂ ಜಗದ ಸೊಮ್ಮು,**
**ಕಾಣದುದೆಲ್ಲವೂ ಮಾಯೆಯ ಸೊಮ್ಮು.**
**ಕಂಡುದ ಕಾಣದುದ ತಾ ನಿಧಾನಿಸಿಕೊಂಡು,**
**ತನಗಿಲ್ಲದುದ ತಾನರಿದು, ನಷ್ಟವಪ್ಪುದು ಜಗಕ್ಕೆ ಕೊಟ್ಟು**
**ಬಟ್ಟಬಯಲ ತುಟ್ಟತುದಿಯ ದೃಷ್ಟವ ಕಾಬುದಕ್ಕೆ ಮುನ್ನವೇ**
**ದೃಕ್ಕು,ದೃಶ್ಯಕ್ಕೆ ಹೊರಗಾಗಬೇಕು,**
**ವೀರ ಶೂರ ರಾಮೇಶ್ವರ ಲಿಂಗವ ಕೂಡಬಲ್ಲಡೆ.**

**-ಬಾಲಬೊಮ್ಮಣ್ಣ ಶರಣರು**

ಕಾಣುವುದೆಲ್ಲವೂ ಈ ಭೂಮಿಯ ಸಂಪತ್ತು. ಅದು ಜಗಕೆ ಸಂಬಂಧಿಸಿದ್ದು. ಕಂಡುಬಾರದೆ ಊಹಿಸಿ ಸುಖಿಸುವುದೆಲ್ಲ ಭ್ರಮೆಯ ಸಂಪತ್ತು.

ಕಂಡು ಬರುವ ಸಂಪತ್ತನ್ನು ಹಾಗೂ ಕಾಣಬಾರದ ಸಂಪತ್ತನ್ನು ಭ್ರಮಿಸಿ ಸುಖಿಸುವುದನ್ನು ತಾನು ನಿಧಾನವಾಗಿ ಯೋಚಿಸಿ ಅರಿವಿಗೆ ತಂದುಕೊಂಡರೆ; ಭೂಮಿ ಅಗಿದು ಚಿನ್ನ, ಬೆಳ್ಳಿ , ಕಬ್ಬಿಣ, ಕಂಚು, ತಾಮ್ರ, ವಜ್ರ ,ಮುತ್ತು , ಮಾಣಿಕ್ಯ ರತ್ನ ಹೊರತೆಗೆದವನು ತಾನೆ. ಅವುಗಳಿಗೆ ಹೆಸರಿಟ್ಟು ಅದಕ್ಕೆ ಮನ ಸೋತವನು ತಾನೆ. ಸೈನ್ಯಕಟ್ಟಿ ಸಂಗ್ರಹಿಸಿ ರಾಜನಾದವನು ತಾನೆ. ಅದಕ್ಕಾಗಿಯೇ ಯುದ್ಧ ಮಾಡಿ ರಕ್ತದ ಕಾಲುವೆ ಹರಿಸಿದವನು ತಾನೆ. ರಾಜನಿಗೆ ಕಾಲಾಳಾದವನು ತಾನೆ. ಅದನ್ನು ಪಡೆಯಲು ನರಕಯಾತನೆ ಪಟ್ಟವನು ತಾನೆ. ದೊರೆಯದಿದ್ದರೆ ಆತ್ಮಹತ್ಯೆ ಮಾಡಿಕೊಂಡವನು ತಾನೆ. ದೊರೆಯದುದ ಭ್ರಮಿಸಿ ಸುಖಿಸುವವನು ತಾನೆ.

**ತನಗಿಲ್ಲದುದ ತಾನರಿದು, ನಷ್ಟವಪ್ಪುದ ಜಗಕ್ಕೆ ಕೊಟ್ಟು:**

ಭೂಮಿ ಅಗಿದು ನೀರಿನ ಆಳಕ್ಕೆ ಹೋಗಿ ಹೊರತೆಗೆದ ವಸ್ತುಗಳು ತಾನು ಹೋದರೂ ಅವು ಇಲ್ಲಿಯೇ ಇವೆ. ಮನುಷ್ಯ ಭೂಮಿಯ ಆಳಕ್ಕೂ, ಆಕಾಶದ ಎತ್ತರಕ್ಕೂ, ಜಗದಗಲಕ್ಕೂ ಜಿಗಿಯಬಲ್ಲ. ಆದರೂ ತಾನು ಸೃಷ್ಟಿಸಿ ಹೆಸರಿಸಿದ ವಸ್ತುಗಳಿಗೆ ತಾನೇ ಬಲಿಯಾಗುತ್ತಿದ್ದಾನೆ. ಇದನ್ನೆಲ್ಲ ತಿಳಿಯುವ ಅರಿವು ಇದ್ದರೂ ಆ ಅರಿವನ್ನೇ ಮರೆತಿದ್ದಾನೆ. ಅರಿವಿನಿಂದ ವಸ್ತುಗಳನ್ನು ತಿಳಿದರೆ ಆ ವಸ್ತುಗಳು ನನಗೆ ಬೇಡ. ಅರಿವಿನಿಂದಲೇ ಸೃಷ್ಟಿಯಾದ ವಸ್ತುಗಳು. ಅವು ಅರಿವಿನಿಂದಲೇ ನಷ್ಟವಾಗುತ್ತವೆ. ನಷ್ಟವಾದುದನ್ನು ಭೂಮಿಗೆ ಬಿಡುವುದೇ ವಾಸಿ ಎನ್ನುತ್ತಾರೆ ಬಾಲ ಬೊಮ್ಮಣ್ಣ ಶರಣರು.

**ಬಟ್ಟಬಯಲ ತುಟ್ಟತುದಿಯ ದೃಷ್ಟವ ಕಾಬುದಕ್ಕೆ ಮುನ್ನವೆ ದೃಕ್ಕು ದೃಶ್ಯಕ್ಕೆ ಹೊರಗಾಗಬೇಕು, ವೀರ ಶೂರ ರಾಮೇಶ್ವರ ಲಿಂಗವ ಕೂಡಬಲ್ಲಡೆ :**

ಅರಿವು, ಬಯಲಿನಿಂದ ಬಂದ ಸಂಪತ್ತು; ತನುವಿನ ಸಂಪತ್ತು. ಈ ಸಂಪತ್ತಿನ ತುಟ್ಟತುದಿಯನ್ನು ಕಾಣುವ ಮುನ್ನ ; ನೋಟ ಮತ್ತು ನೋಟದಿಂದ ಕಾಣುವ ಚಿತ್ರದಿಂದ ಹೊರಗಾಗಬೇಕು.

ಅಜ್ಞಾನದ ಬಲದಿಂದ ಜಗದ ಸಂಪತ್ತನ್ನು ಸಂಗ್ರಹಿಸಬಹುದು. ದೋಚಬಹುದು.

ರಾಜ,ಚಕ್ರವರ್ತಿ,ಶ್ರೀಮಂತ ಎಂಬ ಬಿರುದಿನ ಪಟ್ಟಿಯಲ್ಲಿ ಸೇರಬಹುದು. ಆದರೆ ಅರಿವಿನ ಮಹಾವೀರ ಶೂರ ಎಂಬ ಬಿರುದು ಪಡೆಯಲಾರ. ಏಕೆಂದರೆ ನೋಡುವ ಕಣ್ಣಿನಲ್ಲಿ ಬೆಳಕಿನ ಬಲವಿದೆ, ಕಂಡುಬರುವ ದೃಶ್ಯದಲ್ಲಿ ಬಲವಿಲ್ಲ. ಕಣ್ಣಿನ ಬೆಳಕು ಆಭರಣದ ಮೇಲೆ ಬಿದ್ದರೆ ಬಣ್ಣ ಮಾಟ ನೋಡಬಹದು. ಆನಂದಿಸಬಹುದು. ಬಣ್ಣ ಮಾಟ ಕಳೆದರೆ ಅದು ಬರೀ ಲೋಹ ! ಲೋಹವನ್ನು ಖರೀದಿಸುವದಿಲ್ಲ, ಸಂಗ್ರಹಿಸುವುದಿಲ್ಲ. ಅದಕ್ಕಾಗಿ ರಾಜ ಯುದ್ದವನ್ನು ಮಾಡುವುದಿಲ್ಲ. ಆತ್ಮಹತ್ಯೆ ಕೊಲೆಗಳೂ ಆಗುವುದಿಲ್ಲ.

ಹೀಗೆ ದೃಕ್,ದೃಶ್ಯದಿಂದ ಹೊರಗಾದರೆ ವೀರ ಶೂರ ರಾಮೇಶ್ವರ ಲಿಂಗವೆಂಬ ಅರಿವು ತಾನೇ ಆಗುತ್ತಾನೆ. ಬುದ್ಧನಾಗುತ್ತಾನೆ. ಮಹಾವೀರನಾಗುತ್ತಾನೆ. ಶರಣಾಗುತ್ತಾನೆ.

□

**ಅರಿವಿನ ಪರಿಮಳ :**

□ ಅಜ್ಞಾನದ ಬಲದಿಂದ ಜಗದ ಸಂಪತ್ತನ್ನು ಸಂಗ್ರಹಿಸಬಹುದು. ದೋಚ ಬಹುದು. ರಾಜ,ಚಕ್ರವರ್ತಿ,ಶ್ರೀಮಂತ ಎಂಬ ಬಿರುದಿನ ಪಟ್ಟಿಯಲ್ಲಿ ಸೇರಬಹುದು. ಆದರೆ ಅರಿವಿನ ಮಹಾವೀರ ಶೂರ ಎಂಬ ಬಿರುದು ಪಡೆಯಲಾರ. ಏಕೆಂದರೆ ನೋಡುವ ಕಣ್ಣಿನಲ್ಲಿ ಬೆಳಕಿನ ಬಲವಿದೆ, ಕಂಡುಬರುವ ದೃಶ್ಯದಲ್ಲಿ ಬಲವಿಲ್ಲ. ಕಣ್ಣಿನ ಬೆಳಕು ಆಭರಣದ ಮೇಲೆ ಬಿದ್ದರೆ ಬಣ್ಣ ಮಾಟ ನೋಡಬಹದು. ಆನಂದಿಸಬಹುದು. ಬಣ್ಣ ಮಾಟ ಕಳೆದರೆ ಅದು ಬರೀ ಲೋಹ ! ಲೋಹವನ್ನು ಖರೀದಿಸುವದಿಲ್ಲ, ಸಂಗ್ರಹಿಸುವುದಿಲ್ಲ. ಅದಕ್ಕಾಗಿ ರಾಜ ಯುದ್ದವನ್ನು ಮಾಡುವುದಿಲ್ಲ. ಆತ್ಮಹತ್ಯೆ ಕೊಲೆಗಳೂ ಆಗುವುದಿಲ್ಲ.

# ತನುವೆಂಬುದು ಅರಿವಿನ ಕುಂಭ

**ಪ್ರಸಾದವೆ ಅಂಗವಾದವನ ಇರುವು ಎಂತುಟೆಂದಡೆ :**
**ಒಳಗಿಲ್ಲದ ಕುಂಭ ಒಡೆದು ಹೋಳಾದಂತೆ**
**ಮರೀಚಿಕಾ ಜಲವ ತುಂಬಿ ಸುರಿದ ಅಂಗದಂತಿರಬೇಕು.**
**ಉರಿಯ ಮಧ್ಯದಲ್ಲಿ ನಷ್ಟವಾದ ಕರ್ಪುರದ ಗಿರಿಯಂತಿರಬೇಕು.**
**ಮಹಾಪ್ರಸಾದ ಕೊಂಡಲ್ಲಿ ಇದಿರು ಮುಯ್ಯಿಲ್ಲದಿರಬೇಕು.**
**ಹರವರಿ ನಷ್ಟವಾಗಿ ದಹನ ಚಂಡಿಕೇಶ್ವರ ಲಿಂಗದಲ್ಲಿ**
**ಒಡಗೂಡಿರಬೇಕು.**

**- ಪ್ರಸಾದಿ ಲೆಂಕಣ್ಣ ಶರಣರು**

ಸುಡುವ ಬಿಸಿಲು ಭೋರ್ಗರೆವ ಮಳೆ, ಬಿರುಗಾಳಿ , ಗುಡುಗು, ಸಿಡಿಲು, ಬಿರಿಯುವ ಭೂಮಿ ನೀಡುವ ಪ್ರಸಾದವನೇ ಉಂಡ ಮರ ಫಲಭರಿತ ಹಣ್ಣು ನೀಡುವಂತೆ !

ಕರ್ಪುರದ ಬೆಟ್ಟಕ್ಕೆ ಉರಿತಾಗಿದರೆ ಉರಿ ಕರ್ಪುರವೆರಡೂ ನಷ್ಟವಾದಂತೆ !

ಕೆಂಡದಂತಿರುವ ಬಿರು ನುಡಿಗಳು, ಶ್ರೀಮಂತಿಕೆಯ ಅಹಂಕಾರ, ಬಡತನ, ದಾರಿದ್ರ್ಯ ಅಧಿಕಾರದ ಗತ್ತು, ಕಾಮ,ಕ್ರೋಧ, ಲೋಭ, ಮೋಹ, ಮದ, ಮತ್ಸರಗಳನ್ನು ಅರಿವಿನಿಂದ ಮಹಾ ಪ್ರಸಾದವೆಂದು ಉಂಡು ಅಂಗ ಒಳಹೊರಗಿಲ್ಲದ ಲಿಂಗದಂತಿರಬೇಕು.

**ಮರೀಚಿಕಾ ಜಲವ ತುಂಬಿ ಸುರಿದ ಅಂಗದಂತಿರಬೇಕು:**

ಬಿಸಿಲುಗುದುರೆ ನೋಡುಗರಿಗೆ ಜಲವಾಗಿ ಕಾಣುತ್ತದೆ. ಅದನ್ನು ಹಿಡಿದಿಟ್ಟ ಕುಂಭ ಕಾಣುವುದಿಲ್ಲ. ಅದು ಜಲದೊಂದಿಗೆ ಬೆರೆತು ಪಿಂಡವೆಂಬ ಕುಂಭ ಸೇರಿ ಅರಿವಿನ ಅಂಗದೊಂದಿಗೆ ಹೊರಬಂದಿದೆ.

ಅರಿವಿನ ಜಲದೊಂದಿಗೆ ಸೇರಿದ ಕುಂಭವೆಂಬ ಅಂಗ ಕಾಣತ್ತದೆ. ಮರೀಚಿಕಾ ಜಲ (ಬಿಸಿಲ್ಗುದುರೆ) ಕಾಣುವುದಿಲ್ಲ, ಭ್ರಮೆಯೆಂಬ ಇಲ್ಲದ ಮರೀಚಿಕಾ ಜಲ ಸುರಿದಾಗ ಉಳಿದದ್ದೇ ಅರಿವಿನ ಅಂಗ !

ಹೀಗೆ ಅರಿವಿನ ಅಂಗವನ್ನು ವ್ಯಾಪಿಸಿಕೊಂಡ ಅಜ್ಞಾನ ನಷ್ಟವಾಗಿ ದಹನಗೊಂಡರೆ ಚಂಡಿಕೇಶ್ವರ ಲಿಂಗವೆಂಬ ಅರಿವನು ಒಡಗೂಡಿದ ಅಂಗ ತಾನೇ ಆಗುವುದು ಎಂದು ವೈಜ್ಞಾನಿಕವಾಗಿ ಹೇಳಿದ್ದಾರೆ ಪ್ರಸಾದಿ ಲೆಂಕಣ್ಣ ಶರಣರು.

□

**ಅರಿವಿನ ಪರಿಮಳ :**

□ ಬಿಸಿಲುಗುದುರೆ ನೋಡುಗರಿಗೆ ಜಲವಾಗಿ ಕಾಣುತ್ತದೆ. ಅದನ್ನು ಹಿಡಿದಿಟ್ಟ ಕುಂಭ ಕಾಣುವುದಿಲ್ಲ.

# ನಿರ್ವಾಣ

**ದೃಕ್ಕು ಗುರುವಿನ ಭಾವ, ದೃಶ್ಯ ಶಿಷ್ಯನ ಯುಕ್ತಿ ಆತ್ಮ ಘಟದಂತೆ ,ಕರ್ತೃ ಭೃತ್ಯಭಾವ.**
**ಇಂತೀ ಉಭಯ ಏಕವಾದಲ್ಲಿ ನಿರ್ವೀಜ ನಿರ್ಯಾಣ.**
**ಚೆನ್ನಬಸವಣ್ಣಪ್ರಿಯ ಭೋಗ ಮಲ್ಲಿಕಾರ್ಜುನ ಲಿಂಗವು ಉಭಯ ವಾದ ಭೇದ.**
**- ಪ್ರಸಾದಿ ಭೋಗಣ್ಣಶರಣರು**

**ದೃಕ್ಕು ಗುರುವಿನ ಭಾವ, ದೃಶ್ಯ ಶಿಷ್ಯನ ಯುಕ್ತಿ.ಆತ್ಮ ಘಟದಂತೆ ಕರ್ತೃ ಭೃತ್ಯ ಭಾವ:**

ನೋಡುವ ಬೆಳಕು ಅವನ ಭಾವ ; ಕಾಣುವ ದೃಶ್ಯ ನನ್ನ ಜಾಣತನ. ಕಣ್ಣಿನಿಂದ ಹೊರಬರುವ ಬೆಳಕು ಅವನದು; ಕಣ್ಣು ನನ್ನದು. ಅವನ ಬೆಳಕಿನ ಭಾವ ಸದಾ ಸದ್ಭಾವ. ಕಾಣುವ ನನ್ನ ದೃಶ್ಯದಲ್ಲಿ ಒಮ್ಮೆ ಭಾವ ಮತ್ತೊಮ್ಮೆ ದುರ್ಭಾವ. ಸೂರ್ಯ ವಸ್ತುಗಳ ಮೇಲೆ ಬೆಳಕು ಚೆಲ್ಲುತ್ತಾನೆ. ಯಾವುದನ್ನು ತನಗಾಗಿ ಪಡೆಯುವುದಿಲ್ಲ. ಕತ್ತಲು ವಸ್ತುಗಳನ್ನು ಬಾಚಿಕೊಳ್ಳುತ್ತದೆ; ಯಾವುದನ್ನು ಬಿಡುವುದಿಲ್ಲ. 'ಕೋಟಿ ಸೂರ್ಯಂಸಮಪ್ರಭ' ಎಂದು ಹೇಳಿದ ವಾಕ್ಯ ನನಗಾಗಿಯಾದರೂ ನನ್ನಲ್ಲಿ ಅದು ಸುಳ್ಳಾಗಬೇಕೆ?

ಹೂವಿನ ಮೇಲೆ ಬೆಳಕು ಚೆಲ್ಲುವ ಭಾವ ಅವನದು. ಹೂವನ್ನು ಅದರ ಎಸಳನ್ನು ಅದರ ಬಣ್ಣವನ್ನು ಅದರ ಮಾಟವನ್ನು ನೋಡಿ ಅದು ಬೀರುವ ಸುವಾಸನೆಯನ್ನು ಹೀರಿ ಆನಂದ ಪಡುವ ಸದ್ಭಾವ ನನ್ನದು. ಕೇವಲ ಬೆಳಕು ಚೆಲ್ಲುವ ಭಾವ ಅವನದಾದರೆ, ಎಲ್ಲ ಕೋನಗಳಿಂದ ನೋಡುವ, ಆನಂದ ಪಡುವ ಸದ್ಭಾವ ನನ್ನದಾಗಲಿಲ್ಲವೆ?

ಅವನು ಒಂದು ಪಟ್ಟಾದರೆ ಅವನಿಂದ ನೋಡಲ್ಪಡುವ ನಾನು ಕೋಟಿಪಟ್ಟು ಹೆಚ್ಚಾದಂತಲ್ಲವೆ?

ಅವನ ಅರಿವಿನ ಬೆಳಕಿನ ಭಾವದಿಂದ ಹೂ ನೋಡಿ ಆನಂದ ಪಡುವ ಸದ್ಭಾವವೂ ತನುವಿನ ಮನದಲ್ಲಿದೆ. ಹೂ ಕೀಳುವ ದುರ್ಭಾವವೂ ತನುವಿನ ಮನದಲ್ಲಿ ಇದೆ. ಅವನು ಬೆಳಕಾದರೆ ನಾನು ಆ ಬೆಳಕನ್ನು ಬೆಳಗುವ ಬೆಳಕಾಗಬೇಕೆ ಅಥವಾ ಕತ್ತಲಾಗಬೇಕೆ? ಆಯ್ಕೆ ಮಾಡಿಕೊಳ್ಳುವ ಜಾಣತನ ಮಾತ್ರ ತನುವಿನ ಮನವೆಂಬ ಶಿಷ್ಯನದು.

ಬೆಳಕು ಬೇರಿಲ್ಲ, ತನುವು ಬೇರಿಲ್ಲ, ತನುವಿನ ಮೂಲಕವೇ ಬೆಳಗುತ್ತದೆ. ಬೆಳಗುವ ಗುರುವೂ ತನುವಿನಲ್ಲಿಯೇ ಇದ್ದಾನೆ. ಆನಂದ ಪಡುವ ಶಿಷ್ಯನೂ ತನುವಿನಲ್ಲಿಯೇ ಇದ್ದಾನೆ. ನೋಡುವ ನೋಟ ತನುವಿನದೇ, ಆನಂದಿಸುವ ಅನುಭವವೂ ತನುವಿನದೇ.

**ಇಂತೀ ಉಭಯ ಏಕರೂಪದಲ್ಲಿ ನಿರ್ವೀಜ ನಿರ್ಯಾಣ ಚೆನ್ನಬಸವಣ್ಣ ಪ್ರಿಯ ಭೋಗ ಮಲ್ಲಿಕಾರ್ಜುನ ಲಿಂಗವು ಉಭಯವಾದ ಭೇದ :**

ತನುವಿನ ಅರಿವೇ ಗುರು, ತನುವಿನ ಮನವೇ ಶಿಷ್ಯ ! ಇವರಿಬ್ಬರೂ ಅಂದರೆ ತನುವಿನ ಮನ ತನುವಿನ ಅರಿವಿನಲ್ಲಿ ಲೀನವಾಗಿ ಏಕವಾದಲ್ಲಿ ಹುರಿದ ಬೀಜದಂತೆ ನಿರ್ವೀಜ. ಅದೇ ನಿರ್ವಾಣ !! ಚೆನ್ನ ಬಸವಣ್ಣನಿಗೆ ಪ್ರಿಯವಾದ ಭೋಗಮಲ್ಲಿಕಾರ್ಜುನ ಲಿಂಗ (ಅರಿವು)ದೇವರು ಉಭಯವಾದ ಭೇದ ಎನ್ನುತ್ತಾರೆ ಪ್ರಸಾದಿ ಭೋಗಣ್ಣ ಶರಣರು.

□

# ಅಂಗವೆಂಬುದು ಅರಿವಿನ ಜಲದ ಹರಿಗೋಲು

**ಪೃಥ್ವಿಯೆಂಬ ಅಂಗದ ಧರೆಯಲ್ಲಿ ಅಪ್ಪುವೆಂಬ ಅಸು ಹರಿವುತ್ತಿರಲಾಗಿ**
**ಬಹುಚಿತ್ತವೆಂಬ ಜನರು ನೆರೆದು ಅರುವೆಂಬ ಹರಗೋಲು ಕೆಟ್ಟಿದೆ .**
**ಕುರುಹಿನ ಜಲ್ಲೆಯ ಹಿಡಿದು ಒತ್ತುವರಿಲ್ಲದೆ ತಡಿಯಲ್ಲಿ ಕೂಗುತ್ತೈದಾರೆ**
**ಏಣಾಂಕಧರ ಸೋಮೇಶ್ವರ ಲಿಂಗವನರಿಯದೆ .**

**- ಬಿಬ್ಬಿ ಬಾಚಯ್ಯ ಶರಣರು**

ಪೃಥ್ವಿಯೆಂಬ ಅಂಗದ ರಾಜ್ಯದಲ್ಲಿ ಜಲವೆಂಬ ಪ್ರಾಣ ಹರಿಯುತ್ತಿದೆ. ಬಹು ಚಿತ್ತದ ಜನ ನೆರೆದಿದ್ದಾರೆ. ಅರಿವೆಂಬ ಹರಿಗೋಲು ಕೆಟ್ಟಿದೆ. ಹರಿಗೋಲಿನ ಹುಟ್ಟು (ಕೋಲು) ಹಿಡಿದು ಒತ್ತುವರಿ ಲ್ಲದೆ, ದಡದಲ್ಲಿ ಕೂಗುತ್ತೈದಾರೆ. ಚಂದ್ರನನ್ನು ಧರಿಸಿದ ಸೋಮೇಶ್ವರ ಲಿಂಗವನರಿಯದೆ.

ಬಿಬ್ಬಿ ಬಾಚಯ್ಯ ಶರಣರು ರಾಯಚೂರು ಜಿಲ್ಲೆಯ ದೇವದುರ್ಗ ತಾಲೂಕಿನ ಗಬ್ಬೂರು ಗ್ರಾಮದವರು. ಅವರ 102 ವಚನಗಳು ಕಟ್ಟಿನಲ್ಲಿವೆ. ಆ ವಚನಗಳೆಲ್ಲ ತೂತುಬಿದ್ದ ಅಂಗವೆಂಬ ಹರಿಗೋಲನ್ನು ರಿಪೇರಿ ಮಾಡಿ ದಡ ಸೇರಿಸುವ ಸೂತ್ರಗಳು.

ಜಲಬಿಂದು ಗರ್ಭ ಸೇರಿ ಗಟ್ಟಿಗೊಂಡು ಹೊರಬಂದು ಈ ಪೃಥ್ವಿಯ ಮೇಲೆ ಅಂಗದ ರಾಜ್ಯವೇ ನಿರ್ಮಾಣವಾಗಿದೆ.

ನೋಡಲು ಅಂಗ ಒಂದೇ ಆದರೂ ಹೆಣ್ಣುಗಂಡೆಂಬ ಜಾತಿ, ಭಾಷೆ, ಮತ, ಪಂಥವೆಂದು ಬಹು ವಿಧದಲ್ಲಿ ಕಂಡುಬರುತ್ತದೆ. ಹಾಗೆಯೇ ಬಹುವಿಧದ ಚಿತ್ತದಿಂದ ಕೂಡಿದೆ.

ಜಲಬಿಂದುವಿನಿಂದ ಹುಟ್ಟಿದ ಅಂಗಕ್ಕೆ ಆ ಜಲವೇ ಅಂಗದ ಕಣಕಣದಲ್ಲಿ ಪ್ರಾಣವಾಗಿ ಹರಿಯುತ್ತಲಿದೆ. ಅಂಗವೆಂಬ ಈ ಜಲ ರಾಶಿಯಲ್ಲಿಯೇ ಸೋಮೇಶ್ವರನೆಂಬ ಅರಿವು ವಿರಮಿಸಿದ್ದಾನೆ. ಆತನಿಗೆ ಗಂಗಾಧರನೆಂಬ ಮತ್ತೊಂದು ಹೆಸರೂ ಇದೆ.

ಚಿತ್ತ ಅರಿವಿನಲ್ಲಿ ನೆಟ್ಟರೆ ಅಂಗ ಕೆಡುವುದಿಲ್ಲ. ಚಿತ್ತ, ಭೂಮಿ ಹೇಮ ವಿಷಯದಲ್ಲಿ ನೆಟ್ಟರೆ ಅಂಗಕ್ಕೆ ತೂತುಬಿದ್ದು ಅಂಗದೊಂದಿಗೆ ಅರಿವು ಕೆಡುತ್ತದೆ. ಅರಿವಿನ ಕುರುಹು ಅಂಗ. ಅಂಗದಲ್ಲಿ ಪಯಣಿಸುವ ಮನದ ಚಿತ್ತ ಬಹುವಿಧ. ಚಿತ್ತ ಬಂದೆಡೆಗೆ ಪಯಣಿಸಿದರೆ, ಅಂಗ ದಡ ಸೇರಲರಿ ಯದು. ಅರಿವಿನೆಡೆಗೆ ಸೇರಲು ಹುಟ್ಟು ಹಾಕಬೇಕು.

ಏರಿಳಿತಗಳು ಚಂದ್ರನಲ್ಲಿ ಸಹಜ. ಹುಣ್ಣಿಮೆಯ ದಿನ ಪರಿಪೂರ್ಣನಾಗಿ ಅಮಾವಾಸ್ಯೆಯ ದಿನ ಇಲ್ಲವಾಗುತ್ತಾನೆ. ಹಾಗೆಯೇ ಮನ ಮತ್ತು ಚಿತ್ತಕ್ಕೆ ಒಮ್ಮೆ ಹೊಳೆಯುತ್ತದೆ. ಮತ್ತೊಮ್ಮೆ ಹೊಳೆಯದೆ ಅಜ್ಞಾನದ ಕೆಲಸಕ್ಕೆ ಅಂಗವನ್ನು ತಳ್ಳುತ್ತದೆ.

ಅಂಗವೆಂಬ ಜಲದ ದೋಣಿಯನ್ನು ಮನ ಮತ್ತು ಚಿತ್ತದೊಂದಿಗೆ ಅರಿವಿನ ದಡ ಸೇರಲು ಹುಟ್ಟು ಹಾಕಿದರೆ ಅರಿವೆಂಬ ಸೋಮೇಶ್ವರನು ಮನವೆಂಬ ಚಂದ್ರನನ್ನು ಹಿಡಿದು ತನ್ನ ಜಟೆಯಲ್ಲಿಟ್ಟು ಕೊಂಡು ಏಣಾಂಕಧರನಾಗುತ್ತಾನೆ ; ಚಂದ್ರಶೇಖರನಾಗುತ್ತಾನೆ, ಅರಿವೆಂಬ ಸೋಮೇಶ್ವರಲಿಂಗ ತಾನೇ ಆಗುತ್ತಾನೆ.

□

# ಅರಿವು ಹಾಲಿನೊಳಗಣ ತುಪ್ಪದಂತೆ

ಬಂಗಾರಕ್ಕೆ ಒಳಹೊರಗುಂಟೆ? ಕರ್ಪೂರ ಚಂದನ ಅಗರು
ಇರವಂತಿ ಶಾವಂತಿ ಮೊಲ್ಲೆ ಮಲ್ಲಿಗೆ ಅದ್ರಗಂಚಿ ಮರಗು
ದವನ ಪಚ್ಚೆ ಮುಡಿವಾಳ ಕೇತಕಿ ಮುಂತಾದ ಸಕಲ
ಪತ್ರೆ ಪುಷ್ಪಗಳಿಗೆ ಒಳಹೊರಗುಂಟೆ?
ಅವರಂದವುಳ್ಳನ್ನಕ್ಕ ಸರ್ವಾಂಗದಲ್ಲಿ
ಗಂಧ ಪರಿಪೂರ್ಣಮಾಗಿರ್ಪುದದರಂತೆ
ಕಮತೇಶ್ವರ ಲಿಂಗದಲ್ಲಿ ಉಭಯ ಮುಟ್ಟಳಿದ ಶರಣನಿರವು.

– ಬಾಲಸಂಗಣ್ಣ ಶರಣರು

ಚಿನ್ನ ಕಡಿದಂತೆಲ್ಲ ಕಣ್ಣು ಕೋರೈಸುವ ಹಳದಿ ಬಣ್ಣವೇ ಬರುತ್ತದೆ. ಆ ಲೋಹದಿಂದ ಹಲವಾರು ವಿಧದ ಆಭರಣ ಮಾಡಬಹುದು. ಲೋಹ ಬಣ್ಣ ಬೇರ್ಪಡಿಸುವಂತೆ ಅಕ್ಕಸಾಲಿಗನಿಗೆ ಹೇಳಿದರೆ ಅದು ಸಾಧ್ಯವಾಗುವುದೇ ಇಲ್ಲ.

ಅಂತೆಯೇ ತನು ಅರಿವು ಬೇರ್ಪಡಿಸಲು ಸಾಧ್ಯವಾಗುವುದಿಲ್ಲ. ಅರಿವು ಅಳಿದ ತನು ಶವ. ಅರಿವಿದ್ದ ತನು ಶಿವ. ಮನ ಅರಿವಿನಲ್ಲಿ ಲೀನವಾದರೆ ಅರಿವಿನ ತನು. ಅದು ಸುಂದರ, ಜಗಮಗಿಸುವ ಆಭರಣದಂತೆ ! ಒಳಹೊರಗೆನ್ನದ ಚಿನ್ನದಂತೆ. ಚಂದನ, ಮಲ್ಲಿಗೆ, ದವನ, ಕೇದಗೆ ಯಂತೆ ! ಎಲ್ಲಿ ವಾಸಿಸಿದರೂ ಸುವಾಸನೆಯೇ ! ಅರಿವು ಕೂಡಾ ವಾಸಿಸದ ಪರಿಮಳ.

ತನುವಿನ ಅರಿವು ಮಾಂಸದೊಳಗಿದ್ದ ಹಾಲಿನಂತೆ. ಹಾಲಿನ ಬೆಸುಗೆಯ ಬಿನ್ನಾಣದಿಂದ ಹೊರತೆಗೆದ ಬೆಣ್ಣೆಯಂತೆ, ಶುದ್ಧೀಕರಿಸಿ ಕಾಸಿ ಸೋಸಿ ಹೊರ ತೆಗೆದ ತುಪ್ಪದಂತೆ ! ಅರಿವು ಸರ್ವಾಂಗ ಗಳಲ್ಲಿಯೂ ಇದೆ ; ಜಾತಿ ಮತ ಪಂಥ ಹೆಣ್ಣು ಗಂಡು ಎನ್ನದಂತೆ , ತನು ಅರಿವು ಮನ ಮಿಶ್ರಣವುಳ್ಳ ಘಟವನ್ನು ಸೋಸಿ ತಿಳಿಯಬೇಕಷ್ಟೇ ! ಆಗ ಅರಿವೆಂದರೇನೆಂದು ತಿಳಿಯುತ್ತದೆ. ತುಪ್ಪವನ್ನು ಹೇಗೆ ಹಾಲೆನ್ನಲು ಬರುವುದಿಲ್ಲವೋ ಹಾಗೆಯೇ ಬೆಣ್ಣೆ ಎನ್ನಲೂ ಬರುವುದಿಲ್ಲ. ಮಾಂಸವೆನ್ನಲೂ ಬರುವು ದಿಲ್ಲ. ಹಾಲಿನೊಳಗಿದ್ದ ಬೆಸುಗೆಯ ಬಿನ್ನಾಣವೆಂದು ಹೇಳಲೂ ಬರುವುದಿಲ್ಲ.

ಹೀಗೆ ತನು ಮನ ಭಾವ ಅಂತಃಕರಣದ ಬೆಸುಗೆಯಲ್ಲಿರುವ ಅರಿವು ಮರೆವೆಂಬ ಮುಟ್ಟಳಿದ ಶರಣನಿರುವು ! ಅದು ಕಮತೇಶ್ವರ ಲಿಂಗದರಿವು. ಬಣ್ಣ ಕೆಡದ ಚಿನ್ನದಂತೆ ಎಂದಿದ್ದಾರೆ ಬಾಲಸಂಗಣ್ಣ ಶರಣರು.

□

**ಅರಿವಿನ ಪರಿಮಳ :**

□ ಅರಿವು ಸರ್ವಾಂಗಗಳಲ್ಲಿಯೂ ಇದೆ ; ಜಾತಿ ಮತ ಪಂಥ ಹೆಣ್ಣು ಗಂಡು ಎನ್ನದಂತೆ , ತನು ಅರಿವು ಮನ ಮಿಶ್ರಣವುಳ್ಳ ಘಟವನ್ನು ಸೋಸಿ ತಿಳಿಯಬೇಕಷ್ಟೇ !

# ಅಪರಾಧ ಮಾಡಿದ ಮನ ಅರಿವಿಂಗೆ ಸಜ್ಜನ ನಪ್ಪುದೆ ?

ಅಪರಾಧ ಮಾಡಿದ ಭಟ ಅರಸಿಂಗೆ ಸಜ್ಜನನಪ್ಪನೆ?
ವ್ರತ ಭ್ರಷ್ಟ, ನೇಮಕ್ಕೆ ಹಾನಿಯಾದವ, ನಿತ್ಯ ಕರ್ಮವೆಂದು ಹಿಡಿದು ಬಿಟ್ಟವ.
ತ್ರಿವಿಧ ಮಲವನೊಲ್ಲೆನೆಂದು ತೊಟ್ಟವ. ಇಂತೀ ಕಷ್ಟ
ಗುಣದಲ್ಲಿ ನಡೆವ ದೃಷ್ಟಗಳ್ಳರ ನೋಡಾ. ಇದು ಬಾಯೊಳಗಣ
ಹುಣ್ಣು ಹೇವರಿಸಿದ ಮತ್ತೆ ಇನ್ನಾವ ಠಾವಿನಲ್ಲಿ ನುಂಗುವೆ?
ಈ ಹೇಯುವ ಬಿಡಿಸಾ ಎನಗೆ ಸಂಗನ ಬಸವಣ್ಣಾ.
ಬ್ರಹ್ಮೇಶ್ವರ ಲಿಂಗವಪ್ಪ ಠಾವ ತೋರಾ.

– ಬಾಹೂರ ಬೊಮ್ಮಣ್ಣ ಶರಣರು

**ಅಪರಾಧ ಮಾಡಿದ ಭಟ ಅರಸಿಂಗೆ ಸಜ್ಜನನಪ್ಪನೆ?:**

ಅರಿವು, ಮನ ಮತ್ತು ತನುವಿನ ಅರಸ. ಮನ ಅರಸನ ಭಟ. ಅರಸನ ಆದೇಶ ಪಾಲಿಸುವುದು ಭಟನ ಕರ್ತವ್ಯ. ಕಾಮ, ಕ್ರೋಧ, ಲೋಭ ಮೋಹ ಮದ ಮತ್ಸರಗಳನ್ನು ತೊಟ್ಟ ಮನ ತನಗೆ ತೋಚಿದಂತೆ ಅರಿವೆಂಬ ಅರಸನ ತನುವನ್ನು ಕುಣಿಸುತ್ತದೆ. ಬಹಿರಂಗವಾಗಿ ಅಪರಾಧವೆಸಗಲು ಹೋದರೆ ಅರಸನ ಭಯ. ಮನದಲ್ಲಿ ಹಾದರ ಮಾಡಿ ತತ್ವವ ನುಡಿದರೆ ಬಾಯೊಳಗಣ ಹುಣ್ಣು ಹೇವರಿಸಿ ನುಂಗುವಂತೆ.

ತತ್ವವನ್ನೂ ಬಿಡಲಾರ. ಮನದಲ್ಲಿ ಹಾದರದ ಹೇಯ ಕೃತ್ಯವನ್ನೂ ಬಿಡಲಾರ. ತೋರಿಕೆಗೆ ತ್ರಿಕಾಲ ಪೂಜಾ ನಿಷ್ಠ, ಸಮಾಜದ ಗಣ್ಯನೆಂದು ತನುವಿಗೆ ನಾನಾ ವೇಷ ಹಾಕಿ ಅರಿವಿನ ಸತ್ಯಕ್ಕೆ ತಕ್ಕ ಸಾಮರ್ಥ್ಯವರಿಯದಿದ್ದಲ್ಲಿ ಯಾವ ವ್ರತ ಕ್ರಿಯೆಯಲ್ಲಿ ತೊಡಗಿದರೂ ಹಿಂದಣ ಕ್ರಿಯೆಗೂ, ಮುಂದಣ ಹಾಸ್ಯಕ್ಕೂ ತನು ಒಳಗಾಗುವುದು ತಪ್ಪುವುದಿಲ್ಲ.

ತನುವಿನ ವೇಷ,ಭಾಷೆ ನೋಡಿ ಸಮಾಜ ಮೆಚ್ಚಿಕೊಂಡೀತು. ಮನವೆಂಬ ಭಟನು ಮಾಡುವ ಅಪರಾಧವನ್ನು ತನುವಿನ ಅರಿವೆಂಬ ಅರಸನು ಒಪ್ಪಿಕೊಂಡು ಸಜ್ಜನನೆನ್ನಲಾರ. ಮನದ ವ್ರತವೊಂದು, ಮಾಡುವ ಕ್ರಿಯೆ ಮತ್ತೊಂದು. ಮನದ ನೇಮವೊಂದಾದರೆ ಮಾಡುವ ಕ್ರಿಯೆಯೆಲ್ಲಾ ಹಾನಿಯೇ. ನಿತ್ಯ ನೇಮವ ಹಿಡಿಯುವುದು ಬಿಡುವುದು ನಡೆದೇ ಇರುತ್ತದೆ. ಇದು ನಿತ್ಯವೂ ಕಷ್ಟ ಗುಣದಲ್ಲಿ ನಡೆವ ದೃಷ್ಟಗಳ್ಳನೆಂಬ ಭಟನ ನಿಯಮ. ಬಾಯೊಳಗಿನ ಹುಣ್ಣಿನಂತೆ. ಭಟನ ಈ ಹೇಯ ಕೃತ್ಯವೆಂಬ ಭ್ರಮೆಯ ಬಿಡಿಸಿ ಬ್ರಹ್ಮೇಶ್ವರಲಿಂಗವಪ್ಪ ಅರಸನ ಠಾವ ತೋರಾ ಎನಗೆ ಎಂದು ಬಸವಣ್ಣನವರನ್ನು ಬಾಹೂರ ಬೊಮ್ಮಣ್ಣ ಶರಣರು ಬೇಡಿಕೊಂಡಿದ್ದಾರೆ. ಆತನಿಗೆ ಹಸಿವಿತ್ತು. ಕ್ಷಣಾರ್ಧದಲ್ಲಿ ಬೊಮ್ಮಣ್ಣನ ಭ್ರಮೆ ಕಳೆದು ಬ್ರಹ್ಮನಾಗಿಸಿದರು ಬಸವಣ್ಣ. ಭ್ರಮೆ ಕಳೆದುಕೊಳ್ಳುವ ಬಯಕೆ ಉಳ್ಳ ಶಿಷ್ಯನಿಗೆ ಬ್ರಹ್ಮನನ್ನು ತೋರಿಸುವ ಬಸವಣ್ಣನವರಂತಹ ಗುರು ಸಿಕ್ಕೇ ಸಿಕ್ಕುತ್ತಾನೆ.

□

# ಅರಿವಿನ ಓಗರ

**ಆಕಾಶದುರಿ, ನೆಲದ ಮಡಕೆಯಲ್ಲಿ ಬಯಲ ನೀರ ತುಂಬಿ**
**ಇಲ್ಲದ ಅಕ್ಕಿಯ ಹಾಕಿ**
**ಮೂರು ನೆಲೆಯಲ್ಲಿ ಕುದಿವುತ್ತಿದ್ದಿತ್ತು.**
**ಪಾವಕನರಿದು ನೀರ ಹೊಯಿದು**
**ಗಂಜಿ ಅಲ್ಲಿಯೇ ಹಿಂಗಿತ್ತು,**
**ಏಣಾಂಕಧರ ಸೋಮೇಶ್ವರಲಿಂಗಕ್ಕೆ ಓಗರ ಬೇಕೆಂದು.**

**-ಬಿಬ್ಬಿ ಬಾಚಯ್ಯ ಶರಣರು**

ತನುವೆಂಬುದು ನೆಲದ ಮಡಕೆ. ಬಯಲಲ್ಲಿ ಬೆರೆತ ಆಮ್ಲಜನಕ ಜಲಜನಕ ಸೇರಿ ಜಲವಾಯಿತು. ಆ ಜಲಬಿಂದುವೇ ತನುವೆಂಬ ಮಡಕೆಯ ಗರ್ಭ ಸೇರಿ ತನುವಾಯಿತು. ಇದಕ್ಕೆ ಬಾಚಯ್ಯ ಶರಣರು ಬಯಲ ನೀರ ತುಂಬಿದ ನೆಲದ ಮಡಕೆ ಎಂದರು.

ಜಲಜನಕದಿಂದ ಹುಟ್ಟಿದ ಉರಿಯೇ ಆಕಾಶದ ಉರಿ. ತನುವೆಂಬ ನೆಲದ ಮಡಕೆಯಲ್ಲಿ ಶಬ್ದ ,ರೂಪ, ಸ್ಪರ್ಶ, ರುಚಿ, ವಾಸನೆ ಎಂಬ ಇಲ್ಲದ ಅಕ್ಕಿ ಸಂಗ್ರಹವಾಗಿವೆ. ಶಬ್ದ ಬಡಿದರೆ ಸಾಕು ಇಲ್ಲದ ಆಕಾಶದ ಉರಿ ಹತ್ತಿ ಜಲದ ಮಡಕೆ ಎಂಬ ತನು ಕತಕತನೆ ಕುದಿಯುತ್ತದೆ.

ಶಬ್ದ ಜಲದ ತನುವಿನಲ್ಲಿ ಸಂಗ್ರಹವಾಗಿ ನೆನಪಾದಾಗೊಮ್ಮೆ ಮೂರು ವೇಳೆ ಕುದಿಯುತ್ತದೆ. ಜಾಗ್ರದಲ್ಲಿ ಕುದಿಯುತ್ತದೆ. ಸ್ವಪ್ನದಲ್ಲಿ ಕುದಿಯುತ್ತದೆ. ಸುಶುಪ್ತಿಯಲ್ಲೂ ಕುದಿಯುತ್ತದೆ. ತನುವಿರುವವರೆಗೂ ಕುದ್ದು ಕುದ್ದು ತನುವಿನೊಂದಿಗೆ ಸಾಯುತ್ತದೆ.

**ಪಾವಕನರಿದು ನೀರ ಹೊಯಿದು ಗಂಜಿ ಅಲ್ಲಿಯೇ ಹಿಂಗಿತ್ತು, ಏಣಾಂಕಧರ ಸೋಮೇಶ್ವರಲಿಂಗಕ್ಕೆ ಓಗರ ಬೇಕೆಂದು :**

ಜಲದ ತನುವೆಂಬ ಮಡಕೆಗೆ ಶಬ್ದದಿಂದ ಬೆಂಕಿ ಹೊತ್ತಿಕೊಂಡಿದೆ. ಇಲ್ಲದ ಅಕ್ಕಿಯೊಂದಿಗೆ ಕುದಿಯುತ್ತದೆ. ತನುವಿಗೆ ಹತ್ತಿದ ಬೆಂಕಿಯನರಿತು ಕಡಿಮೆ ಮಾಡಿ, ನೀರು ಹಾಕಿದರೆ ಕುದಿಯುವುದು ನಿಂತು ಗಂಜಿ ಹಿಂಗಿ ಅನ್ನವಾಗುತ್ತದೆ. ಇಲ್ಲದಿದ್ದರೆ ಮಡಕೆ ಕುದ್ದು ಕುದ್ದು ಸಿಡಿದು ಹೋಗುತ್ತದೆ.

ತನುವಿದ್ದಾಗಲೇ ತನುವಿನಿಂದ ನುಡಿದು ಕೇಳುವ ಶಬ್ದ ತನುವಿನಲ್ಲಿಯೇ ತಿಳಿಯಬೇಕು. ತನು ಕುದಿಯುವುದು ನಿಂತು ತನುವಿನಲ್ಲಿಯೇ ಹಿಂಗಬೇಕು. ಇದು ತನುವಿನ ಒಡೆಯ ಏಣಾಂಕ ಧರನಿಗೆ ಮಾತ್ರ ಸಾಧ್ಯ. ಆಗ ಅರಿವೆಂಬ ಸೋಮೇಶ್ವರ ಲಿಂಗಕ್ಕೆ ಕುದ್ದ ಅಕ್ಕಿ ಓಗರವಾಗುತ್ತದೆ; ಅನ್ನವಾಗುತ್ತದೆ.

□

---

**ಅರಿವಿನ ಪರಿಮಳ :**

□ ತನುವಿದ್ದಾಗಲೇ ತನುವಿನಿಂದ ನುಡಿದು ಕೇಳುವ ಶಬ್ದ ತನುವಿನಲ್ಲಿಯೇ ತಿಳಿಯಬೇಕು.

# ಅಂಗವೆಂಬ ಅರಿವಿನ ಬೊಕ್ಕಸಕ್ಕೆ ಅಜ್ಞಾನವೆಂಬ ಬೀಗ ಬಿದ್ದಿದೆ

**ಅಂಗದ ಬೊಕ್ಕಸದ ಮಂದಿರಕ್ಕೆ ಚಿದ್ಘನಲಿಂಗವೆಂಬುದೊಂದು ಬೀಗ.**
**ತ್ರಿಗುಣವೆಂಬ ಮೂರೆಸಳಿನ ಸಿಕ್ಕು. ಒಂದು ಪೂರ್ವಗತಿ, ಒಂದು ಮಧ್ಯಗತಿ,**
**ಒಂದು ಉತ್ತರಗತಿಯಾಗಿ ಸಿಕ್ಕಿದವು ಮೂರೆಸಳು.**
**ಆ ಎಸಳಿಗೆ ಘುಟ ಒಂದೆ ಒಡಲು. ಎಸಳ ತೆಗೆವುದಕ್ಕೆ ಕೈಯ ಕಾಣೆ.**
**ಪ್ರತಿ ಕೈಗೆ ಎಸಳು ಅಸಾಧ್ಯ ನೋಡಾ. ಇಂತೀ ಬೀಗದ ಗುಣವ**
**ಬಸವಣ್ಣಪ್ರಿಯ ನಾಗರೇಶ್ವರಲಿಂಗ ನೀವೇ ಬಲ್ಲಿರಿ.**
**-ಬೊಕ್ಕಸದ ಚಿಕ್ಕಣ್ಣ ಶರಣರು**

ತನುವಿನ ಶಿಕ್ಷಣ ಪಡೆಯದ ವ್ಯಕ್ತಿ ಯಾವ ಕ್ಷೇತ್ರದಲ್ಲಿದ್ದರೂ ಆ ಕ್ಷೇತ್ರಕ್ಕೆ ನ್ಯಾಯ ಒದಗಿಸಲಾರ. ತಾನೂ ಸಮಾಧಾನಿಯಾಗಿರಲಾರ ಎಂಬುದನ್ನು ಬೊಕ್ಕಸದ ಚಿಕ್ಕಣ್ಣ ಶರಣರು ಈ ವಚನದ ಸೂತ್ರದ ಮೂಲಕ ವಿವರಿಸಿದ್ದಾರೆ.

**ಅಂಗದ ಬೊಕ್ಕಸದ ಮಂದಿರಕ್ಕೆ ಚಿದ್ಘನಲಿಂಗವೆಂಬುದೊಂದು ಬೀಗ :**

ಅಂಗವೆಂಬುದು ಜ್ಞಾನ ಸಂಪತ್ತಿನ ಭಂಡಾರ. ಚಿನ್ನ, ಬೆಳ್ಳಿ, ತಾಮ್ರ, ಕಂಚು, ಹಿತ್ತಾಳೆ, ಮುತ್ತು, ರತ್ನ, ಮಾಣಿಕ್ಯ, ಸ್ಫಟಿಕ, ಹವಳ, ವಜ್ರ ಮುಂತಾದ ಸಂಪತ್ತನ್ನು ಅಂಗ ಸೃಷ್ಟಿ ಮಾಡಿ, ತನ್ನ ಬೊಕ್ಕಸದ ಮಂದಿರದಲ್ಲಿಟ್ಟು ಅದಕ್ಕೆ ಚಿದ್ಘನಲಿಂಗವೆಂಬ ಅರಿವಿನ ಬೀಗ ಜಡಿದಿದೆ.

**ತ್ರಿಗುಣವೆಂಬ ಮೂರೆಸಳಿನ ಸಿಕ್ಕು :** ಆ ಬೀಗಕ್ಕೆ ಸತ್ವ ರಜ ತಮ ಎಂಬ ಮೂರೆಸಳುಗಳ ಸಿಕ್ಕು. ಒಂದೆಸಳು ಪೂರ್ವಗತಿಯಾಗಿದ್ದರೆ ಮತ್ತೊಂದು ಮಧ್ಯಮ ಗತಿ, ಮಗದೊಂದು ಉತ್ತರಗತಿಯ ಎಸಳುಗಳು ಬೀಗಕ್ಕೆ !

ಮೂರೆಸಳುಗಳಿಗೆ ಘುಟ ಒಂದೇ ಒಡಲು. ಈ ಬೀಗ ತೆರೆದು ಸಂಪತ್ತು ನೋಡಬೇಕೆಂದರೆ ಕೀಲಿಯೇ ಇಲ್ಲ. ಒಂದೊಂದು ಎಸಳೂ ಬಹು ಜಟಿಲ. ತೆರೆಯಲು ಹೋದಂತೆಲ್ಲ ಸಿಕ್ಕು ಸಿಕ್ಕು. ಇಂತೀ ಬೀಗದ ಗುಣವ ಬಸವಣ್ಣನಿಗೆ ಪ್ರಿಯವಾದ ಅರಿವೆಂಬ ನಾಗೇಶ್ವರಲಿಂಗನೇ ಬಲ್ಲ ಎಂದಿದ್ದಾರೆ ಚಿಕ್ಕಣ್ಣ ಶರಣರು.

ಅಂಗದಿಂದ ಸೃಷ್ಟಿಯಾದ ಸಂಪತ್ತು ಅಂಗದ ಸಂಪತ್ತೆ. ಅಂಗದ ಅರಿವಿನಿಂದ ಹಳದಿ ಅದಿರು, ಮುತ್ತು, ರತ್ನ, ಮಾಣಿಕ್ಯವೆಂಬ ವಸ್ತುಗಳಿಗೆ ಹೆಸರು ಕೊಟ್ಟು, ಆಯಾ ಹೆಸರಿನ ವಸ್ತುಗಳಿಗೆ ಪುನಃ ಅಂಗ ಮರುಳಾಯಿತು. ಹಿಂದೆ ಚಿನ್ನದ ನಾಣ್ಯ ಕರೆನ್ಸಿಯಾಗಿತ್ತು. ತೊಗಲಖ್‌ನ ಕಾಲದಲ್ಲಿ ಚರ್ಮ ಕರೆನ್ಸಿಯಾಯಿತು. ಅರಿವು ಮರೆಯಾಗಿ ಸತ್ವ ರಜ ತಮ ಎಂಬ ಗುಣಗಳು ಅಂಗದಲ್ಲಿ ಹುಟ್ಟಿಕೊಂಡವು.

ಒಮ್ಮೆ ಸಾತ್ವಿಕ ಗುಣ, ಒಮ್ಮೆ ರಜೋ ಗುಣ ಮತ್ತೊಮ್ಮೆ ತಾಮಸ ಗುಣಗಳ ಏರಿಳಿತಗಳು. ಹೀಗೆ ಎಂದು ಹೇಳಲು ಬಾರದ ಪ್ರವೃತ್ತಿಗಳು ಅಂಗದಲ್ಲಿ ಜನಿಸಿದವು.

ಹಣ, ಚಿನ್ನ ಕೊಟ್ಟು ದಾನಿ ಎನ್ನಿಸಿಕೊಳ್ಳುವುದು, ಖರೀದಿಸಿ ಸಂಗ್ರಹಿಸಿ ಶ್ರೀಮಂತ

ಎನ್ನಿಸಿಕೊಳ್ಳುವುದು, ಕಳುವು ಮಾಡಿ ಕಳ್ಳ ಎನಿಸಿಕೊಳ್ಳುವುದು, ಯುದ್ಧ ಸಾರಿ ಕೊಲೆ ಮಾಡಿ ಕಸಿದುಕೊಂಡು ರಾಜನೆನ್ನಿಸಿಕೊಳ್ಳುವುದು, ಸಂಪತ್ತೆಂದು ಭಿಕ್ಷೆ ಪಡೆದು ಗುರುವೆನ್ನಿಸಿಕೊಳ್ಳುವುದು, ಭಿಕ್ಷೆ ನೀಡಿ ಶಿಷ್ಯನೆನ್ನಿಸಿಕೊಳ್ಳುವ ಪ್ರವೃತ್ತಿಗಳು ಅಂಗದಲ್ಲಿ ಪ್ರಾರಂಭವಾದವು.

ಅರಿವಿನಿಂದ ಅಂಗ ಹೆಸರಿಸಿದ ವಸ್ತುಗಳೇ ಅಂಗಕ್ಕೆ ಮೃತ್ಯುವಾದವು. ಅಂಗಕ್ಕೆ ಆಯಾ ಹೆಸರು ತಂದುಕೊಟ್ಟವು. ಈ ಹೆಸರಿನಿಂದ ಅರಿವು ಅಂಗದಲ್ಲಿ ಮರೆತು ಹೋಯಿತು, ಮರೆವು ಅಜ್ಞಾನ ಅಧಿಕ ವಾಯಿತು. ಅಂಗ ಮನವೆಂಬ ಅಜ್ಞಾನದ ಸಾಮ್ರಾಜ್ಯವಾಯಿತು. ಅರಿವಿನ ಸಂಪತ್ತು ಅಂಗದಲ್ಲಿಯೇ ಉಳಿಯಿತು. ಅದಕ್ಕೆ ಚಿದ್ಘನವೆಂಬ ಬೀಗ ಜಡಿಯಿತು. ತ್ರಿಗುಣವೆಂಬ ಮೂರೆಸಳಿನ ಭ್ರಮೆಯ ಸಿಕ್ಕು ಅಂಗಕ್ಕೆ ಬಡಿದು ಅದರಿಂದ ಪಾರಾಗುವುದು ಅಸಾಧ್ಯವಾಯಿತು. ಕೀಲಿ ಅಂಗದಲ್ಲಿಯೇ ಇದೆ ಪತ್ತವೂ ಅಂಗದಲ್ಲಿಯೇ ಇದೆ; ಭ್ರಮೆಗೆ ಸೆರೆಯಾಳಾದ ಅಂಗ, ಪತ್ತ ಕೀಲಿ ಎರಡನ್ನೂ ಮರೆತಿದೆ. ಅರಿವಾದರೆ ಬಸವಣ್ಣನಂತಹ ಜ್ಞಾನಿಯನ್ನು ಬಯಸುವುದು. ಇಲ್ಲದಿದ್ದರೆ ಭ್ರಮೆಯಲ್ಲಿಯೇ ಸಾತ್ವಿಕ, ರಾಜಸ, ತಮೋಗುಣದವನೆಂದು ಹೆಸರು ಪಡೆದು ಮಂತ್ರಿ, ಶಾಸಕ, ಶ್ರೀಮಂತ, ಬಡವ, ಕಳ್ಳ, ಲಂಪಟ ಅಧಿಕಾರಿ, ಹೆಣ್ಣು, ಗಂಡಾಗಿ, ಗುರುವಾಗಿ, ಶಿಷ್ಯನಾಗಿ, ಜಾತಿ, ಮತ, ಪಂಥ ದಲ್ಲಿ ಬೆಂದು ಸಾಯುವುದು. ಅರಿವಿನ ಸಂಪತ್ತು ಮಾತ್ರ ಬಳಕೆಯಾಗದೆ ಅಂಗದಲ್ಲಿ ಹಾಗೇ ಉಳಿಯುವುದು.

□

---

**ಅರಿವಿನ ಪರಿಮಳ :**

□ ಹಣ, ಚಿನ್ನ ಕೊಟ್ಟು ದಾನಿ ಎನ್ನಿಸಿಕೊಳ್ಳುವುದು, ಖರೀದಿಸಿ ಸಂಗ್ರಹಿಸಿ ಶ್ರೀಮಂತ ಎನ್ನಿಸಿಕೊಳ್ಳುವುದು, ಕಳುವು ಮಾಡಿ ಕಳ್ಳ ಎನಿಸಿಕೊಳ್ಳುವುದು, ಯುದ್ಧ ಸಾರಿ ಕೊಲೆ ಮಾಡಿ ಕಸಿದುಕೊಂಡು ರಾಜನೆನ್ನಿಸಿಕೊಳ್ಳುವುದು, ಸಂಪತ್ತೆಂದು ಭಿಕ್ಷೆ ಪಡೆದು ಗುರುವೆನ್ನಿಸಿಕೊಳ್ಳುವುದು , ಭಿಕ್ಷೆ ನೀಡಿ ಶಿಷ್ಯನೆನ್ನಿಸಿಕೊಳ್ಳುವ ಪ್ರವೃತ್ತಿಗಳು ಅಂಗದಲ್ಲಿ ಪ್ರಾರಂಭವಾದವು.

# ಪಂಚೇಂದ್ರಿಯಗಳ ಸಹಭೋಜನ

**ಭರಿತಾರ್ಪಣ ಸಹಭೋಜನ ನೈವೇದ್ಯ ಸಹ**
**ಇಂತೀ ತ್ರಿವಿಧ ಭೇದಂಗಳ ಅಂಗೀಕರಿಸಿದ ಮತ್ತೆ**
**ಕರುಳಿಲ್ಲದ ಕಲಿಯಂತೆ, ಒಡಲಿಲ್ಲದ ಅಂಗದಂತೆ,**
**ಸಂಗವಿಲ್ಲದ ನಿರಂಗದಂತೆ, ದಗ್ಧ ಪಟದಂತೆ,**
**ಒಂದನೂ ಹೊದ್ದದ ಬಹು ವರ್ಣದಂತೆ, ಅಂಗವಿದ್ದೂ**
**ಅಳಿದು ತೋರುವ ನಿರಂಗಿಗಲ್ಲದೆ ಈ ತ್ರಿವಿಧ ವ್ರತ**
**ಪ್ರಸಾದವಿಲ್ಲ. ನಾನು ಎನಗೆ ಬಂದ ಕುತ್ತಕ್ಕೆ ಹಾಡಿಹರಸಿ,**
**ಮದ್ದನರೆವುತ್ತಿದ್ದೇನೆ, ಎನ್ನ ಕಾಡಬೇಡ.**
**ಕ್ರೀ ತಪ್ಪದೆ ಎನ್ನ ಕೂಡಿಕೊ**
**ಚೆನ್ನ ಚೆನ್ನ ಕೂಡಲರಾಮೇಶ್ವರಲಿಂಗ ಸಂಗ**

**-ಭರಿತಾರ್ಪಣದ ಚೆನ್ನಬಸವಣ್ಣ**

**ಸಹಭೋಜನ ಭರಿತಾರ್ಪಣ ನೈವೇದ್ಯ :**

ಭರಿತಾರ್ಪಣದ ಚೆನ್ನಬಸವಣ್ಣ ಶರಣರು ತಮ್ಮ ವಚನದಲ್ಲಿ ಮೂರು ಪದಗಳನ್ನು ಬಳಸಿದ್ದಾರೆ. ಅವರು ಭರಿತಾರ್ಪಣದಲ್ಲಿ ನೈಪುಣ್ಯತೆಯನ್ನು ಸಾಧಿಸಿದವರು. ಈ ಒಂದು ಶಬ್ದ ಹಿಡಿದು ತನುವಿನ ಸಂಕಟಕ್ಕೆ ಸಂಪೂರ್ಣ ವಿರಾಮ ನೀಡಿ, ಅರಿವಿನ ತನುವಿನಲ್ಲಿ ಕೂಡಿ, ಕೂಡಲರಾಮೇಶ್ವರ ಲಿಂಗದ ಸಂಗ ಮಾಡಿದವರು. ಭರಿತಾರ್ಪಣ ಶರಣರೆಂದು ಶರಣರಿಂದ ಬಿರುದು ಪಡೆದವರು.

**ಸಹ ಭೋಜನ:** ಸಕಲರೊಂದಿಗೆ ಕುಳಿತು ಊಟ ಮಾಡುವುದು ಮಾತ್ರ ಸಹಭೋಜನವಲ್ಲ. ಕಣ್ಣಿನಿಂದ ನೋಡುವ ನೋಟದ ಊಟದಲ್ಲಿ ತನುವಿಗೆ ಸಂಕಟವಾಗದೆ ತೃಪ್ತಿಯಾಗಿ ಭರಿತಾರ್ಪಣವಾಗಬೇಕು. ಕಿವಿಯಿಂದ ಕೇಳುವ ಶಬ್ದವೆಲ್ಲ ತನುವಿಗೆ ಪ್ರಸಾದವಾಗಬೇಕು. ಚರ್ಮದಿಂದ ಸ್ಪರ್ಶಿಸಿದ ವಸ್ತುಗಳೆಲ್ಲ ತನುವಿಗೆ ಸಂಕಟವನ್ನುಂಟು ಮಾಡದೆ ಭರಿತಾರ್ಪಣವಾಗಬೇಕು. ಮೂಗಿನಿಂದ ವಾಸಿಸಿದ ವಾಸನೆ ನಾಲಿಗೆಯಿಂದ ರುಚಿಸಿದ ಪಾದಾರ್ಥಗಳೆಲ್ಲ ತನುವಿಗೆ ಸುಖವನ್ನುಂಟು ಮಾಡದೆ ಭರಿತಾರ್ಪಣವಾಗಬೇಕು.

ಕಣ್ಣು, ಕಿವಿ, ಮೂಗು, ನಾಲಿಗೆ ಚರ್ಮದೊಂದಿಗೆ ಸಹ ಭೋಜನ ಮಾಡಿ ತೃಪ್ತಿಯಿಂದ ತನುವಿಗೆ ಭರಿತಾರ್ಪಣ ಮಾಡುವುದು ಸರಳ ಮಾತಲ್ಲ. ದೇವರಿಗೆ ನೈವೇದ್ಯ ಮಾಡಿದಂತೆ. ಎಲ್ಲ ಪದಾರ್ಥಗಳನ್ನು ಎಡೆ ಮಾಡಿ ಕಲ್ಲ ದೇವರ ಮುಂದಿಟ್ಟರೆ ಆದರ ವಾಸನೆ, ರೂಪ, ಬಣ್ಣ ರುಚಿಗೆ ಮರುಳಾಗದೆ ಒಂದನ್ನೂ ಸೇವಿಸದೆ ಹಾಗೆ ಉಳಿದಿರುತ್ತವೆ. ಅದು ಜಡ. ಇಲ್ಲಿ ಹಾಗಲ್ಲ ರೂಪ ಶಬ್ದ ರುಚಿ ವಾಸನೆ ಸ್ಪರ್ಶಕ್ಕೆ ತನು ಸಂಕಟಪಡದೆ ನೈವೇದ್ಯದಂತೆ, ಅಂದರೆ ಏನೂ ತೊಂದರೆ ಇಲ್ಲದಂತೆ ಶೂನ್ಯ ಭಾವದಲ್ಲಿ ಆನಂದದಿಂದ ಸ್ವೀಕರಿಸಿ ಭರಿತಾರ್ಪಣ ಮಾಡಬೇಕು ಎನ್ನುತ್ತಾರೆ ಭರಿತಾರ್ಪಣದ ಚೆನ್ನಬಸವಣ್ಣ ಶರಣರು.

ಭರಿತಾರ್ಪಣ, ಸಹಭೋಜನ, ನೈವೇದ್ಯವೆಂಬ ಮೂರು ವ್ರತಗಳು ಸಾಮಾನ್ಯರಿಗೆ ಸಾಧ್ಯ

ಎಲ್ಲ. ಕರುಳಿಲ್ಲದ ಕಲಿ, ಒಡಲಿಲ್ಲದ ಅಂಗಿ, ಸಂಗವಿಲ್ಲದ ನಿರಂಗಿ, ಜಾತಿ ಮತ ಪಂಥ ಹೆಣ್ಣುಗಂಡೆಂಬ ಭೇದ ಇಲ್ಲದ, ಅಂಗವಿದ್ದೂ ಅಳಿದು ತೋರುವ ನಿರಂಗಿಗೆ ಮಾತ್ರ ಈ ತ್ರಿವಿಧ ವ್ರತ ಸಾಧ್ಯ! ಒಡಲೊಳಗಿದ್ದು ಒಡಲ ಸೋಂಕದೆ ಒಡಲು ಬೆಳಗುವ ಬೆಳಕೆಂಬ ಅರಿವಿಗೆ ಮಾತ್ರ ಸಾಧ್ಯ!

ನಾನು ಎನ್ನ ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಕ್ಕೆ ಬಂದ ಕುತ್ತಿಗೆ ತನುವಿನ ಒಡೆಯ ನನ್ನು ಹಾಡಿ ಹರಿಸಿ ಮದ್ದನರೆಯುತ್ತಿದ್ದೇನೆ. ಓ ನನ್ನ ಆರಾಧ್ಯ ಅರಿವಿನ ದೈವವೇ ಎನ್ನ ಕಾಡಬೇಡ, ಮಾಡುವ, ನೋಡುವ, ರುಚಿಸುವ, ಕೇಳುವ, ಸ್ಪರ್ಶಿಸುವ ವಾಸಿಸುವ ಕ್ರಿಯೆಯಲ್ಲಿ ಎನ್ನನ್ನು ಕೂಡಿಕೊ ಚೆನ್ನ ಚೆನ್ನ ಕೂಡಲ ರಾಮೇಶ್ವರ ಲಿಂಗವೇ ನಾನು ನಿನ್ನ ಸಂಗದ ಆಪೇಕ್ಷಿಯಾಗಿದ್ದೇನೆ ಎಂದು ಮನ ತುಂಬಿ ಹಾಡಿದ್ದಾರೆ ಭರಿತಾರ್ಪಣದ ಚೆನ್ನ ಬಸವಣ್ಣ ಶರಣರು.

□

# ಭೀಮಯ್ಯ ಶರಣರ ಭಿಕಾರಿ ಸೂತ್ರ

**ಭಿಕಾರಿ ಭಿಕಾರಕ್ಕೆಳಸ**
**ಉಣ್ಣಲು ಉಡಲು ಕಾಣದಾತ ಭಿಕಾರಿ**
**ತನು ಮೀಸಲು, ಮನ ಮೀಸಲು,**
**ಬಾಯಿ ಬೋರುಬೋರು, ಮರಣವಳಿದುಳಿದಾತ ಭಿಕಾರಿ.**
**ಸಂಚಲ ಪಂಚಕರಣಗಳ ತೆಗೆದುಂಡು,**
**ರುಂಡಮಾಲೆಯ ರಣಮಾಲೆಯ**
**ಹೆಣಮಾಲೆಯ ಚಾರುಚ್ಚಿದಲ್ಲದೆ**
**ಭಿಕಾರಿ ಭೀಮೇಶ್ವರ ಲಿಂಗಕ್ಕೆ ದೂರ ಕಾಣಾ,**
**ಕರುತಿರುವ ಗೊರವಾ.**

**-ಭಿಕಾರಿ ಭೀಮಯ್ಯ ಶರಣರು**

**ಭಿಕಾರಿ:** ಹಿಂದಿಲ್ಲ ಮುಂದಿಲ್ಲದಾತ. ಯಾರೂ ಇಲ್ಲದಾತ. ಉಣ್ಣಲು ಉಡಲು ಕಾಣದಾತ ಭಿಕಾರಿ. ಆತನ ತನು ಮೀಸಲು, ಮನ ಮೀಸಲು, ಆತನ ಬಾಯಿ ಬರಿದು. ಮರಣವನು ಅಳಿದು ಉಳಿದ ಅಜರಾಮರ. ಜನ್ಮ ಜನ್ಮಾಂತರಗಳಿಂದ ಬಂದ ಪಂಚೇಂದ್ರಿಯಗಳ ಅಜ್ಞಾನವನು ತೆಗೆದು ಉಂಡಾತ. ರುಂಡಮಾಲೆಯ ಚೆಲುವ ಆತನೇ ಭಿಕಾರಿ.

ಇಂತಹವನಲ್ಲದ ಭಿಕಾರಿ, ಭಿಕಾರಿ ಭೀಮೇಶ್ವರ ಲಿಂಗಕ್ಕೆ ದೂರ ಎಂದಿದ್ದಾರೆ ಭೀಮಯ್ಯ ಶರಣರು.

ತನು ಒಂದಾದರೂ ಅದರಲ್ಲಿ ಸ್ಥೂಲ ಸೂಕ್ಷ್ಮ ಕಾರಣ ತನುಗಳೆಂದು ಮೂರು ತನುಗಳಿವೆ. ಸ್ಥೂಲ ತನುವಿನ ಜನ್ಮಕ್ಕೆ ಕಾರಣವಾದದ್ದು ಕಾರಣ ತನು. ಸೂಕ್ಷ್ಮ ತನುವಿನ ಉಗಮಕ್ಕೆ ಕಾರಣವಾದದ್ದು ಕಾರಣ ತನುವೆ.

ಕಾರಣ ತನುವೇ ಭಿಕಾರಿ. ಭಿಕಾರಿ ಭೀಮೇಶ್ವರಲಿಂಗ! ಸೂಕ್ಷ್ಮ ತನು, ಸ್ಥೂಲ ತನುವಿಗೆ ಜನ್ಮ ನೀಡಿದ ಭಿಕಾರಿ!! ಜನ್ಮ ಪಡೆದ ಸ್ಥೂಲ ಸೂಕ್ಷ್ಮ ತನುಗಳೆರಡೂ ಭಿಕಾರಿಯನ್ನು ಮರೆತ ಭಿಕಾರಿಗಳು.

**ಭಿಕಾರಿ:** ಆತ ಶಿವ. ಆತನಿಗೆ ಹಿಂದಿಲ್ಲ ಮುಂದಿಲ್ಲ. ಹುಟ್ಟು ಸಾವುಗಳಿಲ್ಲ. ಕರು ಕಾಯುವ ಗೊರವನಾತ. ಪಶು ನಾನು ಪಶುಪತಿ ಅವನು. ಅರಿವೆಂಬ ಗುರುವಾತ; ತನುವಿನ ಮನದ ಮೂಲಕ ಆ ಗುರುವಿಗೆ ಶರಣು ಹೋಗಬೇಕಾದ ಶರಣ ನಾನು.

ಎಲ್ಲ ವಸ್ತುಗಳನ್ನು ಸೃಷ್ಟಿಸಿದಾತ ಆತ. ಆ ವಸ್ತುಗಳಿಗೆ ಸೆರೆಯಾಳಾಗಿ ಆತನನ್ನೇ ಮರೆತ ಭಿಕಾರಿ ನಾನು. ಆತನನ್ನು ಅರಿತರೆ ಭಿಕಾರಿ ಭೀಮೇಶ್ವರ ಲಿಂಗವೇ ನಾನು. ಕರು ಕಾಯುವ ಗೊರವನೇ ನಾನು. ಇದು ಭೀಮಯ್ಯ ಶರಣರ ಭಿಕಾರಿ ಸೂತ್ರ.

□

# ಅರಿವಿನ ಆಚಾರದಲ್ಲಿದ್ದವನೇ ಭವಿ

**ಆಚಾರವುಳ್ಳನ್ನಕ್ಕ ಭಕ್ತನಲ್ಲ. ಅನಾಚಾರವುಳ್ಳನ್ನಕ್ಕ ಭವಿಯಲ್ಲ.**
**ಅಂಗ ನಷ್ಟವಾಗಿ, ಕಂಗಳಲ್ಲಿ ಅರ್ಪಿಸಿ, ತಲೆಯಲ್ಲಿ ಉಣ್ಣಬಲ್ಲಡೆ ಭಕ್ತ.**
**ಅರ್ಪಿಸಿಕೊಳ್ಳದೆ, ಅನರ್ಪಿತವ ಮುಟ್ಟದೆ ಅಚ್ಚ ಪ್ರಸಾದವ ಕೊಳಬಲ್ಲಡೆ ಭವಿ.**
**ಉಭಯ ಒಂದಾದಡೆ ನಿಜಗುರು ಭೋಗೇಶ್ವರನಲ್ಲಿ ಲಿಂಗೈಕ್ಯನು.**

**- ಭೋಗಣ್ಣ ಶರಣರು**

ಭೋಗಣ್ಣ ಶರಣರ 22 ವಚನಗಳು 8ನೇ ಕಟ್ಟಿನಲ್ಲಿವೆ. ಅವರ ಒಂದೊಂದು ವಚನದಲ್ಲಿಯೂ ಬ್ರಹ್ಮಜ್ಞಾನವೇ ಅಡಗಿದೆ. ಅದಕ್ಕಾಗಿಯೇ ಜ್ಞಾನವನ್ನು ಭೋಗಿಸಿದ ಭೋಗಣ್ಣ ಎಂದು ಶಿವಶರಣರಿಂದ ಬಿರುದು ಪಡೆದರು.

**ಆಚಾರವುಳ್ಳನ್ನಕ್ಕ ಭಕ್ತನಲ್ಲ :** ತ್ರಿಕಾಲ ಸ್ನಾನಮಾಡಿ ಪೂಜೆ ಮಾಡುವವ, ಲಿಂಗ ದೇವರನ್ನು ಪೂಜಿಸದೆ ಏನೂ ಮುಟ್ಟದವ, ಮಡಿ ಮೈಲಿಗೆ ಮುಟ್ಟು ತಟ್ಟುಗಳ ಆಚಾರವುಳ್ಳವ, ಅಮಾವಾಸ್ಯೆ ಹುಣ್ಣಿಮೆ ವಾರ ತಿಥಿ ನಕ್ಷತ್ರಗಳಿಗನುಸಾರವಾಗಿ ಜಂಗಮನನ್ನು ಪೂಜಿಸಿ ಆತ ಉಂಡಮೇಲೆ ಉಣ್ಣುವವ, ಪುಣ್ಯಕ್ಷೇತ್ರ, ಮನೆದೈವದ ಆಚಾರದಲ್ಲಿದ್ದವ, ಗುರುಗಳನ್ನು ಕರೆದು ಮನೆಯಲ್ಲಿ ಲಿಂಗ ಪೂಜೆ, ರುದ್ರಾಭಿಷೇಕ ವರದಶಂಕರ ಸತ್ಯನಾರಾಯಣ ಕತೆಗಳನ್ನು ಹೇಳಿಸುವ ಆಚಾರದಲ್ಲಿದ್ದವನು ಭಕ್ತನಲ್ಲ ಎನ್ನುತ್ತಾರೆ ಭೋಗಣ್ಣ ಶರಣರು.

**ಅನಾಚಾರವುಳ್ಳನ್ನಕ್ಕ ಭವಿಯಲ್ಲ :** ಮೇಲಿನ ಎಲ್ಲ ಆಚಾರಗಳನ್ನು ಮಾಡುವವ ಸಮಾಜದ ದೃಷ್ಟಿಯಲ್ಲಿ ಭಕ್ತ. ಯಾವ ಆಚಾರಗಳಲ್ಲಿಯೂ ತೊಡಗದವನನ್ನು ಭವಿಯೆಂದು ಅನಾಚಾರಿಯೆಂದು ಜನ ಜರಿದು ಹೀಯಾಳಿಸುತ್ತಾರೆ. ಆದರೆ ಭೋಗಣ್ಣ ಶರಣರು ಈ ಯಾವ ಆಚಾರ ಮಾಡದವನನ್ನು ಪ್ರೀತಿಯಿಂದ ಮೈದಡವಿ ಭವಿ ಎಂದು ಸರ್ಟಿಫಿಕೇಟ್ ಕೊಟ್ಟಿದ್ದಾರೆ.

**ಅಂಗ ನಷ್ಟವಾಗಿ ಕಂಗಳಲ್ಲಿ ಅರ್ಪಿಸಿ, ತಲೆಯಲ್ಲಿ ಉಣ್ಣಬಲ್ಲಡೆ ಭಕ್ತ :**

ತ್ರಿಕಾಲ ಸ್ನಾನ ಮಾಡಿ ಪೂಜಿಸಿದರೂ, ಪುಣ್ಯಕ್ಷೇತ್ರಗಳಿಗೆ ಅಲೆದು ದೇವರ ದರ್ಶನ ಮಾಡಿದರೂ ದೇವಸ್ಥಾನಗಳನ್ನು ನಿರ್ಮಿಸಿ ಜಾತ್ರೆ ಮಾಡಿ ಮಹಾಭಕ್ತನೆಂದು ಜನರಿಂದ ಬಿರುದು ಪಡೆದರೂ ಕೂಡಾ ನೋಡಿದ ರೂಪದೊಂದಿಗೆ ಅಂಗ ಸುಖಪಡಬೇಕೆಂಬ ಕಣ್ಣಿನ ಹಾದರದ ಬಯಕೆ ಆಚಾರ ಮಾಡುವ ಭಕ್ತನಿಗೆ ನಿಲ್ಲುವುದಿಲ್ಲ.

ಕಣ್ಣಿನ ಅಜ್ಞಾನ ಕಳೆಯುವ ಶಕ್ತಿ ಭಕ್ತ ಆಚರಿಸುವ ಆಚಾರಕ್ಕೆ ದಕ್ಕಲಿಲ್ಲ. ಅಂಗ ನರಕಯಾತನೆ ಅನುಭವಿಸುವ ಸಂಕಟವೂ ನಿಲ್ಲಲಿಲ್ಲ ಅಂದಮೇಲೆ ಆತನನ್ನು ಭಕ್ತ ಎನ್ನಲು ಸಾಧ್ಯವೇ ಇದು ಭೋಗಣ್ಣ ಶರಣರ ಪ್ರಶ್ನೆ.

ಕಣ್ಣಿಗೆ ತಾನು ನೋಡುವ ರೂಪ ಅನಾವರಣವಾದರೆ, ಚರ್ಮ ತನ್ನಂತೆಯೇ ಇದೆ. ಅದರೊಳಗಿರುವ ವಸ್ತುಗಳು ಕೂಡಾ ತನ್ನಂತೆಯೇ ಇವೆ. ಅರಿವು ಪ್ರಾಣವೆಂಬ ನಿರೂಪದಿಂದ ರೂಪ ನಿರ್ಮಾಣವಾಗಿದೆ. ನಿರೂಪ ಕಳಚಿದರೆ ರೂಪ ಶವ. ಶವದ ಬಯಕೆ ಊಹಿಸಲೂ ಅಸಾಧ್ಯ. ಆದರೂ ನಿರೂಪದ ನಿಜವನು ನೋಡಲರಿಯ !

ರೂಪ ನೋಡುವ ಕಣ್ಣು ನಿರೂಪಕ್ಕೆ ಅರ್ಪಿತವಾದರೆ ಅಂಗ ನಷ್ಟವಾಗಿ ಲಿಂಗವಾಗುತ್ತದೆ. ಅರಿವೇ ತಾನಾಗುತ್ತದೆ.

ಆಗ ಅಂಗವನ್ನು ಬಯಸುವುದಿಲ್ಲ, ಅಂಗಕ್ಕೆ ಅರ್ಪಿಸಿಕೊಳ್ಳುವುದಿಲ್ಲ. ಅನರ್ಪಿತವನು ಮುಟ್ಟುವುದಿಲ್ಲ. ನೋಡುವ ನೋಟದಲ್ಲಿ ಕಣ್ಣು ತನ್ನನ್ನೇ ನೋಡುತ್ತದೆ. ತನ್ನಂತೆ ಅರಿವುಳ್ಳ ಚೇತನ ವನ್ನು ನೋಡಿ ತಲೆಯಲ್ಲಿಯೇ ಉಂಡು ಆನಂದಪಡುತ್ತದೆ. ಅಂಗಕ್ಕೆ ಸಂಕಟವನೊಡ್ಡದೆ ಸುಖದ ಸಂದೇಶ ಸಾರುತ್ತದೆ. ಯಾವ ಆಚಾರವನ್ನು ಮಾಡದೆ ನೋಡಿದ ರೂಪವನ್ನು ಕಣ್ಣು ಪ್ರಸಾದವಾಗಿ ಸವೆಯುತ್ತದೆ. ಈ ಆಚಾರದಲ್ಲಿದ್ದವನೇ ಭವಿ. ಅಚ್ಚ ಪ್ರಸಾದಿ ! ರೂಪ - ನಿರೂಪ ಒಂದಾದ ಅರಿವಿನ ನಿಜಗುರು !! ಕಣ್ಣು , ಚರ್ಮ, ಕಿವಿ, ಮೂಗು, ನಾಲಿಗೆಯ ಜ್ಞಾನವನ್ನು ಅರಿವಿನಿಂದ ಭೋಗಿಸಿ, ಭೋಗೇಶ್ವರನೆಂಬ (ಲಿಂಗ) ಅರಿವಿನಲ್ಲಿ ಐಕ್ಯವಾದವನೇ ಭವಿ.

□

**ಅರಿವಿನ ಪರಿಮಳ :**

- □ ತ್ರಿಕಾಲ ಸ್ನಾನ ಮಾಡಿ ಪೂಜಿಸಿದರೂ, ಪುಣ್ಯಕ್ಷೇತ್ರಗಳಿಗೆ ಅಲೆದು ದೇವರ ದರ್ಶನ ಮಾಡಿದರೂ ದೇವಸ್ಥಾನಗಳನ್ನು ನಿರ್ಮಿಸಿ ಜಾತ್ರೆ ಮಾಡಿ ಮಹಾಭಕ್ತನೆಂದು ಜನರಿಂದ ಬಿರುದು ಪಡೆದರೂ ಕೂಡಾ ನೋಡಿದ ರೂಪದೊಂದಿಗೆ ಅಂಗ ಸುಖಪಡಬೇಕೆಂಬ ಕಣ್ಣಿನ ಹಾದರದ ಬಯಕೆ ಆಚಾರ ಮಾಡುವ ಭಕ್ತನಿಗೆ ನಿಲ್ಲುವುದಿಲ್ಲ.
- □ ರೂಪ ನೋಡುವ ಕಣ್ಣು ನಿರೂಪಕ್ಕೆ ಅರ್ಪಿತವಾದರೆ ಅಂಗ ನಷ್ಟವಾಗಿ ಲಿಂಗವಾಗುತ್ತದೆ. ಅರಿವೇ ತಾನಾಗುತ್ತದೆ.

# ಅಂಗವೇ ಲಿಂಗ

ಕರಸ್ಥಲದ ಲಿಂಗವ ಬಿಟ್ಟು,
ಧರೆಯ ಮೇಲಣ ಪ್ರತುಮೆಗೆರಗುವ
ನರಕಿನಾಯಿಗಳ ನೇನೆಂಬೆನಯ್ಯಾ,
ಪರಮ ಪಂಚಾಕ್ಷರ ಮೂರ್ತಿ ಶಾಂತಮಲ್ಲಿಕಾರ್ಜುನಾ.

-ಮಡಿವಾಳ ಮಾಚಿ ದೇವರ ಸಮಯಾಚಾರದ
ಮಲ್ಲಿಕಾರ್ಜುನ ಶರಣರು

**ಕರಸ್ಥಲದ ಲಿಂಗವ ಬಿಟ್ಟು ಧರೆಯ ಮೇಲಣ ಪ್ರತುಮೆಗೆರಗುವ ನರಕಿ ನಾಯಿಗಳ ನೇನೆಂಬೆನಯ್ಯ ಪರಮ ಪಂಚಾಕ್ಷರ ಮೂರ್ತಿ ಶಾಂತ ಮಲ್ಲಿಕಾರ್ಜುನ:**

ತನುವಿನಲ್ಲಿ ತನ್ಮಯವಾದ ಅರಿವೇ ಲಿಂಗ. ಅರಿವು ತನುವನ್ನು ಬೆಳಗುವ ಬೆಳಕು. ಜ್ಞಾನಿಗಳು ಎಷ್ಟು ಹೇಳಿದರೂ ಬೆಳಕು ಗಮನಕ್ಕೆ ಬಾರಲಿಲ್ಲ. ಕೇರಿನ ಮೇಣದಿಂದ ಮೊಟ್ಟೆಯಾಕಾರದ ಲಿಂಗ ರಚಿಸಿ ಅದರಲ್ಲಿ ಪ್ರಾಣವಾಟವಿಟ್ಟರು.

ಅಂಗ (ಕರಸ್ಥಲ)ವೆನ್ನುವುದು ಕಪ್ಪು ಮೊಟ್ಟೆ. ಇದರಲ್ಲಿ ಬೆಳಕಿನ ಮರಿ ಇದೆ. ಹೀಗೆಯೇ ಅಂಗದಲ್ಲಿ (ಲಿಂಗ) ಅರಿವಿದೆ. ಅದು ಬೆಳಕು. ಗಮನಕ್ಕೆ ಬಂದರೆ ಅಂಗವೆಲ್ಲ ಲಿಂಗವೇ ಎಂದು ತೋರಿಸಲು ಹಿರಿಯರು ಲಿಂಗ ಪ್ರತಿಮೆ ರಚಿಸಿದರು. ಅದೇ ನಿಜವಾಯಿತು. ಸರ್ವಾಂಗದಲ್ಲಿ ಬೆರೆತ ಅರಿವೇ ಸುಳ್ಳಾಯಿತು.

''ಕಟೆದ ಕಲ್ಲು ಲಿಂಗವೆಂದೆನಿಸಿತ್ತು. ಕಟೆಯದ ಕಲ್ಲು ಕಲ್ಲೆನಿಸಿತ್ತು. ಪೂಜಿಸಿದ ಮಾನವ ಭಕ್ತನೆನಿಸಿದನು; ಪೂಜಿಸದ ಮಾನವ ಮಾನವನೆನಿಸಿದನು. ಕಲ್ಲಾದಡೇನು? ಪೂಜೆಗೆ ಫಲವಾಯಿತ್ತು; ಮಾನವನಾದಡೇನು? ಭಕ್ತಿಗೆ ಕಾರಣಿಕನಾದನು. ಕಲ್ಲು ಲಿಂಗವಲ್ಲ, ಲಿಂಗ ಕಲ್ಲಲ್ಲ ನೋಡಾ, ಕಪಿಲಸಿದ್ಧ ಮಲ್ಲಿಕಾರ್ಜುನಾ'' ಎಂದು ಸಿದ್ಧರಾಮ ಶರಣರು ಸೂತ್ರದಿಂದ ನಿರೂಪಿಸಿದ ಅರಿವು ಕೂಡಾ ಅಂಗದ ಮನಕ್ಕೆ ಬರಲಿಲ್ಲ.

ಲಿಂಗವೆಂಬ ಪ್ರತಿಮೆ ಪೂಜಿಸಿ ತೋರಿಕೆಯ ಮುಖವಾಡದ ಭಕ್ತನಾಗಬಹುದು, ಆ ಪ್ರತಿಮೆ ಪೂಜೆಗೆ ಕಾರಣವಾಗಬಹುದು, ಆದರೆ ಲಿಂಗವೆಂದರೇನೆಂದು ಅರಿಯದೆ ಲಿಂಗ ಪ್ರತಿಮೆ ಪೂಜೆಯಲ್ಲಿಯೇ ಕೊನೆಯುಸಿರೆಳೆದರೆ ಅಂಗದ ಗತಿಯೇನು?

''ಲಿಂಗ ಘನವೆಂಬೆನೆ ಕಲ್ಲಿನ ಮಗ; ಪಾದೋದಕ ಘನವೆಂಬೆನೆ ಇಂದ್ರನ ಮಗ; ಪ್ರಸಾದ ಘನವೆಂಬೆನೆ ಶೂದ್ರನ ಮಗ; ವಿಭೂತಿಯ ಘನವೆಂಬೆನೇ? ಗೋವಿನ ಮಗಳು. ಇವೆಲ್ಲ ಒಂದೊಂದರಿಂದ ಜನನವಾಯಿತ್ತು ನೀವಾರಿಂದ ಜನನವಾದಿರಿ ನಿರೂಪಿಸಾ ಕಪಿಲಸಿದ್ಧ ಮಲ್ಲಿಕಾರ್ಜುನಾ''

ಲಿಂಗ-ಕಲ್ಲು, ಪಾದೋದಕ-ನೀರು, ಪ್ರಸಾದ-ರೈತ ಬೆಳೆದದ್ದು, ವಿಭೂತಿ-ಗೋವಿನ ಸೆಗಣಿ, ಇವೆಲ್ಲವುಗಳ ಹುಟ್ಟು ನಮಗೆ ತಿಳಿದಿದೆ. ಆದರೂ ಅಜ್ಞಾನದಿಂದ ಪೂಜಿಸುತ್ತಿದ್ದೇವೆ; ಅರಿವು ಮರೆಯಾದುದರಿಂದ! ತಿಳಿಯುವ ಅರಿವು ಅಂಗದಲ್ಲಿಯೇ ಇದೆ. ತಾಯಿ ಅಂಗಕ್ಕೆ ಜನ್ಮಕೊಟ್ಟಳೇ ಹೊರತು ಅರಿವಿಗೆ ಜನ್ಮ ನೀಡಲಿಲ್ಲ. ಇಂತಹ (ಅರಿವು) ಲಿಂಗವೇ ಆದ ನೀವು ಯಾರಿಂದ ಜನ್ಮ

ಪಡೆದಿರಿ?

**ಧರೆಯ ಮೇಲಣ ಪ್ರತಿಮೆಗೆರಗುವುದನ್ನು ಬಿಟ್ಟು ನಿಮ್ಮನ್ನು ನೀವು ನಿರೂಪಿಸಿಕೊಳ್ಳಿ. ಪರಮ ಪಂಚಾಕ್ಷರ ಮೂರ್ತಿ ಶಾಂತ ಮಲ್ಲಿಕಾರ್ಜುನಾ:**

ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮ ಎಂಬ ಐದು ಜ್ಞಾನಗಳಿಂದ ಕೂಡಿದ ಅಂಗ ಶಾಂತಮಹಾಸಾಗರ. ಪರಮ ಪಂಚಾಕ್ಷರ ಮೂರ್ತಿ ಎಂದಿದ್ದಾರೆ ಮಲ್ಲಿಕಾರ್ಜುನ ಶರಣರು. ಅವರು ಮಡಿವಾಳ ಮಾಚಿದೇವರ ಸಮಯಾಚಾರದ ಪಾಲನೆಯಲ್ಲಿದ್ದವರು. ಐದು ವಚನಗಳನ್ನು ಬರೆದು ಅಂಗದಲ್ಲಿಯೇ ಐದು ಅರಿವಿನ ಲಿಂಗ ತೋರಿಸಿದ ಮಹಾನುಭಾವರು.

□

**ಅರಿವಿನ ಪರಿಮಳ :**

- ಲಿಂಗವೆಂಬ ಪ್ರತಿಮೆ ಪೂಜಿಸಿ ತೋರಿಕೆಯ ಮುಖವಾಡದ ಭಕ್ತನಾಗಬಹುದು, ಆ ಪ್ರತಿಮೆ ಪೂಜೆಗೆ ಕಾರಣವಾಗಬಹುದು, ಆದರೆ ಲಿಂಗವೆಂದರೇನೆಂದು ಅರಿಯದೆ ಲಿಂಗ ಪ್ರತಿಮ ಪೂಜೆಯಲ್ಲಿಯೇ ಕೊನೆಯುಸಿರೆಳೆದರೆ ಅಂಗದ ಗತಿಯೇನು?

# ಅಂಗಕ್ಕೆ ಲಿಂಗ ಕಟ್ಟುವುದು ಚಿನ್ನಕ್ಕೆ ಬಣ್ಣ ಬಳಿದಂತೆ

**ಅಂಗ ಲಿಂಗ ಸಂಬಂಧವಾಗಬೇಕೆಂಬ ಭಂಗಿತರ ಮಾತು ಕೇಳಲಾಗದು.**
**ಅಂಗ ಲಿಂಗ ಸಂಬಂಧ ಕಾರಣವೇನು ಮನ ಲಿಂಗ ಸಂಬಂಧವಾಗದನ್ನಕ್ಕ?**
**ಮನವು ಮಹದಲ್ಲಿ ನಿಂದ ಬಳಿಕ**
**ಲಿಂಗಸಂಬಂಧವೇನು ಹೇಳಾ, ಕಲಿದೇವರ ದೇವಾ.**

**-ಮಡಿವಾಳ ಮಾಚಿದೇವ ಶರಣರು**

ಅಂಗದ ಮೇಲೆ ಲಿಂಗ ಧರಿಸಿ, ಅಂಗ ಲಿಂಗ ಸಂಬಂಧವಾದುದು ಎಲ್ಲರಿಗೂ ಪರಿಚಯ ವಿದೆ. ಇದು ಸುಲಭದ ಕೆಲಸ. ಗರ್ಭಕ್ಕೆ ಲಿಂಗ ಧರಿಸುವ ಪದ್ಧತಿಯೂ ಇದೆ. ಗರ್ಭದಿಂದ ಹೊರ ಬಂದ ಮಗುವಿಗೆ ಮೂರು ದಿನಗಳ ನಂತರ ಲಿಂಗ ಕಟ್ಟುವ ಪದ್ಧತಿಯೂ ರೂಢಿಯಲ್ಲಿದೆ.

ಮನೆ ಗುರುಗಳು ಮಗುವಿನ ಅಂಗದ ಮೇಲೆ ಲಿಂಗ ಧರಿಸಿ ಷಡಕ್ಷರ ಮಂತ್ರ ಕಿವಿಯಲ್ಲಿ ಪಠಿಸುವ ಪರಿಪಾಠ ಸರ್ವ ಲಿಂಗವಂತರಿಗೂ ತಿಳಿದಿದೆ. ಇದನ್ನು ಮಾಚಿದೇವರು ಭಂಗಿತರ ಮಾತು ಕೇಳಲಾಗದು ಎಂದು ಖಂಡಿಸುತ್ತಾರೆ.

ಅಂಗದ ಮೇಲೆ ಲಿಂಗ ಧರಿಸಿದರೆ ಅಂಗಕ್ಕೆ ಲಿಂಗವೆಂದರೇನೆಂದು ತಿಳಿಯುತ್ತದೆ. ಲಿಂಗಕ್ಕೆ ಅಂಗವೆಂದರೇನೆಂದು ತಿಳಿಯುವುದಿಲ್ಲ. ಅದು ಜಡ. ಅಂಗದ ಮೇಲೆ ಧರಿಸಿದರೆ ಅಲ್ಲಿಯೇ ನೇತಾಡುತ್ತದೆ. ಗೂಟಕ್ಕೆ ಹಾಕಿದರೆ ಅಲ್ಲಿಯೂ ನೇತಾಡುತ್ತದೆ. ಲಿಂಗಾಂಗ ಸಂಬಂಧವಾಗಲಿಲ್ಲ, ಸಮರಸವಾಗಿ ಬೆರೆಯಲಿಲ್ಲ.

ಅಂಗವಿದೆ, ಅಂಗದಲ್ಲಿ ಅರಿವಿದೆ. ಅರಿವೇ ಲಿಂಗ. ಅಂಗ ಲಿಂಗ ಒಂದರೊಳಗೊಂದು ಬೇರ್ಪಡಿಸದಂತೆ ಸಮರಸವಾಗಿ ಬೆರೆತಿದೆ. ಚಿನ್ನದಲ್ಲಿ ಬಣ್ಣ ಬೆರೆತು ಬೇರ್ಪಡಿಸದಂತೆ! ಅಂಗದಲ್ಲಿ ಮನ ಬೆರೆತಿರುವುದರಿಂದ ಲಿಂಗಾಂಗ ಸಾಮರಸ್ಯ ಮನಕ್ಕೆ ಹೊಳೆಯುತ್ತಿಲ್ಲ. ಮನ ಗುರು ಕಟ್ಟಿದ ಲಿಂಗವನ್ನು ತ್ರಿಕಾಲದಲ್ಲಿ ಪೂಜಿಸಿ ಅಂಗದ ಮೇಲೆ ಹಾಕಿ ಅಂಗಕ್ಕೆ ವಿಭೂತಿ ಬಳಿಯುತ್ತದೆ. ತಾನು ಭಕ್ತ ಲಿಂಗವಂತ ಎಂದು ಮೆರೆಯುತ್ತದೆ.

ಮನ ಬಯಕೆಯಾದ ಕಡೆಗೆ ಅಂಗವನ್ನು ಕರೆದೊಯ್ದು ಭೋಗಿಸಿ ಸುಖಿಸಿ ಅಂಗಕ್ಕೆ ಕೆಟ್ಟ ಪಟ್ಟ ಕಟ್ಟುತ್ತದೆ. ಇಂತಹ ಸಂಸ್ಕಾರವಿಲ್ಲದ ಮನಕ್ಕೆ ಅಂಗದಲ್ಲಿರುವ ಅರಿವಿನ (ಲಿಂಗದ) ಸಂಬಂಧವಾಗ ಬೇಕು.

ಹೀಗೆ ಮನ ಮಹದಲ್ಲಿ ನಿಂದಬಳಿಕ ಅಂದರೆ ಅಂಗದಲ್ಲಿರುವ ಅರಿವೆಂಬ ತತ್ವದಲ್ಲಿ ಮನ ಬೆರೆತ ಬಳಿಕ, ಮನ ಘನ ಮನವಾಗುತ್ತದೆ. ಆ ಅರಿವೇ ತಾನಾಗುತ್ತದೆ. ಮನ ಲಿಂಗ ಸಂಬಂಧಿ ಯಾದ ಬಳಿಕ ಅಂಗಕ್ಕೆ ಪುನಃ ಲಿಂಗ ಬೇಕಾಗಬಹುದೇ ?

□

# ಅಂಗವದು ಅರಿವಿನ ಗೊಂಚಲು

**ಅಂಗೈಯದು ಹೆಂಗಳಾಗಿ, ನೋಡುವ ಕಂಗಳು ಪುರುಷನಾಗಿ**
**ಉಭಯವನರಿದು, ಪ್ರಜಾಪತಿಯಾಗಿ.**
**ಚಿದ್ಘನಶಕ್ತಿ ಯೋನಿಯಲ್ಲಿ ಕೂಡಿ, ಬಿಂದು ವಿಸರ್ಜನವಾಯಿತು.**
**ಅದು ಲೀಯವಾಗಲ್ಪಟ್ಟುದು ಲಿಂಗವಾಯಿತು.**
**ಅದು ಅಂಗೈಯಲ್ಲಿ ಅರಿಕೆ, ಕಂಗಳಿಂಗೆ ಕುರುಹು.**
**ಮಂಗಳಮಯ ಅರ್ಕೇಶ್ವರಲಿಂಗವನರಿವುದಕ್ಕೆ ಇಷ್ಟದಗೊತ್ತೆ.**
**ಅರ್ಕೇಶ್ವರಲಿಂಗವು ತಾನು ತಾನೆ.**

**– ಮಧುವಯ್ಯ ಶರಣರು**

**ಅಂಗೈಯದು ಹೆಂಗಳಾಗಿ :** ಕಣ್ಣು ಕಿವಿ ಮೂಗು ನಾಲಿಗೆ ಚರ್ಮವೆಂಬ ಐದು ಜ್ಞಾನೇಂದ್ರಿಯಗಳಿಂದ ಕೂಡಿದ ಅಂಗ ಅಂಗೈ ಆಗಿದೆ. ಆ ಐದು ಇಂದ್ರಿಯಗಳಲ್ಲಿ ಮನ ಬೆರತ ಕಾರಣ ನೋಡುವ ಲೋಹ ಚಿನ್ನ ಆಭರಣವಾಗಿ ಕಂಡು ಅಂಗವನ್ನು ಮಂಗನಂತೆ ಮಾಡುತ್ತದೆ. ಕೇಳುವ ಶಬ್ದ ವಿಪರೀತವಾಗಿ ಕೇಳಿ ಅಂಗ ಸುಡುವಂತೆ ಮಾಡುತ್ತದೆ. ಹೀಗೆ ಸ್ಪರ್ಶಿಸುವ ಚರ್ಮ, ವಾಸಿಸುವ ಮೂಗು, ರುಚಿಸುವ ನಾಲಿಗೆಯಲ್ಲಿ ಬೆರೆತ ಮನ ಅಂಗಕ್ಕೆ ಸಂಕಟವನ್ನೊಡ್ಡುತ್ತದೆ.

ಐದು ಜ್ಞಾನೇಂದ್ರಿಯಗಳಲ್ಲಿ ಬೆರೆತ ಮನ ಹೆಣ್ಣಾಗಿ ನೋಡುವ ಕಣ್ಣುಗಳು ಪುರುಷನಾಗಿ ಈ ಉಭಯವನು ಅರಿತು ಪ್ರಜಾಪತಿಯಾಗಿ ಚಿದ್ಘನ ಶಕ್ತಿಯೆಂಬ ಗರ್ಭದಲ್ಲಿ ಬಿಂದುವಾಗಿ ವಿಸರ್ಜನೆಯಾಯಿತು. ಹಾಗೆ ಗರ್ಭದಲ್ಲಿ ಕೂಡಿದ ಬಿಂದುವೇ ಅರಿ(ಲಿಂಗ)ವಾಯಿತು.

**ಅದು ಅಂಗೈಯಲ್ಲಿ ಅರಿಕೆ, ಕಂಗಳಿಂಗೆ ಕುರುಹು:**

ಆ ಅರಿವೇ ಅಂಗೈ ಎಂಬ ಅಂಗದ ಐದು ಇಂದ್ರಿಯಗಳ ಮೂಲಕ ಜ್ಞಾನವಾಗಿ ಅರಿವಿಗೆ ಬಂದಿತು. ನೋಡಲು ಕಣ್ಣಿಗೆ ರೂಪವಾಯಿತು.

**ಮಂಗಳಮಯ ಅರ್ಕೇಶ್ವರ ಲಿಂಗವನರಿವುದಕ್ಕೆ ಇಷ್ಟದ ಗೊತ್ತೆ:**

ನಿರೂಪದಿಂದ ಕೂಡಿದ ರೂಪವೇ ಮಂಗಳಮಯ ಅರ್ಕೇಶ್ವರ ಲಿಂಗವು; ತಿಳಿಯಲು ಅರಿವೆಂಬ ಈಶ್ವರನು ತಾನೆ. ತನ್ನಿಷ್ಟದ ಅರಿವಿನ ಗೊಂಚಲು. ಎಲ್ಲಿ ಒತ್ತಿದರೂ ಅರಿವಿನ ರಸ ಬುಗ್ಗೆ.

**ಇಷ್ಟದ ಗೊತ್ತೆ:** ಅರಿವಿನ ಇಚ್ಛೆಯಂತೆ ಅಂಗದ ಐದು ಜ್ಞಾನೇಂದ್ರಿಯಗಳಲ್ಲಿ ಬೆರೆತ ಮನ ಹೆಣ್ಣಾದರೆ ನೋಡುವ ಕಣ್ಣು ಪದಾರ್ಥವನ್ನೆಲ್ಲ ನೋಡಿ ಆನಂದ ಪಡುತ್ತದೆ ; ಪಡೆದು ಸುಖಿಸುವ ಆದೇಶ ಅಂಗಕ್ಕೆ ನೀಡಿ ಸಂಕಟವನ್ನೊಡ್ಡುವುದಿಲ್ಲ. ಕಣ್ಣಿನ ನೋಟದಲ್ಲಿ ಬೆರೆತ ಮನ ಕಣ್ಣಿನ ಬೆಳಕಿನಲ್ಲಿ ಹೆಣ್ಣಾಗಿ ಕೂಡಿ ಪುರುಷ ಸುಖ ಅನುಭವಿಸುತ್ತದೆ. ಅಲ್ಲಿಯೇ ಲೀನವಾಗಿ ಬೆಳಕಾಗುತ್ತದೆ. ಅರಿವಾಗುತ್ತದೆ. ಹೀಗೆ , ಕಿವಿ , ಮೂಗು , ನಾಲಿಗೆ ಹಾಗೂ ಚರ್ಮದ ಜ್ಞಾನದಲ್ಲಿ ಬೆರೆತ ಮನ ಬೇರಾಗದಂತೆ ಅಲ್ಲಿಯೇ ಕೂಡಿ ತನ್ನಿಚ್ಛೆಯ ಅರಿವಿನ ರಸದ ಬುಗ್ಗೆಯಾಗುತ್ತದೆ. ಅರಿವೆಂಬ ಅರ್ಕೇಶ್ವರ ಲಿಂಗ ತಾನೇ ಆಗುತ್ತದೆ ಎನ್ನುತ್ತಾರೆ ಮಧುವಯ್ಯ ಶರಣರು.

□

# ತನು ಬೀಜವಿಲ್ಲದ ಬಾಳೆಯಂತೆ ಬಲು ಮಧುರ

**ವನದ ಬಾಳೆಯ ಗೊನೆಯ ಹೊಯಿದ ಕಳ್ಳನ**
**ಅಡಿವೆಜ್ಜೆಯಲ್ಲಿ ಹೋಗಿ, ಹೆಡಗುಡಿಯ ಕಟ್ಟಿ, ಬಾಧಿಸಿ,**
**ಗೊನೆಯ ತೋರೆಂದಡೆ, ಗೊನೆ ಮನೆಯೊಳಗದೆಯೆಂದ.**
**ಮನೆಯಾಕೆಯ ಕೇಳಿದಡೆ, ಗೊನೆಯ ನಾ ತಿಂದೆ,**
**ಕಳ್ಳನ ಕುಟ್ಟಿ, ಎನ್ನದು ಕೊಯಿದುಕೊಳ್ಳಿ ಎಂದಳು.**
**ಅರ್ಕೇಶ್ವರ ಲಿಂಗವ ಬಲ್ಲಡೆ.**

**- ಮಧುವಯ್ಯ ಶರಣರು**

ತನುವೆಂಬುದೊಂದು ಅರಿವಿನ ಬಾಳೆಯ ವನ. ಎಲ್ಲಿನೋಡಿದರೂ ಫಲಭರಿತ ಬಾಳೆಯೇ. ತನುವೂ ಇದೆ. ಮನವೂ ಇದೆ. ಅರಿವೂ ಇದೆ. ಕಳ್ಳನೂ ಇದ್ದಾನೆ. ಹಾಗೆಯೇ ಬಾಳೆಯ ವನವೂ ಇದೆ. ಗೊನೆಯೂ ಇದೆ. ಮಾಲಕನೂ ಇದ್ದಾನೆ.

ತೋಟದ ಬಾಳೆಗೆ ಯಾವ ಕಳ್ಳನೂ ನುಗ್ಗಲಾರ. ಹಗಲಿರುಳೂ ಮಾಲೀಕ ತೋಟ ಕಾಯುತ್ತಾನೆ. ಇಲ್ಲಿ ಹಾಗಲ್ಲ, ಇದು ವನದ ಬಾಳೆ. ವನದ ಸಂಪತ್ತು ದೊಡ್ಡದು. ಕಳ್ಳನದೇ ಕಾರುಬಾರು. ಮಾಲೀಕನ ದೃಷ್ಟಿ ಬೀಳದಂತೆ ಕದಿಯುವದೇ ಕಳ್ಳನ ಕೆಲಸ.

ಬಾಳೆ ಸುಲಿದು ತಿಂದರೆ ಕಳ್ಳ ಸಿಕ್ಕಿಬೀಳುತ್ತಾನೆ. ಆ ಮಧುರ ಫಲವನುಂಡು ತನ್ನ ವೃತ್ತಿ ಕಳೆದುಕೊಂಡು ಮಾಲೀಕನೇ ತಾನಾಗುತ್ತಾನೆ. ಆದರೆ ಆತ ಬಾಳೆ ತಿನ್ನುವುದಿಲ್ಲ. ಬಾಳೆಯ ಗೊನೆ ಕದಿಯುವ ಚಟ ಅವನಿಗೆ. ಬಾಳೆಯಾದರೊ ಒಂದೇ ಬಾರಿ ಫಲಕೊಡುತ್ತದೆ, ಅರಿವಿನ ಮಧುರತೆಯನ್ನು ಉಣ್ಣದ ತನುವಿನಂತೆ ಗೊನೆ ಕಡಿಸಿಕೊಂಡ ಬಾಳೆ ಬದುಕುವುದಿಲ್ಲ.

ಮಾಲೀಕ ನೀರು ಹಾಕಿ ಬೆಳಸಿ ಆ ಬಾಳೆಯಲ್ಲಿಯೇ ವಾಸಿಸಿದ್ದಾನೆ. ಗಿಡದ ತುಂಬ ಫಲಭರಿತ ಬಾಳೆಗೊನೆ ಬಾಗಿ ನಳನಳಿಸುತ್ತಿದೆ. ಕಳ್ಳನ ವಾಸವೂ ಅಲ್ಲಿಯೇ ಇದೆ. ತಿಳಿದರೆ ಒಂದೊಂದು ರುಚಿಕರವಾದ ಬಾಳೆಯ ಅರಿವಿನ ಫಲವನ್ನು ತಿನ್ನಬಲ್ಲ. ಆದರೆ ಬಾಳೆ ಗೊನೆಯ ಚೆಂಡು ಕಡೆಯುವುದು ಕಳ್ಳನ ಚಟ.

ಮಧುವಯ್ಯ ಶರಣರು ತುಂಬಾ ಜಾಣರು. ಕಳ್ಳನ ಜಾಡು ಹಿಡಿದು ಆತನ ಹೆಜ್ಜೆ ಗುರುತು ಪತ್ತೆ ಹಚ್ಚಿ ಹೆಡಗುಡಿಯ ಕಟ್ಟಿ, ಕಳ್ಳನನ್ನು ಬಾಧಿಸಿ ಬಾಳೆಯ ಗೊನೆ ತೋರಿಸೆಂದು ಹಿಂಸಿಸುತ್ತಾರೆ. ಹಿಂಸೆ ತಾಳದ ಕಳ್ಳ ಗೊನೆ ನನ್ನಲ್ಲಿಲ್ಲ ಮನೆಯೊಳಗಿದೆ ಎಂದು ಹೇಳುತ್ತಾನೆ. ಮಾನೆಯಾಕೆಯನ್ನು ಕೇಳಿದರೆ ಆಕೆ ಗೊನೆಯನ್ನು ನಾನು ತಿಂದೆ, ಕಳ್ಳನನ್ನು ಕುಟ್ಟಿ, ಎನ್ನದು ಕೊಯಿದುಕೊಳ್ಳಿ ಎನ್ನುತ್ತಾಳೆ.

ಗೊನೆ ಕಳೆದುಕೊಂಡ ಬಾಳೆಯ ದಿಂಡು ನೆಲಕ್ಕುರುಳಿ ಪ್ರಾಣ ಬಿಡುತ್ತದೆ. ಅದರ ರುಂಡ ಚೆಂಡಾಡಿದ ಕಳ್ಳ ತಾನೂ ತಿನ್ನದೆ ಮನೆಯಲ್ಲಿಟ್ಟಿದ್ದಾನೆ. ಮನೆಯಾಕೆಯೆಂಬ ಮೃತ್ಯು ದೇವತೆ ಆ ಗೊನೆ ಮೆದ್ದು ಸಾಧ್ಯವಾದರೆ ಆ ಕಳ್ಳನನ್ನು ಕುಟ್ಟಿ ಎನ್ನದುಕೊಯಿದು ಕೊಳ್ಳಿ; ಅರ್ಕೇಶ್ವರ ಲಿಂಗವ ಬಲ್ಲಡೆ ಎಂದು ಮಧುವಯ್ಯನಿಗೆ ಸವಾಲು ಹಾಕಿದ್ದಾಳೆ.

ಮಧುವಯ್ಯ ಬ್ರಾಹ್ಮಣ. ತನ್ನ ಮಗಳನ್ನು ಹರಳಯ್ಯನ ಮಗನಿಗೆ ಕೊಟ್ಟು ಮದುವೆ ಮಾಡಿ

ದ್ದರು.

ಮಧುವಯ್ಯ , ಮಧುವಯ್ಯನ ಮಗಳು, ಹರಳಯ್ಯ ಹರಳಯ್ಯನ ಮಗ ಅರಿವಿಗೆ ಶರಣು ಹೋಗಿ ಶರಣರಾಗಿದ್ದರು. ಬಯಲ ಬೀಜಗಳಾಗಿದ್ದರು. ಅಜ್ಞಾನಿಗಳಿಗೆ ಇದು ತಿಳಿಯಲಿಲ್ಲ, ಸಹಿಸ ಲಾಗಲಿಲ್ಲ, ಆನೆ ಕಾಲಿಗೆ ಕಟ್ಟಿ ಅವರನ್ನು ತುಳಿಸಿದರು. ಆದರೂ ಮಧುವಯ್ಯ ಶರಣರು ದುಃಖಿಸ ಲಿಲ್ಲ. ಮನವೆಂಬ ಕಳ್ಳನನ್ನು ಅರಿವಿನಿಂದ ಕಟ್ಟಿದರು. ತನುವಿನ ಅರಿವಿನ ರುಚಿಯನ್ನು ಆನಂದದಿಂದ ಮೆದ್ದರು. ಅಜ್ಞಾನವೆಂಬ ಮೃತ್ಯುವನ್ನು ಕೊಯಿದು ಅರಿವೆಂಬ ಅರ್ಕೇಶ್ವರ ಲಿಂಗಕ್ಕೆ ಅರ್ಪಿಸಿದರು.

ಅರಿವನ್ನು ಮೆದ್ದು ತನು ಇದ್ದಾಗಲೇ ಬಯಲಾದರು. ಮೃತ್ಯುವನ್ನು ಜಯಿಸಿದರು. ಅರಿವಿನ ಮನೆಯೆಂಬ ತನುವಿದ್ದಾಗಲೇ ಮನೆಯಾಕೆಯೆಂಬ ಮೃತ್ಯುವನ್ನು ಕೊಯಿದು ಕಟ್ಟಿದರು. ಈ ವೃತ್ತಾಂತವನ್ನು ಮಧುವಯ್ಯ ಶರಣರು ತಮ್ಮ ವಚನದಲ್ಲಿ ಬಾಳೆ ಉದಾಹರಣೆ ತೆಗೆದುಕೊಂಡು ಓದುಗರಿಗೆ ಮನದಟ್ಟಾಗುವಂತೆ ಅರಿವಿನ ಸೂತ್ರ ನೀಡಿದ್ದಾರೆ.

ಜಲ ಬಿಂದುವಿನಿಂದಾದ ಬಾಳೆ ನೋಡಲು ಬಲು ಸುಂದರ. ಅದರ ಫಲವೂ ಬಲು ಮಧುರ. ಬಿಂಕ ಬಿನ್ನಾಣವಿಲ್ಲದ ಮಾಗಿದ ಫಲದಿಂದ ಸದಾ ಬಾಗಿದ ಗೊನೆ. ಮೆದ್ದರೆ ಬೀಜವಿಲ್ಲದ ಪ್ರಸಾದ. ದಿಂಬು ಸುಲಿದು ನೋಡಲು ಹೋದರೆ ಇಂಬಿಲ್ಲದಂತಿದೆ. ಜಲಬಿಂದು ಗಿಡವಾಗಿ ಬಾಳೆ ಯಾಗಿ ಮಧುರ ಫಲವಾಗಿ ಬೀಜವಿಲ್ಲದೆ ಬಯಲು ಸೇರಿ ಬಯಲಾಗುತ್ತದೆ.

ಅದರಂತೆಯೇ ಜಲಬಿಂದು ಗರ್ಭಸೇರಿ ತನುವಾಗಿ ಅರಿವಾಗಿ ಮನವಾಗಿ ಅರಿವಿನ ಫಲ ವುಂಡು ಎಲ್ಲೆಡೆಯೂ ಅರಿವಿನ ಪರಿಮಳ ಬೀರಿ ಬಯಲು ಸೇರಬೇಕು. ನೋಡಲು ಹೋದರೆ ಜಲ ಬಿಂದುವು ಬಯಲೇ, ಅರಿವು ಬಯಲೇ, ಮನವೂ ಬಯಲೇ ತನುವು ಬಯಲೇ! ಬಾಳೆಗೆ ಹೇಗೆ ಬೀಜವಿಲ್ಲವೊ ಹಾಗೆಯೇ ತನುವಿಗೂ ಬೀಜವಿಲ್ಲ. ತಿಳಿಯಲು ಹೋದರೆ ತನುಗಳೆಲ್ಲ ಬಯಲ ಬೀಜಗಳೇ. ಅರಿವಾಗಬೇಕಷ್ಟೆ!

□

# ಜಲ ಒಂದೇ ಜಾತಿ ಹಲವು

**ಉದಕವೊಂದರಲ್ಲಿ ತಂದು, ವರ್ಣಭೇದಕ್ಕೆ ಹಲವಾದ ತೆರನಂತೆ,**
**ಆತ್ಮ ನಾನೆಂಬುದ ಮರೆದು, ಸರ್ವರಲ್ಲಿ ಬೆರೆಸುವ ಚಿತ್ತ**
**ಒಂದೋ, ಎರಡೋ ? ನೆಲ ಜಲ ಒಂದಾದಡೆ ಬೆಳೆವ ವೃಕ್ಷ**
**ಹಲವಾದ ತೆರದಂತೆ, ಅರಿವು ಮರವೆಗೊಳಗಾದ**
**ಆತ್ಮನ ತಿಳಿದಲ್ಲಿ, ಬೇರೊಂದೆಡೆಗೆ ತೆರಪಿಲ್ಲ,**
**ಮನ ಸಂದಿತ್ತು ಮಾರೇಶ್ವರಾ.**

**- ಮನಸಂದ ಮಾರಿತಂದೆ ಶರಣರು**

ಜಲಕ್ಕೆ ಜಾತಿ ಮತ ಪಂಥವಿಲ್ಲ. ಜಲಕ್ಕೆ ವಾಸನೆ ಬಣ್ಣ ರುಚಿಯಿಲ್ಲ. ಜಲ ತನ್ನ ಸಮತೋಲ ತಾನೆ ಕಾಯ್ದುಕೊಳ್ಳುತ್ತದೆ. ಜಲಬಿಂದುವಿನಿಂದಲೇ ತನುವಿನ ಜನನ. ಆ ಜಲಬಿಂದುವಿನಿಂದಲೇ ಅಂಗದಲ್ಲಿ ಆನಂದವನ್ನುಂಟು ಮಾಡುವ 68 ಕೋಟಿ ರಕ್ತನಾಳಗಳಿವೆ. ಅಂಗದಲ್ಲಿಯ ಅರಿವು, ಆತ್ಮ, ಸರ್ವ ವಸ್ತುಗಳಲ್ಲಿ ಬೆರೆಸುವ ಚಿತ್ತ ಕೂಡಾ ಆ ಜಲಬಿಂದುವಿನಲ್ಲಿಯೇ ಜನ್ಮ ತಳೆದಿವೆ.

ಜಲದಿಂದಲೇ ನೆಲ. ಜಲ ಕುದ್ದು ಪಾಕವಾಗಿ, ಆ ಪಾಕವೇ ಗಟ್ಟಿಯಾಗಿ ನೆಲವಾಯಿತು, ಕಲ್ಲು ಕಬ್ಬಿಣ ಬೆಳ್ಳಿ ಬಂಗಾರವಾಯಿತು. ಆ ಜಲದಿಂದಲೇ ಗಿಡ ಮರ ಬಳ್ಳಿ ಸಸ್ಯ ವರ್ಗ. ಪಶು ಪ್ರಾಣಿ ಪಕ್ಷಿ ಉರಗ ಜಲವರ್ಗ ಜನ್ಮ ತಳೆಯಿತು.

ಜಲಬಿಂದು ಒಂದೇ ಆದರೂ ಎಷ್ಟೊಂದು ಜಾತಿಗಳು. ತಿಳಿಯುವ ಶಕ್ತಿಯೂ ಅಂಗದಲ್ಲಿದೆ, ಹಾಗೆಯೇ ಮರೆತು ಮಂಗನಂತಾಗುವ ಅಜ್ಞಾನವೂ ಅಂಗದಲ್ಲಿದೆ. ಅಂಗ ಒಂದೇ ಆದರೂ ಹೆಣ್ಣು ಗಂಡು, ಶ್ರೀಮಂತ ಬಡವ, ಜಾತಿ ಮತ ಪಂಥ ಪಂಗಡಗಳು, ವರ್ಣ ಸಂಕರಗಳು, ಸೃಷ್ಠಿಯಾದವು. ಈ ಅಂಗದ ಅರಿವು ಮರೆವೆಗೆ ಒಳಗಾದರೆ ಸಾಕು ಅಂಗದಲ್ಲಿ ಅಜ್ಞಾನದ ಜಲಪ್ರಳಯವೇ ಆಗುತ್ತದೆ.

ಜಲಬಿಂದುವಿನಿಂದಾದ ಜೀವಕುಲವ ನೋಡಿ ಆನಂದಪಡುವ ಶಕ್ತಿಯೂ ಅಂಗದಲ್ಲಿದೆ. ಮರೆವಿಗೆ ಒಳಗಾಗಿ ಜಲಬಿಂದುವಿನಲ್ಲಿಯೇ ಜಾತಿ ಸಂಕರವನ್ನುಂಟು ಮಾಡಿಕೊಂಡು ಜಲಪ್ರಳಯ ಮಾಡಿಕೊಂಡು ವಿಕೃತನಾಗುವ ಅಜ್ಞಾನವೂ ಅಂಗದಲ್ಲಿ ಆವರಿಸಿಕೊಂಡಿದೆ. ಜ್ಞಾನವೂ ತನ್ನದೇ ಅಜ್ಞಾನವೂ ತನ್ನದೆ. ಬೆಳಕಿದ್ದಲ್ಲಿ ಕತ್ತಲಿಗೆ ಅವಕಾಶವಿಲ್ಲ. ಆದರೆ ಅಂಗದಲ್ಲಿ ಬೆಳಕೂ ಇದೆ, ಕತ್ತಲೂ ಇದೆ. ಇವೆರಡೂ ಅಂಗದಲ್ಲಿ ಹಾಸುಂಡು ಮಲಗಿವೆ. ಬೆಳಕು ಕತ್ತಲನ್ನು ತನ್ನ ಗರ್ಭದಲ್ಲಿ ಬಂಧಿಸುತ್ತಿಲ್ಲ, ಕತ್ತಲು ಬೆಳಕಿನ ಗರ್ಭದಲ್ಲಿ ಹೊಕ್ಕು ಬೆಳಕಾಗುತ್ತಿಲ್ಲ. ಸೂರ್ಯನ ಬೆಳಕಿಗೆ ಅರಿವಿಲ್ಲ ಬೆಳಗುತ್ತದೆ. ಆ ಬೆಳಕಿನಿಂದಾಗುವ ಕತ್ತಲಿಗೂ ಅರಿವಿಲ್ಲ ಬೆಳಕನ್ನು ಆವರಿಸುತ್ತದೆ.

ಅಂಗದ ಬೆಳಕಿಗೆ ಅರಿವಿದೆ. ಈ ಬೆಳಕಿನಿಂದುಂಟಾಗುವ (ಮನ) ಕತ್ತಲಿಗೂ ಅರಿವಿದೆ. ಉದಕ ಒಂದರಲ್ಲಿ ಮನ ತಂದುದಕ್ಕಾಗಿ ಆ ಮನದಿಂದ ವರ್ಣಭೇದ ಜಾತಿ ಸಂಕರ ಉಂಟಾಗಿ ನಾನಾ ಭೇದಗಳು ನಿರ್ಮಾಣವಾದವು. ಉದಕ, ಆತ್ಮ ಅರಿವು ನಾನೇ ಅನ್ನುವುದನ್ನು ಮರೆತಿದೆ. ಸರ್ವ ವಸ್ತುಗಳಲ್ಲಿ ಚಿತ್ತ ನೆಟ್ಟು ಆ ಚಿತ್ತ ಕೂಡಾ ಒಂದೇ ಅನ್ನುವುದನ್ನು ಮರೆತು ವಸ್ತುಗಳನ್ನು ಬೇಡುತ್ತಲಿದೆ. ಅರಿವು ಮರೆವೆಗೆ ಒಳಗಾದ ಆತ್ಮವನ್ನು ತಿಳಿದಲ್ಲಿ ಉದಕ ಒಂದೇ, ಉದಕದ ಅರಿವು ಕೂಡಾ ಒಂದೇ.

ಅರಿವನ್ನು ತಿಳಿದು ಅದರಲ್ಲಿ ಲೀನವಾಗುವ ಮನ ಕೂಡಾ ಒಂದೇ. ಮನ ಘನಮನವಾಗಿ ಮನಕ್ಕೆ ಮಾರಿಯಾಗುವ ತಜ್ಞ ತಾನೇ ಆಗುತ್ತಾನೆ. ಮಾರೇಶ್ವರನೆಂಬ ಲಿಂಗ ತಾನೇ ಆಗುತ್ತಾನೆ ಎಂದಿದ್ದಾರೆ ಮನಸಂದ ಮಾರಿತಂದೆ ಶರಣರು.

□

**ಅರಿವಿನ ಪರಿಮಳ :**

- □ ಜಲಬಿಂದು ಒಂದೇ ಆದರೂ ಎಷ್ಟೊಂದು ಜಾತಿಗಳು. ತಿಳಿಯುವ ಶಕ್ತಿಯೂ ಅಂಗದಲ್ಲಿದೆ, ಹಾಗೆಯೇ ಮರೆತು ಮಂಗನಂತಾಗುವ ಅಜ್ಞಾನವೂ ಅಂಗದಲ್ಲಿದೆ. ಅಂಗ ಒಂದೇ ಆದರೂ ಹೆಣ್ಣು ಗಂಡು, ಶ್ರೀಮಂತ ಬಡವ, ಜಾತಿ ಮತ ಪಂಥ ಪಂಗಡಗಳು, ವರ್ಣ ಸಂಕರಗಳು, ಸೃಷ್ಟಿಯಾದವು. ಈ ಅಂಗದ ಅರಿವು ಮರೆವೆಗೆ ಒಳಗಾದರೆ ಸಾಕು ಅಂಗದಲ್ಲಿ ಅಜ್ಞಾನದ ಜಲಪ್ರಳಯವೇ ಆಗುತ್ತದೆ.
- □ ಜ್ಞಾನವೂ ತನ್ನದೇ ಅಜ್ಞಾನವೂ ತನ್ನದೆ. ಬೆಳಕಿದ್ದಲ್ಲಿ ಕತ್ತಲಿಗೆ ಅವಕಾಶವಿಲ್ಲ. ಆದರೆ ಅಂಗದಲ್ಲಿ ಬೆಳಕೂ ಇದೆ, ಕತ್ತಲೂ ಇದೆ. ಇವೆರಡೂ ಅಂಗದಲ್ಲಿ ಹಾಸುಂಡು ಮಲಗಿವೆ. ಬೆಳಕು ಕತ್ತಲನ್ನು ತನ್ನ ಗರ್ಭದಲ್ಲಿ ಬಂಧಿಸುತ್ತಿಲ್ಲ, ಕತ್ತಲು ಬೆಳಕಿನ ಗರ್ಭದಲ್ಲಿ ಹೊಕ್ಕು ಬೆಳಕಾಗುತ್ತಿಲ್ಲ.
- □ ಸೂರ್ಯನ ಬೆಳಕಿಗೆ ಅರಿವಿಲ್ಲ ಬೆಳಗುತ್ತದೆ. ಆ ಬೆಳಕಿನಿಂದಾಗುವ ಕತ್ತಲಿಗೂ ಅರಿ ವಿಲ್ಲ ಬೆಳಕನ್ನು ಆವರಿಸುತ್ತದೆ.

# ಬಿಂದುವೊಂದು ಮುತ್ತುಗಳು ಮೂರು

**ಒಂದು ಚಿಪ್ಪಿನಲ್ಲಿ ಮೂರು ಮುತ್ತು ಹುಟ್ಟಿದವು ;**
**ಒಂದು ಕಟ್ಟಾಣಿ, ಒಂದು ಸುಪ್ಪಾಣಿ,**
**ಒಂದು ಮಣಿ ಉದಕವಿಲ್ಲದ ಸೂತೆ.**
**ಬಿದ್ದ ಉದಕ ಒಂದೆ, ತಾಳಿದ ಚಿಪ್ಪು ಒಂದೆ.**
**ಚಿಪ್ಪಿನ ಹೊರೆಯೋ, ಉದಕದ ತೆರೆಯೋ, ಮುತ್ತಿನ ಗುಣವೋ ?**
**ಇದರ ಲಕ್ಷಣದ ಭೇದವೋ ಇದು ?**
**ಚಿತ್ತದ ಜ್ಞಾನ ಕರ್ತುವೆ ಹೇಳಾ ;**
**ಗುಡಿಯ ಗುಹೆಯ ಗುಮ್ಮಟನೊಡೆಯ ಅಗಮ್ಮೇಶ್ವರ ಲಿಂಗ.**

**- ಮನುಮುನಿ ಗುಮ್ಮಟದೇವ ಶರಣರು**

**ಒಂದು ಚಿಪ್ಪಿನಲ್ಲಿ ಮೂರು ಮುತ್ತು ಹುಟ್ಟಿದವು :**

ಮುತ್ತು ಮಾಡುವ ಹಂಬಲವುಳ್ಳ ತನುವೆಂಬ ಚಿಪ್ಪಿನಲ್ಲಿ ಮೂರು ಮುತ್ತು ಹುಟ್ಟಿದವು.

ಒಂದು ಕಟ್ಟಾಣಿ ಎಂಬ ಬಹು ಬೆಲೆಯುಳ್ಳ ಮುತ್ತು, ಮತ್ತೊಂದು ಶ್ರೇಷ್ಠ ಬಿನ್ನಾಣದ ಸುಪ್ಪಾಣಿ ಎಂಬ ಮುತ್ತು. ಮಗದೊಂದು ಉದಕವಿಲ್ಲದ ಸೂತೆ ಎಂಬ ಬೆಳಗುವ ಮುತ್ತು.

ತನುವೆಂಬ ಒಂದೇ ಚಿಪ್ಪಿನ ಗರ್ಭದಲ್ಲಿ ತಂದೆಯ ಒಂದೇ ಉದಕದ ಬಿಂದು ಬಿದ್ದು ಜನ್ಮ ತಾಳಿದವು ಮೂರು ಮುತ್ತುಗಳು. ಇವುಗಳ ಚಿಪ್ಪು ಕೂಡಾ ಒಂದೇ. ಅದೇ ಕಟ್ಟಾಣಿ ಎಂಬ ನಾಜೂಕಿನ ಬಹು ಬೆಲೆಯುಳ್ಳ ಸ್ಥೂಲ ತನುವೆಂಬ ಮುತ್ತು. ಮತ್ತೊಂದು ಸೂಕ್ಷ್ಮ ತನುವೆಂಬ ವೈಯ್ಯಾರದ ಸುಪ್ಪಾಣಿ ಎಂಬ ಮುತ್ತು, ಮಗದೊಂದು ಉದಕದ ಬಿಂದುವಿನ ಸೋಂಕಿಲ್ಲದ, ಕಾರಣ ತನುವೆಂಬ ಬೆಳಗಿಂಗೆ ಬೆಳಗಾಗಿ ಬೆಳಗುವ ಬಹು ಬೆಲೆಯ ಸೂತೆ ಮುತ್ತು.

ತನುವಿನ ಗರ್ಭ ಒಂದೇ, ಪ್ರವೇಶಿಸಿದ ಬಿಂದುವೊಂದೇ, ಹೊರಬಂದ ತನುವೊಂದೇ, ಅರಿಯಲು ಹೋದರೆ ಆ ತನುವಿನಲ್ಲಿ ಇನ್ನೆರಡು ಅಮೂಲ್ಯ ಮುತ್ತುಗಳು ! ಒಂದು ಕಾಣುತ್ತದೆ ; ಇನ್ನೆರಡು ಕಾಣುವುದಿಲ್ಲ. ಅದಕ್ಕೆ ಅರಿವಿನ ಅಂಜನ ಹಾಕಿ ನೋಡಬೇಕು.

ಸ್ವಾತಿ ಎಂಬ ಜಲಬಿಂದು ಚಿಪ್ಪಿನಲ್ಲಿ ಬಿದ್ದು ಹುಟ್ಟಿದ ಮುತ್ತು ಮತ್ತೆ ಜಲವಾಗುವುದಿಲ್ಲ. ಬೆಳಗುವುದೊಂದೇ ಮುತ್ತಿನ ಕೆಲಸ ! ಅಂತೆಯೇ ಜಲಬಿಂದು ಗರ್ಭ ಸೇರಿ ಗಟ್ಟಿಯಾಗಿ ಕಟ್ಟಾಣಿ ಎಂಬ ತನುವಿನ ಮುತ್ತು ಹೊರಬಂದು ಮಿರಮಿರನೆ ಮಿಂಚುತ್ತಿದೆ.

ಹೊಳೆಯುವ ಕಣ್ಣುಗಳು, ಮೂಗಿನ ಹೊಳ್ಳೆಗಳು, ತುಟಿಯ ಎಸಳುಗಳು, ಅರಳಿದ ಕಿವಿಗಳು, ನಾಲಗೆಯ ಸ್ವಾದದಿಂದ, ಹೊಳೆಯುವ ಚರ್ಮದ ಕವಚದಿಂದ ಕಟ್ಟಾಣಿ ಎಂಬ ತನುವಿನ ಮುತ್ತು ಬೆಳಗುತ್ತಲಿದೆ.

ಬೆಳೆಯುತ್ತ ಬೆಳೆಯುತ್ತಾ ಕಟ್ಟಾಣಿಯ ಬೆಳಕಿಗೆ ಸುಪ್ಪಾಣಿಯ ಅಜ್ಞಾನದ ಸೆರಗು ಮುಸುಕಿ ಬೆಳಕು ಕಾಣದಂತಾಯಿತು. ಸೆರಗಿನ ಭಾರಕ್ಕೆ ಸೂತೆಯ ಬೆಳಕೂ ಹೊರಸೂಸದಂತಾಯಿತು !

ಸೂತೆ ಎನ್ನುವಾತ ಅರಿವಿನ ಚಕ್ರವರ್ತಿ, ಕಟ್ಟಾಣಿಯ ಮೂಲಕ ಬೆಳಕು ಚೆಲ್ಲುತ್ತಾನೆ.

ಸುಪ್ಪಾಣಿಯೆಂಬ ಹಾದರಗಿತ್ತಿ ತನ್ನ ಹಾದರದ ಸೆರಗನ್ನು ಕಟ್ಟಾಣಿ ಎಂಬ ತನುವಿನ ಮೇಲೆ ಹಾಕಿದ್ದಾಳೆ. ಮನವೆಂಬ ಸುಪ್ಪಾಣಿ ಕಟ್ಟಾಣಿ ಎಂಬ ತನುವಿನ ಮೂಲಕ ಹಾದರ ಮಾಡುತ್ತಾಳೆ. ಮನ ವೆಂಬ ಸುಪ್ಪಾಣಿ ಸೂಳೆ. ತನುವೆಂಬ ಕಟ್ಟಾಣಿ ನಿರಪರಾಧಿ. ಸೂತೆಯೆಂಬ ಬೆಳಕಿನ ರಾಜ ತೆಪ್ಪಗಿದ್ದಾನೆ.

ಚಿಪ್ಪು ಒಂದೇ, ಚಿಪ್ಪಿಗೆ ಸೇರಿದ ಬಿಂದು ಒಂದೇ, ಜನಿಸಿದ ಚಿಪ್ಪು ಒಂದೇ, ತಾಳಿದ ಅವತಾರ ಮಾತ್ರ ಮೂರು ! ಚಿಪ್ಪಿನ ಹೊರೆಯೋ, ಉದಕದ ತೆರೆಯೋ, ಮುತ್ತಿನ ಗುಣವೋ, ಚಿತ್ತದ ಲಕ್ಷಣದ ಭೇದವೋ ಎಂಬುದನ್ನು ತಿಳಿಯಬೇಕಿದೆ. ಸುಪ್ಪಾಣಿ ಮನವೆಂಬ ಹಾದರಗಿತ್ತಿ ಸೂತೆ ಎಂಬ ಬೆಳಕಿನ ರಾಜನೊಂದಿಗೆ ಬೆರೆಯಬೇಕಿದೆ. ತನುವೆಂಬ ಗುಡಿಯ ಗುಹೆಯ ಗುಮ್ಮಟವನು ಭೇದಿಸಿ ಅಗಮ್ಯ ಲಿಂಗವನು ಅರಿಯಬೇಕಿದೆ ಎನ್ನುತ್ತಾರೆ ಮನುಮುನಿ ಗುಮ್ಮಟದೇವ ಶರಣರು.

□

---

**ಅರಿವಿನ ಪರಿಮಳ :**

- □ ತನುವಿನ ಗರ್ಭ ಒಂದೇ, ಪ್ರವೇಶಿಸಿದ ಬಿಂದುವೊಂದೇ, ಹೊರಬಂದ ತನುವೊಂದೇ, ಅರಿಯಲು ಹೋದರೆ ಆ ತನುವಿನಲ್ಲಿ ಇನ್ನೆರಡು ಅಮೂಲ್ಯ ಮುತ್ತುಗಳು ! ಒಂದು ಕಾಣುತ್ತದೆ ; ಇನ್ನೆರಡು ಕಾಣುವುದಿಲ್ಲ. ಅದಕ್ಕೆ ಅರಿವಿನ ಅಂಜನ ಹಾಕಿ ನೋಡಬೇಕು.
- □ ಸ್ವಾತಿ ಎಂಬ ಜಲಬಿಂದು ಚಿಪ್ಪಿನಲ್ಲಿ ಬಿದ್ದು ಹುಟ್ಟಿದ ಮುತ್ತು ಮತ್ತೆ ಜಲವಾಗುವುದಿಲ್ಲ. ಬೆಳಗುವುದೊಂದೇ ಮುತ್ತಿನ ಕೆಲಸ ! ಅಂತೆಯೇ ಜಲಬಿಂದು ಗರ್ಭ ಸೇರಿ ಗಟ್ಟಿಯಾಗಿ ಕಟ್ಟಾಣಿ ಎಂಬ ತನುವಿನ ಮುತ್ತು ಹೊರಬಂದು ಮಿರಮಿರನೆ ಮಿಂಚುತ್ತಿದೆ.
- □ ಹೊಳೆಯುವ ಕಣ್ಣುಗಳು, ಮೂಗಿನ ಹೊಳ್ಳೆಗಳು, ತುಟಿಯ ಎಸಳುಗಳು, ಅರಳಿದ ಕಿವಿಗಳು, ನಾಲಗೆಯ ಸ್ವಾದದಿಂದ, ಹೊಳೆಯುವ ಚರ್ಮದ ಕವಚದಿಂದ ಕಟ್ಟಾಣಿ ಎಂಬ ತನುವಿನ ಮುತ್ತು ಬೆಳಗುತ್ತಲಿದೆ.
- □ ಬೆಳೆಯುತ್ತ ಬೆಳೆಯುತ್ತಾ ಕಟ್ಟಾಣಿಯ ಬೆಳಕಿಗೆ ಸುಪ್ಪಾಣಿಯ ಅಜ್ಞಾನದ ಸೆರಗು ಮುಸುಕಿ ಬೆಳಕು ಕಾಣದಂತಾಯಿತು. ಸೆರಗಿನ ಭಾರಕ್ಕೆ ಸೂತೆಯ ಬೆಳಕೂ ಹೊರಸೂಸದಂತಾಯಿತು !
- □ ಮನವೆಂಬ ಸುಪ್ಪಾಣಿ ಸೂಳೆ. ತನುವೆಂಬ ಕಟ್ಟಾಣಿ ನಿರಪರಾಧಿ. ಸೂತೆಯೆಂಬ ಬೆಳಕಿನ ರಾಜ ತೆಪ್ಪಗಿದ್ದಾನೆ.

# ಗುರು ಲಿಂಗ ಜಂಗಮನನು ಕೊಂದು ತಿಂದ ಭಕ್ತ

**ಗುರು ಲಿಂಗ ಜಂಗಮಕ್ಕೆ ದಾಸೋಹವ ಮಾಡುವ ಭಕ್ತನ ಪರಿಯಾಯವ**
**ನೋಡಿರಯ್ಯಾ. ಶ್ರೀ ಗುರು ಶಿಷ್ಯಂಗೆ ಅನುಗ್ರಹವ ಮಾಡಲೊಡನೆ,**
**ಆ ಶಿಷ್ಯ ಆ ಗುರುವ ಕೊಂದು ತಿಂದ ನೋಡಿರಯ್ಯಾ.**
**ಲಿಂಗ ಬಂದು ಪೂಜೆಯ ಮಾಡಿಸಿಕೊಂಡು ಹೋದೆಹೆನೆಂದು ಹೋದಡೆ,**
**ಆ ಭಕ್ತ ಆ ಲಿಂಗವ ನುಂಗಿದ ಪರಿಯ ನೋಡಿರಯ್ಯ.**
**ಜಂಗಮ ಬಂದು ಲಿಂಗಾರ್ಚನೆಯ ಮಾಡಿಹೆನೆಂದು ಮನೆಗೆ ಬಂದಡೆ,**
**ಆ ಭಕ್ತ ಆ ಜಂಗಮವ ಕೊಂದು ತಿಂದ**
**ಪರಿಯ ನೋಡಿರಯ್ಯಾ. ಇಂತೀ ಮೂವರನ್ನು ಕೊಂದು ತಿಂಬವನ**
**ಭಕ್ತನೆಂದೆಂಬೆನೆ ಅಯ್ಯಾ ? ಅಲ್ಲ ಅಲ್ಲ ಆತ ಅನಾಚಾರಿ, ವ್ರತಗೇಡಿ,**
**ದುರಾಚಾರಿ. ಇಂತೀ ದುರಾಚಾರವ ನುಡಿಯಲಾಗದು.**
**ಆತ ದೇವ ಲೋಕಕ್ಕೆಯೂ ಸಲ್ಲ. ಆವ ಲೋಕಕ್ಕೆಯೂ ಸಲ್ಲ. ಇಂತಪ್ಪ ಪಂಚಮಹಾ**
**ಪಾತಕನ ಭಕ್ತನೆಂದೆನಗೆ ತೋರದಿರಾ. ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ**
**ಪ್ರಭುವೇ ಶಾಂತ ಚೆನ್ನ ಮಲ್ಲಿಕಾರ್ಜುನ ದೇವಯ್ಯಾ,**
**ಇಂತಪ್ಪ ಭಕ್ತನ ಪರಿಯ, ನೀವೇ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯಾ,**
**ನಿಮ್ಮ ಧರ್ಮ ನಿಮ್ಮ ಧರ್ಮ ನಿಮ್ಮ ಧರ್ಮ.**

**-ಮರುಳ ಶಂಕರ ದೇವರು**

ಮರುಳ ಶಂಕರದೇವರು ಮಹಾಜ್ಞಾನಿಗಳು. ಆ ಜ್ಞಾನವನ್ನು ತಮ್ಮ ತನುವಿನಲ್ಲಿಯೇ ಪಡೆದು, ಹೇಗೆ ಪಡೆಯಬೇಕೆಂಬುದನ್ನು ಓದುಗರಿಗೆ ಸೂತ್ರದ ಮೂಲಕ ವಿವರಿಸಿದ್ದಾರೆ.

ಅನುಗ್ರಹ ಮಾಡಲು ಬಂದ ಶ್ರೀಗುರುವನ್ನೇ ಶಿಷ್ಯ ಕೊಂದು ತಿಂದ.

ಪೂಜೆ ಮಾಡಿಸಿಕೊಂಡು ಹೋಗಲು ಬಂದ ಲಿಂಗವನ್ನೇ ನುಂಗಿದ ಭಕ್ತ.

ಲಿಂಗಾರ್ಚನೆಗೆಂದು ಮನೆಗೆ ಬಂದ ಜಂಗಮನನ್ನೇ ಕೊಂದು ತಿಂದ ಭಕ್ತ.

ಹೀಗೆ ಮೂವರನ್ನು ಕೊಂದು ತಿಂದವನನ್ನು ಭಕ್ತನೆನ್ನಲು ಸಾಧ್ಯವೇ? ಅಲ್ಲ ಅಲ್ಲ ಆತ ಅನಾಚಾರಿ, ವ್ರತಗೇಡಿ, ದುರಾಚಾರಿ, ಇಂತೀ ದುರಾಚಾರವ ನುಡಿಯಲಾಗದು. ಆತ ದೇವಲೋಕಕ್ಕೆ ಸಲ್ಲ, ಮತ್ತಾವ ಲೋಕಕ್ಕೂ ಸಲ್ಲ ಎನ್ನುವ ಲೋಕದ ಮರುಳ ಮಾತನ್ನು ಮರುಳ ಶಂಕರರು ಅರಿವಿನ ಮೂಲಕ ಲೋಕಕ್ಕೆ ಪರಿಚಯಿಸಿದ್ದಾರೆ.

**ಶ್ರೀಗುರುವನು ಕೊಂದು ತಿಂದ ಶಿಷ್ಯ :**

ತನುವಿನ ಮನವೇ ಶಿಷ್ಯ. ತನುವಿನ ಅರಿವೇ ಶ್ರೀಗುರು. ತನುವಿನ ಮನವೆಂಬ ಶಿಷ್ಯ ತನುವಿನ ಅರಿವೆಂಬ ಶ್ರೀಗುರುವನ್ನು ತಿಂದು ಆ ಶ್ರೀಗುರುವೇ ತಾನಾದ. ಆತನೇ ಗುರುವನ್ನು ಕೊಂದು ತಿಂದ ಶಿಷ್ಯ.

**ಪೂಜೆಗೆ ಬಂದ ಲಿಂಗವನೇ ನುಂಗಿದ ಭಕ್ತ :**

ಅಂಗದ ಕಣ ಕಣದಲ್ಲಿ ಲಿಂಗವೆಂಬ ಅರಿವು ಸಮರಸವಾಗಿ ಬೆರೆತು ಲಿಂಗಾಂಗವಾಗಿದೆ. ಮನವೆಂಬ ಭಕ್ತ ಅರಿವೆಂಬ ಲಿಂಗವನು ನುಂಗಿ ಆ ಲಿಂಗ ತಾನಾದವನೇ ಪೂಜೆಗೆ ಬಂದ ಲಿಂಗವನೇ ನುಂಗಿದ ಭಕ್ತ.

**ಮನೆಗೆ ಬಂದ ಜಂಗಮನನ್ನೇ ಕೊಂದು ತಿಂದ ಭಕ್ತ :**

ಅಂಗದಲ್ಲಿ ಅರಿವಿದೆ, ಮನವಿದೆ. ಅಂಗ ಎನ್ನುವುದು ಅರಿವು ಮತ್ತು ಮನದ ಉಪಕರಣ. ಆ ಮನವೇ ಅರಿವಿಗೆ ಶಿಷ್ಯನಾಯಿತು. ಅರಿವು ತಿಳಿದರೆ ಶಿಷ್ಯ ಗುರುವಾಗುತ್ತಾನೆ. ಅರಿವಿನ ಬಗ್ಗೆ ಉಪನ್ಯಾಸ ನೀಡುತ್ತಾನೆ. ಆಚರಣೆಯಲ್ಲಿ ತರುವುದು ಸಾಧ್ಯವಾಗುವುದಿಲ್ಲ. ಆ ಭಕ್ತನೇ ಜಂಗಮನಾಗಿ ಅರಿವಿನ ಆಚರಣೆಯಲ್ಲಿ ತೊಡಗುತ್ತಾನೆ. ಆ ಭಕ್ತನೇ ಜಂಗಮನನ್ನು ಕೊಂದು ತಿಂದು ತಾನೇ ಜಂಗಮನಾದವನು.

ತೋರಿಕೆಯ ಗುರುವನು, ತೋರಿಕೆಯ ಲಿಂಗವನು, ವೇಷದ ಜಂಗಮನನು ಪೂಜಿಸದವನು ಲೋಕದ ದೃಷ್ಟಿಯಲ್ಲಿ ಅನಾಚಾರಿ, ವ್ರತಗೇಡಿ, ದುರಾಚಾರಿಯಾಗುತ್ತಾನೆ. ಆತ ದೇವಲೋಕಕ್ಕೆ ಸಲ್ಲದೆ ಲೋಕದ ಜನರಿಗೆ ಸಲ್ಲದೇ ಮತ್ಯಾವ ಲೋಕಕ್ಕೆ ಸಲ್ಲದೆ ಮಹಾ ಮಾನವನಾಗಿ, ಮಹಾನುಭಾವಿಯಾಗಿ, ಮಹಾಜ್ಞಾನಿಯಾಗಿ, ಅರಿವಿಗೆ ಶರಣು ಹೋಗಿ ಶರಣನಾಗಿ ಉಳಿಯುತ್ತಾನೆ.

**ಇಂತಪ್ಪ ಪಂಚ ಮಹಾಪಾತಕನನ್ನು ಭಕ್ತನೆಂದು ಎನಗೆ ತೋರದಿರಾ :**

ಗುರುದ್ರೋಹ, ಲಿಂಗದ್ರೋಹ, ಜಂಗಮದ್ರೋಹ, ಆಚಾರದ್ರೋಹ, ಪ್ರಸಾದ ದ್ರೋಹ ಇವು ಪಂಚ ಮಹಾಪಾತಕಗಳು.

**ಗುರುದ್ರೋಹಿ :** ತನು ಮನದ ಉಪಕರಣ, ಅರಿವು ತನುವಿನ ಆಭರಣ. ತನುವಿನ ಅರಿವೇ ಶ್ರೀಗುರು. ತನುವಿನ ಮನವೇ ಶಿಷ್ಯ. ಶ್ರೀಗುರುವೆಂಬ ಅರಿವನ್ನು ಬಳಕೆ ಮಾಡಿಕೊಳ್ಳದೆ ಅನಾಚಾರದಲ್ಲಿದ್ದ ಮನವೆಂಬ ಶಿಷ್ಯನೇ ಗುರುದ್ರೋಹಿ.

**ಲಿಂಗದ್ರೋಹಿ :** ಅಂಗದ ಕಣಕಣದಲ್ಲಿ ಲಿಂಗವೆಂಬ ಅರಿವು ಸಮರಸವಾಗಿ ಬೆರೆತಿದೆ. ಆ ಲಿಂಗಕ್ಕೆ ಯಾವ ಪುಸ್ತಕಗಳೂ ಬೋಧಿಸಲರಿಯವು. ಎಲ್ಲ ಪುಸ್ತಕಗಳ ಜನನವೂ ಅರಿವಿನಿಂದಲೇ .. ! ಅಂತಹ ಅರಿವೆಂಬ ಲಿಂಗವನ್ನು ಪೂಜಿಸಿ ಶರಣು ಹೋಗಿ ಆ ಲಿಂಗವೇ ತಾನಾಗದ ಮನ ಲಿಂಗದ್ರೋಹಿ.

**ಜಂಗಮದ್ರೋಹಿ :** ಅಂಗದಲ್ಲಿ ಅರಿವಿದೆ. ಆ ಅರಿವು ತಿಳಿದು ಆಚರಿಸಲರಿಯದ ಮನವೇ ಜಂಗಮದ್ರೋಹಿ.

**ಆಚಾರ ದ್ರೋಹಿ :** ಅರಿವು ಹೇಳಿದ ಆಚಾರದಲ್ಲಿ ಭಾಗಿಯಾಗದ ಮನವೇ ಆಚಾರದ್ರೋಹಿ.

**ಪ್ರಸಾದ ದ್ರೋಹಿ :** ಕಿವಿಗೆ ಬಡಿದ ಶಬ್ದ, ಚರ್ಮಕ್ಕೆ ತಾಗಿದ ಸ್ಪರ್ಶ, ದೃಶ್ಯಕ್ಕೆ ಗುರಿಯಾದ ರೂಪ, ನಾಲಿಗೆ ರುಚಿಸಿದ ಪದಾರ್ಥ ತನುವಿನಲ್ಲಿ ಪ್ರಸಾದವಾಗಿ ಜೀರ್ಣವಾಗದೆ ಸಂಕಟವನ್ನುಂಟು ಮಾಡುವ ಮನವೇ ಪ್ರಸಾದ ದ್ರೋಹಿ.

ಇಂತಪ್ಪ ಪಂಚ ಮಹಪಾತಕನನ್ನು ಭಕ್ತನೆಂದು ಎನಗೆ ತೋರದಿರಾ ಇಂತಹ ಭಕ್ತನ ಪರಿ ನೀವೇ ಬಲ್ಲಿರಿ. ನಾನೆತ್ತ ಬಲ್ಲೆನಯ್ಯಾ ನಿಮ್ಮ ಧರ್ಮ ನಿಮ್ಮ ಧರ್ಮ ನಿಮ್ಮ ಧರ್ಮ ಎಂದಿದ್ದಾರೆ ಮರುಳ ಶಂಕರರು.

□

# ಆಲಿ ಆಲಯದಲ್ಲಿ ಲೀನಗೊಂಡ ಆನಂದ

**ಆಲಿ ಆಲಯದಲ್ಲಿ ಕರಿಗೊಳಲು,**
**ಆಲಿಸುವ ಶ್ರವಣವು ಮೇಲಿಪ್ಪ ಆಕಾಶವನಡರಲು,**
**ಉಲುಹು ನಿರ್ಭೂತ ಚಿತ್ತ ಸಮಾಧಾನವನೆಯ್ದಲು,**
**ಕಾಲ ಕರ್ಮ ಭವಂಗಳ ಗೆಲುವುದಿದೇನು ಸೋಜಿಗವು ಹೇಳಾ,**
**ರೇವಣ್ಣ ಪ್ರಭುವೆ.**

**-ಮರುಳ ಸಿದ್ದೇಶ್ವರ ಶರಣರು**

ಮರುಳ ಸಿದ್ದೇಶ್ವರ ಶರಣರ ಒಂದೇ ಒಂದು ವಚನ ಮಾತ್ರ ದೊರೆತಿದೆ. ಅದು ಎಂಟನೇ ಕಟ್ಟಿನಲ್ಲಿದೆ. ಕಣ್ಣು ಕಿವಿ ಆಕಾಶ ಉದಾಹರಿಸಿ ತನುವಿನ ಸಂಕಟ ಗೆಲ್ಲುವ ಬ್ರಹ್ಮ ಸುಖವನ್ನು ಶರಣರು ಓದುಗರಿಗೆ ಉಣಬಡಿಸಿದ್ದಾರೆ.

ಕಣ್ಣುಗಳು ಎರಡಿದ್ದರೂ ಭ್ರಮಾಧೀನ ಕಣ್ಣುಗಳು; ವಸ್ತುವಿನಲ್ಲಿ ಇಲ್ಲದ ವಸ್ತು ಕಾಣುವ ಅಜ್ಞಾನದ ಕಣ್ಣುಗಳು. ಕಣ್ಣಿನಲ್ಲಿ ನೆಟ್ಟ ಗಾಯವನು ಯಾರಿಗೂ ತೋರಲು ಬರುವುದಿಲ್ಲ. ಅದರ ಸೋಂಕು ಮನಕೆ ಮುಟ್ಟಿ ಸುಖ ದುಃಖಗಳ ಅಜ್ಞಾನದ ಮೂಟೆಯೇ ನಿರ್ಮಾಣವಾಗುತ್ತದೆ. ನೆನಪಾದಂತೆಲ್ಲ ತನು ನರಕ ಯಾತನೆ ಅನುಭವಿಸುತ್ತದೆ.

'' ಕಣ್ಣೊಂದರಲ್ಲಿ ಮುಕ್ಕಣ್ಣನ ಬಣ್ಣವಡಗಿಹುದು. ಆ ಬಣ್ಣದಲ್ಲಿ ಚಿದ್ಬಣ್ಣ ಚಿತ್ರಗಳಾದವು. ಆ ಚಿತ್ರಗಳಿರವ ಚೆನ್ನಬಸವಣ್ಣನೇ ಬಲ್ಲನಯ್ಯಾ, ಕಪಿಲಸಿದ್ಧ ಮಲ್ಲಿಕಾರ್ಜುನಾ.'' ''ಎಲ್ಲರಿಗೆರಡು ಕಣ್ಣೆಂಬುದ ಲೋಕವೆಲ್ಲ ಬಲ್ಲದು, ಎನಗೆ ಮೂರು ಕಣ್ಣೆಂಬುದು ಲೋಕವೆಲ್ಲ ಬಲ್ಲದು. ಎರಡು ಕಣ್ಣಿನವನಲ್ಲ, ಮೂರು ಕಣ್ಣಿನವನಲ್ಲ, ಒಂದೇ ಕಣ್ಣು ನೋಡಾ, ಅಲ್ಲಮ ಕಪಿಲಸಿದ್ಧ ಮಲ್ಲಿಕಾರ್ಜುನಾ'' ಎಂದು ಸಿದ್ಧರಾಮ ಶರಣರು ತಮ್ಮ ಆಲಿ ಆಲಯದಲ್ಲಿ ನಿಂತು ಕರಿಗೊಂಡ ಚಿದ್ಘನದ ಕಣ್ಣಿನ ಬಗ್ಗೆ ಹೇಳಿದ್ದಾರೆ.

ತನುವಿನ ಆಲಯಕ್ಕೆ ಎರಡು ಕಣ್ಣುಗಳಿವೆ. ಇವು ಆಲಯದ ಸಂಪತ್ತು. ಸೂರ್ಯನ ಬೆಳಕು ಬೆಳಗುತ್ತದೆ. ಅದಕ್ಕೆ ನೋಡಿ ಆನಂದಪಡುವ ಶಕ್ತಿಯಿಲ್ಲ. ಪಡೆದು ಭೋಗಿಸುವ ದುರ್ಗುಣವೂ ಇಲ್ಲ. ಆದರೆ ಕಣ್ಣು ಹಾಗಲ್ಲ, ನೋಡುವ ವಸ್ತುವನ್ನೇ ನೋಡಿ, ವಸ್ತುವಿನ ಅನಾವರಣ ಮಾಡಿ, ಅದರ ಸೌಂದರ್ಯವನ್ನು ಕಣ್ಣಿನಿಂದ ಹೀರಿ, ಇಡೀ ತನುವನ್ನು ಸದಾ ಪುಳಕಿತಗೊಳಿಸುವ ಬ್ರಹ್ಮ ಬಲ ಕಣ್ಣಿಗಿದೆ. ಅಂತೆಯೇ ಯುದ್ಧ ಮಾಡಿಯಾದರೂ ಪಡೆದು ವಿಕೃತವಾಗಿ ಭೋಗಿಸುವ ಭ್ರಮೆಯ ರಕ್ಕಸಬಲವೂ ಕಣ್ಣಿನಲ್ಲಿ ಆವರಿಸಿದೆ. ''ನೋಡೂದನ್ನು ನೋಡಲರಿಯದೆ ಕೆಟ್ಟಿತ್ತೀ ಜಗವೆಲ್ಲ. ನೋಡೂದ ನೋಡಬಲ್ಲಡೆ ಕೂಡಲಿಲ್ಲ ಅಗಲಲಿಲ್ಲ. ನೋಟದ ಕೂಟದ ಅಗಲದ ಸುಖವನ್ನು ಗುಹೇಶ್ವರಾ ನಿಮ್ಮ ಶರಣ ಬಲ್ಲ''

ಚರ್ಮ ನೋಡಿ ಕಣ್ಣು ತನುವಿನಲ್ಲಿ ಸಂಕಟವನ್ನುಂಟುಮಾಡುತ್ತದೆ. ಸರಿಯಾಗಿ ನೋಡಲು ಹೋದರೆ ತನ್ನಂತೆ ಇರುವ ಸುಂದರವಾದ ಚರ್ಮ, ಅದರ ಒಳಗಿರುವ ಮಟೀರಿಯಲ್ ಕೂಡಾ ಒಂದೇ. ಹೊರಗೆ ಕಾಣುವ ಮಟೀರಿಯಲ್ ಕೂಡಾ ಒಂದೇ. ಸುಖಿಸಲು ಹೋದರೆ ಹೊರಸೂಸುವ

ದ್ರವವೂ ತನುವಿನದೇ. ತನುವಿನ ದ್ರವ ತನುವೇ ಚೆಲ್ಲಿ ಅನ್ಯ ತನುವಿನಿಂದ ಸುಖವಾಯಿತೆನ್ನುವ ಭ್ರಮೆ ಕಣ್ಣಿನಲ್ಲಿದೆ. ಇದು ಸರಿಯುವವರೆಗೆ ಕಣ್ಣು ಆಲಯವಾಗಲರಿಯದು. ಕಣ್ಣು ನೋಡೂದನ್ನು ನೋಡಲು ತಿಳಿದರೆ ಕೂಡಲಿಲ್ಲ ಅಗಲಲಿಲ್ಲ. ಈ ನೋಟದ ಕೂಟವು ಎಂದೆಂದೂ ಅಗಲದ ಸುಖ. ಕಾಲ, ಕರ್ಮ ಭವಂಗಳ ಮೇಲೆ ಬೆಳಕು ಚೆಲ್ಲಿ ಸೋಜಿಗದ ಸುಖ. ತನುವೆಂಬ ಆಲಯದಲ್ಲಿ ಕರಿಗೊಂಡ ಆಲಿಯ ಸುಖ.

**ಆಲಿಸುವ ಶ್ರವಣವು ಮೇಲಿಪ್ಪ ಆಕಾಶವನಡರಲು ಉಲುಹು ನಿರ್ಭೂತ ಚಿತ್ತ ಸಮಾಧಾನವನೆಯ್ದಲು, ಕಾಲ ಕರ್ಮ ಭವಂಗಳ ಗೆಲುವುದಿದೇನು ಸೋಜಿಗವು ಹೇಳಾ ರೇವಣ್ಣ ಪ್ರಭುವೆ :**

''ಕಂಗಳೇಕೆ ನೋಡಬೇಡಾ ಎಂದರೆ ಮಾಣವು ? ಕಿವಿಗಳೇಕೆ ಕೇಳಬೇಡಾ ಎಂದರೆ ಮಾಣವು? ಚರ್ಮ ಏಕೆ ಮುಟ್ಟಬೇಡಾ ಎಂದರೆ ಮಾಣದು, ನಾಲಿಗೆ ಏಕೆ ರುಚಿಸಬೇಡಾ ಎಂದರೆ ಮಾಣದು. ಮೂಗು ಏಕೆ ವಾಸಿಸಬೇಡಾ ಎಂದರೆ ಮಾಣದು? ಈ ಭೇದವನು ಅರಿತು ನುಡಿಯಲು ಸಮಧಾತುವಾಯಿತ್ತು. ಗುಹೇಶ್ವರ ಲಿಂಗಕ್ಕೆ ಒಲಿತ ಕಾರಣ. ಅಭಿಮಾನ ಲಜ್ಜೆ ಬೇಸತ್ತು ಹೋಯಿತ್ತು''

ಪಂಚಭೂತಗಳಿಂದಾದ ತನುವಿನಲ್ಲಿ ಪಂಚ ಜ್ಞಾನೇಂದ್ರಿಯಗಳಿವೆ. ಶರಣರು ತಮ್ಮ ವಚನದಲ್ಲಿ ತನುವಿನಲ್ಲಿಯೇ ಪ್ರಮುಖವಾದ ಕಣ್ಣು ಮತ್ತು ಕಿವಿಯನ್ನು ಪಂಚಭೂತಗಳಲ್ಲಿಯ ಆಕಾಶವನ್ನು ತೆಗೆದುಕೊಂಡು ಜ್ಞಾನದ ಸೂತ್ರವನ್ನು ಹೆಣೆದಿದ್ದಾರೆ.

ಕಣ್ಣು ನೋಡವ ಗುಣವನ್ನು ಹೊಂದಿದೆ. ನೋಡಿ ಬೇಡುವ ಹಾಗೂ ಬೇಡದ ಗುಣವನ್ನೂ ಹೊಂದಿದೆ. ಕಿವಿ ಕೇಳುವ, ಕೇಳಿ ಬೇಡುವ ಹಾಗೂ ಬೇಡದ ಗುಣವನ್ನೂ ಹೊಂದಿದೆ. ಜ್ಞಾನೇಂದ್ರಿಯಗಳ ಬೇಡುವ ಹಾಗೂ ಬೇಡದ ಗುಣಗಳು ಒಂದು ನಾಣ್ಯದ ಎರಡು ಮುಖಗಳಿದ್ದಂತೆ. ಎರಡೂ ಅಜ್ಞಾನವೇ. ಈ ಭೇದವನು ತಿಳಿದರೆ ನೋಡುವ ಕೇಳುವ ಕ್ರಿಯೆ ಮಾತ್ರ ನಡೆಯುತ್ತದೆ. ನಾಲ್ಕು ಭೂತಗಳ ಚೇಷ್ಟೆಗಳು ಬಯಲಿನಲ್ಲಿ ಸಮಾಧಾನಗೊಂಡಂತೆ! ಕಣ್ಣು, ಕಿವಿಯಿಂದ ಉಂಟಾಗುವ ಸಂಕಟಗಳು ಜ್ಞಾನದಲ್ಲಿ ಲೀನವಾಗುತ್ತವೆ.

ಬಿರಿಯುವ ಭೂಮಿ , ಚಂಡಮಾರುತದಂತೆ ಬೀಸುವ ಗಾಳಿ, ಕೆನ್ನಾಲಿಗೆಯಂತೆ ಉರಿಯುವ ಬೆಂಕಿ, ಭೋರ್ಗರೆದು ಸುರಿಯುವ ಮಳೆಯೆಂಬ ನಾಲ್ಕು ಭೂತಗಳ ಚೇಷ್ಟೆಗಳನ್ನು ಬಯಲು ಸಮಚಿತ್ತದಿಂದ ಸಮಾಧಾನದಿಂದ ತನ್ನ ಗರ್ಭದಲ್ಲಿ ಬಂಧಿಸಿಕೊಂಡಿದೆ. ಏನಿದ್ದರೂ ಇವುಗಳ ಚೇಷ್ಟೆ ಬಯಲ ಗರ್ಭದಲ್ಲಿಯೇ. ಬಯಲಿಗೆ ಯಾವ ತೊಂದರೆಯೂ ಇಲ್ಲ. ಗರ್ಭ ಧರಿಸಿದ ತಾಯಿ ಮಗುವಿನ ಚೇಷ್ಟೆಯಿಂದ ಆನಂದಪಟ್ಟಂತೆ. ಹಾಗೆಯೇ ಕಣ್ಣು ಮತ್ತು ಕಿವಿಯ ಜ್ಞಾನ ಕೂಡಾ ಕರಿಗೊಂಡು ತನುವಿನ ಆಲಯದಲ್ಲಿ ಲೀನವಾಗುತ್ತದೆ.

□

**ಅರಿವಿನ ಪರಿಮಳ :**

- ತನುವಿನ ಆಲಯಕ್ಕೆ ಎರಡು ಕಣ್ಣುಗಳಿವೆ. ಇವು ಆಲಯದ ಸಂಪತ್ತು. ಸೂರ್ಯನ ಬೆಳಕು ಬೆಳಗುತ್ತದೆ. ಅದಕ್ಕೆ ನೋಡಿ ಆನಂದಪಡುವ ಶಕ್ತಿಯಿಲ್ಲ. ಪಡೆದು ಭೋಗಿಸುವ ದುರ್ಗುಣವೂ ಇಲ್ಲ. ಆದರೆ ಕಣ್ಣು ಹಾಗಲ್ಲ, ನೋಡುವ ವಸ್ತುವನ್ನೇ ನೋಡಿ, ವಸ್ತುವಿನ ಅನಾವರಣ ಮಾಡಿ, ಅದರ ಸೌಂದರ್ಯವನ್ನು ಕಣ್ಣಿನಿಂದ ಹೀರಿ, ಇಡೀ ತನುವನ್ನು ಸದಾ ಪುಳಕಿತಗೊಳಿಸುವ ಬ್ರಹ್ಮ ಬಲ ಕಣ್ಣಿಗಿದೆ.

# ಪಂಚೇಂದ್ರಿಯಗಳಿಗೆ ಜ್ಞಾನವೇ ಮೂಲ

**ಒಂದು ವರ್ಣದಿಂದ, ಭೇದಕ್ರಮದಿಂದ ಕೂಡಲಾಗಿ, ಪಂಚ ವರ್ಣವಾಯಿತ್ತು.**
**ಶ್ವೇತವರ್ಣ ಮೊದಲು ಪರಿಕ್ರಮದಿಂದ ಷಡುವರ್ಣವಾಯಿತ್ತು.**
**ಆ ವರ್ಣದ ಭೇದ ಬಿಳುಹಿನ ಸ್ವಾಯತ್ತೆಯಲ್ಲಡಗಿತ್ತು.**
**ಇಂತೀ ಪರಮನಿಂದ ಇಂದ್ರಿಯ ವಿಕಾರವಾದುದನರಿಯದೆ,**
**ಆತ್ಮಂಗೆ ಪರಿಭ್ರಮಣವೆಂದು ಸಂದೇಹ ಮಾಡುವ**
**ಬಂಧಮೋಕ್ಷ ಕರ್ಮಂಗಳಿಗೆ ಪರಮಸಂದ ಹರಿದಲ್ಲದೆ,**
**ಊರ್ಧ್ವರೇತೋಮೂರ್ತಿ ಶ್ವೇತ ಸ್ವಯಂಭು**
**ಕಪಿಲೇಶ್ವರ ಲಿಂಗವು ಸಾಧ್ಯವಲ್ಲ.**

**-ಮಲಹರಕಾಯಕದ ಚಿಕ್ಕದೇವಯ್ಯ ಶರಣರು**

ಚಿಕ್ಕದೇವಯ್ಯ ಶರಣರು ಆಭರಣಗಳಿಗಂಟಿದ ಮಲತೊಳೆಯುವ ಕಾಯಕದಲ್ಲಿ ನಿರತರಾಗಿದ್ದರು. ಹಾಗೆಯೇ ಜ್ಞಾನಾಭರಣವೆಂಬ ತನುವಿಗೆ ಅಂಟಿದ ಮಲ ತೊಳೆಯುವ ಬಗೆಯನ್ನು ಹೇಳಿಕೊಡುತ್ತಿದ್ದರು.

ತನುವೆಂಬುದು ಜ್ಞಾನವೆಂಬ ಒಂದೇ ಬಣ್ಣದಿಂದ ನಿರ್ಮಾಣವಾಯಿತು. ಅದರ ಭೇದ ಕ್ರಮದಿಂದ ಕಣ್ಣು, ಕಿವಿ, ಮೂಗು, ಚರ್ಮ ಮತ್ತು ನಾಲಿಗೆ ಎಂಬ ಪಂಚ ವರ್ಣವಾಯಿತು.

ಒಂದೇ ಬಿಳಿ ಬಣ್ಣ ಅದರ ಪರಿಕ್ರಮದಿಂದ ಆರು ಬಣ್ಣಗಳು ಜನ್ಮ ತಾಳಿದವು.

ಆರು ಬಣ್ಣಗಳ ಭೇದ ಬಿಳಿಬಣ್ಣದ ಸ್ವಾಯತ್ತದಲ್ಲಡಗಿದೆ.

ಹೀಗೆಯೆ ತನುವಿನ ಮಹಾಜ್ಞಾನವೆಂಬ ಪರಮನಿಂದ ಇಂದ್ರಿಯಗಳು ವಿಕಾರವಾಗುವುದಿಲ್ಲ. ಆತ್ಮಕ್ಕೆ ಪರಿಭ್ರಮಣವೆಂದು ಸಂದೇಹ ಮಾಡುವ ಬಂಧ ಮೋಕ್ಷ ಕರ್ಮಗಳೆಂಬ ಇಲ್ಲದ ಅಜ್ಞಾನ ಸೇರಿದೆ.

ಈ ಸಂದು ಹರಿದಲ್ಲದೆ, ತನುವಿನಲ್ಲಿ ಜ್ಞಾನವಿದ್ದೂ, ಜ್ಞಾನಿ ತಾನಲ್ಲ. ಜ್ಞಾನ ಒಂದೇ ಆದರೂ, ನೋಟದಲ್ಲಿ ಸೇರಿ ಕಣ್ಣಿನ ದೃಶ್ಯದ ರುಚಿಯನ್ನು ಬೇರ್ಪಡಿಸಿದೆ. ಕಿವಿಯಲ್ಲಿ ಸೇರಿ ಶಬ್ದದ ರುಚಿಯನ್ನು ಬೇರ್ಪಡಿಸಿದೆ. ನಾಲಿಗೆಯಲ್ಲಿ ಸೇರಿ ಪದಾರ್ಥದ ರುಚಿಯನ್ನು ಬೇರ್ಪಡಿಸಿದೆ. ಮೂಗಿನಲ್ಲಿ ಸೇರಿ ವಾಸನೆಯ ರುಚಿಯನ್ನು ಬೇರ್ಪಡಿಸಿದೆ. ಚರ್ಮದಲ್ಲಿ ಸೇರಿ ಸ್ಪರ್ಶದ ರುಚಿಯನ್ನು ಬೇರ್ಪಡಿಸಿದೆ. ಪುಣ್ಯ-ಪಾಪ, ಬಂಧ-ಮೋಕ್ಷ, ಧ್ಯಾನ-ಧಾರಣ, ಜಪ-ತಪಗಳಿಗೆ ಹೊರತಾದ ಪರಮನಿಗೆ ಅಂಟಿದ ಸಂದುಗಳು ಹರಿದಲ್ಲದೆ ಊರ್ಧ್ವರೇತೋಮೂರ್ತಿ ಶ್ವೇತ ಸ್ವಯಂಭುವೆಂಬ ಮಹಾಜ್ಞಾನಿ ಕಪಿಲೇಶ್ವರ ಲಿಂಗವು ಸಾಧ್ಯವಿಲ್ಲ.

ಬಣ್ಣಗಳು ಏಳಾದರೂ ಬಿಳಿಯ ಬಣ್ಣವೇ ಮೂಲ. ಜ್ಞಾನೇಂದ್ರಿಯಗಳು ಐದಾದರೂ ಜ್ಞಾನವೇ ಮೂಲ. ಪಂಚೇಂದ್ರಿಯಗಳ ರಾಜ, ಆರು ಬಣ್ಣಗಳ ಒಡೆಯ ಊರ್ಧ್ವರೇತೋಮೂರ್ತಿ ಶ್ವೇತಸ್ವಯಂಭು ಕಪಿಲೇಶ್ವರ ಲಿಂಗ ಎಂದು ತನುವಿನ ಮಹಾಜ್ಞಾನಕ್ಕೆ ನಾಮಕರಣ ಮಾಡಿದ್ದಾರೆ ಚಿಕ್ಕ ದೇವಯ್ಯ ಶರಣರು.

□

# ನಾಚಿಕೆಯಿಲ್ಲದ ನೀಚರು ನಾಚಿದ ಬಗೆ

**ನಾಚಿ ಮಾಡಬಲ್ಲಡೆ, ನಾಚನೆಂದೆಂಬೆ**
**ನಾಚದೆ ಮಾಡುವ ನೀಚರು ನೀವು ಕೋಚಿಯಾಗದೆ,**
**ಯಾಚಕತನವ ಬಿಟ್ಟು ಆಚರಿಸಿ, ಅಗೋಚರನ ಗೋಚರಿಸಿ,**
**ನಿಷ್ಠಾನಿಷ್ಠೆಯಿಂ ವ್ಯವಹರಿಸಬೇಡ,**
**ಊಟವೊಂದಲ್ಲದೆ ಮಾರೂಟ ಕೋರೂಟವನುಣ್ಣೆ**
**ಉಡಿಗೆವೊಂದಲ್ಲದೆ ಮಾರುಡಿಗೆ ಮೀರುಡುಗೆಯನುಡೆ,**
**ಉಂಡುಟ್ಟೆನಾದಡೆ ಎನ್ನ ಹೊದ್ದಿದಾರುಸ್ಥಲದ ಧೂಳಣ್ಣಗಳು**
**ನಗುವರು ಕಾಣಾ, ಮಾರುಡುಗೆಯ ನಾಚೇಶ್ವರಾ.**

**- ಮಾರುಡುಗೆಯ ನಾಚಣ್ಣ ಶರಣರು**

ತನು ನಾಚಿ ಗುರುವಿನಲ್ಲಿ ಅಡಗಿ ಗುರುವಾಗಿ, ಮನ ನಾಚಿ ಲಿಂಗದಲ್ಲಿ ಅಡಗಿ ಲಿಂಗವಾಗಿ, ಧನ ನಾಚಿ ಜಂಗಮದಲ್ಲಿ ಅಡಗಿ ಜಂಗಮವಾಗಿ ಕಾರ್ಯನಿರ್ವಹಿಸಬಲ್ಲಾತನನ್ನು ನಾಚನೆನ್ನಬಹುದು. ತಲೆ ತಗ್ಗಿಸುವ ನೀಚತನದ ಕೆಲಸಗಳನ್ನು ಆತ ಎಂದೂ ಮಾಡಲಾರ.

ವಿಷಯಾಸಕ್ತನಾಗಿ ತನುವಿನೊಂದಿಗೆ ಭೋಗಿಸುವ ಮನದ ಆಸೆ ಲಿಂಗವೆಂಬ ಅರಿವಿನಲ್ಲಿ ಸಿಲುಕಿ ಘನಮನವಾಗಿದೆ. ತನು ಅರಿವೆಂಬ ಗುರುವಿನಲ್ಲಿ ಸಿಲುಕಿ ಗುರುವಾಗಿದೆ. ಧನ ಅರಿವೆಂಬ ಛಲದಂಕಮಲ್ಲ ಜಂಗಮನಲ್ಲಿ ಸಿಲುಕಿ ಜಂಗಮವಾಗಿದೆ.

ನಾಚದೆ ತನುವನ್ನು ಸದಾ ಅಪಹಾಸ್ಯಕ್ಕೆ ಗುರಿ ಮಾಡುವ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರ ಎಂಬ ನೀಚರು ಗುರುವೆಂಬ ಅರಿವಿನ ಅನುಗ್ರಹದಿಂದ ಯಾಚಕತನವನ್ನು ಬಿಟ್ಟು ಅರಿವೇ ಆಗಿದ್ದಾರೆ. ಅಗೋಚರನ ಒಲುಮೆಯಿಂದ ನಿಷ್ಠಾವಂತರಾಗಿದ್ದಾರೆ.

ಮನದ ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳು ತನುವಿನ ಆರು ಸ್ಥಲಗಳಿಗೆ ನಾಚಿ ನೀರಾಗಿವೆ. ಷಟ್‌ಸ್ಥಲಗಳನ್ನೇ ಹೊದ್ದು ಸಂಪೂರ್ಣ ಅರಿವಾಗಿವೆ.

ಅವು ಉಂಡರೆ ಅರಿವಿನ ಊಟ ಉಣ್ಣುತ್ತವೆ. ಅವು ಉಟ್ಟರೆ ಅರಿವಿನ ಉಡುಗೆ ಉಡುತ್ತವೆ. ಮರೆತು ಮಾರೂಟ ಕೋರೂಟವನುಂಡರೆ, ಮಾರುಡಿಗೆ ಮೀರುಡುಗೆಯನುಂಡರೆ ಷಡುಸ್ಥಲಗಳನು ಹೊದ್ದು ಧೂಳಾದ ಧೂಳಣ್ಣಗಳು ನಗುವರು, ಅಪಹಾಸ್ಯ ಮಾಡುವರು ಎಂದಿದ್ದಾರೆ ಮಾರುಡುಗೆಯ ನಾಚಣ್ಣ ಶರಣರು.

□

# ಅರಿವಿಗೆ ಬೋಧೆ ಬೇಕಿಲ್ಲ ಅಜ್ಞಾನಕ್ಕೆ ಬೋಧೆ ನಿಲ್ಲುವುದಿಲ್ಲ

**ಶುಕ್ಲಶೋಣಿತ ಮಜ್ಜೆ ಮಾಂಸ ಹಸಿವು ತೃಷೆ**
**ವ್ಯಸನ ವಿಷಯಾದಿಗಳೊಂದಿಗೆ ಭೇದ.**
**ಮಾಡುವ ಕೃಷಿ ವ್ಯವಸಾಯ ಹಲವಲ್ಲದೆ,**
**ತೋರುವ ತೋರಿಕೆ ಅರಿವಾತ್ಮ ಒಂದೇ ಭೇದ .**
**ಆವ ಕುಲವಾದಡೂ ಅರಿದಲ್ಲಿಯೇ ಪರತತ್ವ ಭಾವಿ.**
**ಮರೆದಲ್ಲಿಯೇ ಮಲಮಾಯ ಸಂಬಂಧಿ.**
**ಇಂತಿ ಉಭಯವನರಿದು ಮರೆಯಲಿಲ್ಲ.**
**ಕೈಯುಳಿಕತ್ತಿ ಅಡಿಗೊಂಟಕ್ಕಡಿಯಾಗಬೇಡ,**
**ಅರಿ ನಿಜಾತ್ಮ ರಾಮ ರಾಮನಾ.**

**- ಮಾದಾರ ಚೆನ್ನಯ್ಯ ಶರಣರು**

ತನು ಒಂದೇ, ಹೆಣ್ಣು ಗಂಡು ಎನ್ನುವ ಭೇದವೂ ಇಲ್ಲ. ತನುವಿನಲ್ಲಿರುವ ಶುಕ್ಲಶೋಣಿತ ಮಜ್ಜೆ ಮಾಂಸ ಹಸಿವು ತೃಷೆ ವ್ಯಸನ ವಿಷಯಾದಿಗಳೂ ಒಂದೇ. ತನು ತೊಡಗಿಸಿಕೊಂಡಿರುವ ಕೃಷಿ ವ್ಯವಸಾಯ ಬೇರೆ ಬೇರೆ.

ತೋರುವ ತೋರಿಕೆ , ತಿಳಿಯುವ ಆತ್ಮ ಒಂದೇ. ಯಾವ ತನುವಾದರೇನು ಆ ತನುವಿನಲ್ಲಿಯೇ ಅರಿವಿನ ಇರುವು ಇದೆ. ಆ ಅರಿವಿನ ಇರುವು ಗೋಚರಿಸಿದ ತನುವೇ ಗುರುವು. ಮರೆತರೆ ಮಲಮಾಯಾ ಸಂಬಂಧಿ. ಹೆಣ್ಣು ಗಂಡಿನ ಭೇದ, ಜಾತಿ ಮತ ಪಂಥ ಪಂಗಡಗಳ ಭೇದ, ಬಡವ ಶ್ರೀಮಂತ ಅಧಿಕಾರಿ ರಾಜಕಾರಣಿ ಜವಾನನೆಂಬ ಭೇದ. ಅರಿವು ತನುವಿನಲ್ಲಿಯೇ ಇದೆ. ಅರಿವನ್ನು ಮರೆಯುವ ಮರೆವು ತನುವಿನಲ್ಲಿಯೇ ಇದೆ. ನೋಡುವ ಕಣ್ಣಿನಲ್ಲಿ ಅರಿವಿದೆ. ಸತ್ಯ ನೋಡದಂತೆ ಮರೆಮಾಚುವ ಮರೆವೂ ಕಣ್ಣಿನಲ್ಲಿಯೇ ಇದೆ.

ಕಲ್ಲನ್ನು ನೋಡಿ ಕಲ್ಲೆಂದು ಗುರುತಿಸಿದ್ದು ಕಣ್ಣೇ. ಕಟೆದು ಮೂರ್ತಿಯಾದ ಮೇಲೆ ದೇವರೆಂದು ಗುರುತಿಸಿದ್ದು ಕಣ್ಣೇ. ಕಲ್ಲು ಎನ್ನುವ ಅರಿವು ಮೂರ್ತಿಯಲ್ಲಿ ಮರೆಯಾಗಿ ದೇವರಾದದ್ದು ಸಾಮಾನ್ಯ ಮರೆವೇ?

ತನ್ನ ಕಣ್ಣಿನ ಮರೆವೆಗೆ ಮತ್ತೊಂದು ಕಣ್ಣು ಅರಿವು ಹೇಳಬೇಕೆ? ಆ ಅರಿವು ಹೇಳುವ ನೆಪದಲ್ಲಿ ಗುರುವಾಗಬೇಕೆ?

ಕಲ್ಲುನೋಡಿ ಕಲ್ಲೆಂದು ಹೇಳಿದ ಕಣ್ಣಿನ ಅರಿವಿಗೆ ಗುರುವಾಗಲು ಸಾಧ್ಯವೇ? ಕಟೆದು ಮೂರ್ತಿಯಾದ ಕಲ್ಲನ್ನು ದೇವರೆನ್ನುವ ಕಣ್ಣಿನ ಮರೆವಿಗೆ ಬೋಧೆ ಮಾಡಲು ಸಾಧ್ಯವೇ? ಅರಿವಿಗೆ ಬೋಧೆ ಬೇಕಾಗಿಲ್ಲ; ಅಜ್ಞಾನಕ್ಕೆ ಬೋಧೆ ನಿಲ್ಲುವುದಿಲ್ಲ. ಬೋಧೆ ಮಾಡುವುದೊಂದು ವ್ಯವಹಾರವೆಂದು ಭಾಸವಾಗುವುದಿಲ್ಲವೇ ?

ಮಾದಾರ ಚೆನ್ನಯ್ಯ ಶರಣರು, ತನುವಿನಲ್ಲಿಯ ಅಜ್ಞಾನವೆಂಬ ಎಮ್ಮೆಯ ಚರ್ಮವನು ತಮ್ಮ ಕೈಯುಳಿಕತ್ತಿಯೆಂಬ ಜ್ಞಾನದಿಂದ ಹದವಾಗಿ ತೆಗೆದಿದ್ದಾರೆ. ಆ ತಿತ್ತಿಯನ್ನು ಒಪ್ಪವ ಮಾಡಿ ಅರಿವು ಮರೆವು ಎಂಬ ನಾರಿನಲ್ಲಿ ಬಿಗಿದು ಸರ್ವಸಾರದ ಖಾರದ ನೀರನ್ನು ಹಾಕಿ ಅಜ್ಞಾನದ ದುರ್ವಾಸನೆಯನ್ನು ಕಳೆದಿದ್ದಾರೆ. ಅರಿವೆಂಬ ಕೈಯುಳಿಕತ್ತಿಯ ಅಡಿಗೂಂಟಕ್ಕೆ ತುತ್ತಾಗದೆ ಅರಿ ನಿಜಾತ್ಮನ ರಾಮ ರಾಮನಾ ಎಂದು ತನುವಿನ ಮನಕ್ಕೆ ಎಚ್ಚರಿಸಿದ್ದಾರೆ ಚೆನ್ನಯ್ಯ ಶರಣರು.

□

**ಅರಿವಿನ ಪರಿಮಳ :**

- ತೋರುವ ತೋರಿಕೆ , ತಿಳಿಯುವ ಆತ್ಮ ಒಂದೇ. ಯಾವ ತನುವಾದರೇನು ಆ ತನುವಿನಲ್ಲಿಯೇ ಅರಿವಿನ ಇರುವು ಇದೆ. ಆ ಅರಿವಿನ ಇರುವು ಗೋಚರಿಸಿದ ತನುವೇ ಗುರುವು. ಮರೆತರೆ ಮಲಮಾಯಾ ಸಂಬಂಧಿ.
- ಕಲ್ಲುನೋಡಿ ಕಲ್ಲೆಂದು ಹೇಳಿದ ಕಣ್ಣಿನ ಅರಿವಿಗೆ ಗುರುವಾಗಲು ಸಾಧ್ಯವೇ? ಕಟೆದು ಮೂರ್ತಿಯಾದ ಕಲ್ಲನ್ನು ದೇವರೆನ್ನುವ ಕಣ್ಣಿನ ಮರೆವಿಗೆ ಬೋಧೆ ಮಾಡಲು ಸಾಧ್ಯವೇ? ಅರಿವಿಗೆ ಬೋಧೆ ಬೇಕಾಗಿಲ್ಲ; ಅಜ್ಞಾನಕ್ಕೆ ಬೋಧೆ ನಿಲ್ಲುವುದಿಲ್ಲ. ಬೋಧೆ ಮಾಡುವುದೊಂದು ವ್ಯವಹಾರವೆಂದು ಭಾಸವಾಗುವುದಿಲ್ಲವೇ ?

# ಸೆಗಣಿ ಮತ್ತು ಭಸ್ಮದ ದೃಷ್ಟಾಂತ

**ಅಪ್ಪು ಉಳ್ಳನ್ನಕ್ಕ ತೊಪ್ಪೆ ಕಿಚ್ಚಿಗೊಳಗಪ್ಪುದೆ ?**
**ಅಪ್ಪುವಾರಿ, ಕಿಚ್ಚು ಮುಟ್ಟಿದ ಮತ್ತೆ**
**ತೊಪ್ಪೆಯೆಂಬ ನಾಮ ಎತ್ತ ಹೋಯಿತ್ತು ?**
**ಈ ಕಷ್ಟವ ಮುಟ್ಟಿದ್ದ ತನು, ದೃಷ್ಟವ ಕಂಡಿದ್ದ ಚಿತ್ತ ,**
**ಈ ಉಭಯದ ಗೊತ್ತ ಕಂಡು,**
**ಈ ಗುಣ ಮುಕ್ತಿಯಹ ಭೇದವೆಂದು ಅರಿದ ಮತ್ತೆ ,**
**ಕಟ್ಟಿ ಬಿಟ್ಟು ನೋಡಿ, ವಸ್ತುವ ಕಂಡೆಹೆನೆಂಬುದು**
**ಎತ್ತಣ ಶುದ್ಧಿ ಹೇಳಾ, ಕಾಮಧೂಮ ಧೂಳೇಶ್ವರಾ ?**

**- ಮಾದಾರ ಧೂಳಯ್ಯ ಶರಣರು**

**ಅಪ್ಪು ಉಳ್ಳನ್ನಕ್ಕ ತೊಪ್ಪೆ ಕಿಚ್ಚಿಗೊಳಗಪ್ಪುದೆ ? :**

ಸೆಗಣಿ (ತೊಪ್ಪೆ) ಯಲ್ಲಿ ಜಲ ಇರುವವರೆಗೆ ಸೆಗಣಿಯನ್ನು ಬೆಂಕಿ ಸೋಂಕುವುದಿಲ್ಲ.

**ಅಪ್ಪುವಾರಿ, ಕಿಚ್ಚು ಮುಟ್ಟಿದ ಮತ್ತೆ ತೊಪ್ಪೆಯೆಂಬ ನಾಮ ಎತ್ತ ಹೋಯಿತ್ತು ? :**

ಸೆಗಣಿಯಲ್ಲಿಯ ಜಲ ಕರಗಿ ಕುರುಳಾದ ಮೇಲೆ ಬೆಂಕಿ ತಾಗಲು ಸೆಗಣಿ ಎತ್ತ ಹೋಯಿತ್ತು ? ಇದು ಮಾದಾರ ಧೂಳಯ್ಯ ಶರಣರ ಪ್ರಶ್ನೆ. ತನುವಿನ ಜ್ಞಾನ ತಿಳಿಯಲು ಸರಳವಾದ ಸೆಗಣಿಯ ದೃಷ್ಟಾಂತವನ್ನು ಕೊಟ್ಟಿದ್ದಾರೆ ಶರಣರು.

ಸೆಗಣಿ, ಜಲ, ಕುರುಳು, ಅಗ್ನಿ, ಭಸ್ಮ ಈ ಐದೂ ವಸ್ತುಗಳು ಸೆಗಣಿಯಲ್ಲಿವೆ. ಸೆಗಣಿಯಲ್ಲಿ ಜಲವಿದ್ದಾಗ ಅಗ್ನಿ ಸೆಗಣಿಗೆ ತಾಕಿದರೂ ಸೆಗಣಿ ಸುಟ್ಟು ಭಸ್ಮವಾಗುವುದಿಲ್ಲ. ಸೆಗಣಿಯ ಜಲ ಕುರುಳಾದಾಗ ಒಣಗಿ ಬೆಂಕಿ ತಾಗಿ ಭಸ್ಮವಾಗುತ್ತದೆ.

ಭಸ್ಮದಲ್ಲಿ ಸೆಗಣಿ ಜಲ ಕುರುಳು ಅಗ್ನಿ ಲೀನವಾಯಿತು. ಭಸ್ಮಕ್ಕೆ ಮತ್ತೆ ಅಗ್ನಿಯ ಸ್ಪರ್ಶ ಬೇಕಿಲ್ಲ. ಅದು ಜಲದಲ್ಲಿ ಬೆರೆತು ಜಲವಾಗುತ್ತದೆ. ಗಾಳಿಯಲ್ಲಿ ಬೆರೆತು ಗಾಳಿಯಾಗುತ್ತದೆ.

ಸೆಗಣಿ ಮುಕ್ತಿ ಪಡೆಯಿತೆಂದರೆ, ಜಲ ಮತ್ತು ದಂಟು ಸೇವಿಸಿದ ದನ ಸೆಗಣಿ ಹಾಕಿತು. ಆ ಸೆಗಣಿಯಲ್ಲಿ ಜಲವಿದೆ. ಜಲದಿಂದ ಜನ್ಮ ತಳೆದ ದಂಟು ಜೀರ್ಣವಾಗಿ ಮತ್ತೊಂದು ರೂಪ ಪಡೆದು ಸೆಗಣಿಯಾಗಿದೆ.

ಜಲ ಮುಕ್ತಿ ಪಡೆಯಿತೆಂದರೆ, ಜಲವೂ ಜಲವಲ್ಲ. ಜಲಜನಕದ ಎರಡು ಕಣಗಳು ಆಮ್ಲಜನಕದ ಒಂದು ಕಣ ಕೂಡಿ ಜಲವಾಗಿದೆ.

ಕುರುಳು ಮುಕ್ತಿ ಪಡೆಯಿತೆಂದರೆ, ಜಲ, ಜಲಜನಕ, ಆಮ್ಲಜನಕ ಗಟ್ಟಿಯಾಗಿ ಕುರುಳಾಗಿದೆ.

ಅಗ್ನಿ ಮುಕ್ತಿ ಪಡೆಯಿತೆಂದರೆ, ಸೆಗಣಿಯಲ್ಲಿದ್ದು ಒಣಗಿ ಕುರುಳಾಗಿ ಕ್ರಿಯಾ ರೂಪದಲ್ಲಿ ಕುರುಳಿಗೆ ತಾಗಿ ತಾನೇ ಸುಟ್ಟು ತಾನೇ ಭಸ್ಮವಾಗಿ ಬಯಲಾಗಿದೆ.

ಈ ದೃಷ್ಟಾಂತವನ್ನು ತಾನೇ ನೋಡಬೇಕು. ಮುಕ್ತಿ ಹೊಂದುವ ಭೇದವೆಂದು ತಾನೇ

ತಿಳಿಯಬೇಕು. ಆದರೆ ಮತ್ತೆ ಸಾಕ್ಷಾತ್ಕಾರವಾಯಿತೆಂದು, ವಸ್ತುವನ್ನು ಕಂಡೆನೆಂದು, ಕಾಣಲಿಲ್ಲವೆಂದು ಪರಿತಪಿಸಿ, ಜಪ ತಪ ಯೋಗ ಪುಣ್ಯಕ್ಷೇತ್ರ ದರ್ಶನಗಳನ್ನು ಮಾಡಿ, ಅನುಷ್ಠಾನಕ್ಕೆ ಅಣಿಗೊಳ್ಳುವ ಅಣಿ ಗೊಳಿಸುವ ವ್ಯವಹಾರದಲ್ಲಿ ತೊಡಗುವ, ತನುಗಳ ಸಂಕಟಗಳನ್ನು ಯಾರು ಪಾರು ಮಾಡಬೇಕು ? ಜಾತಿ ಮತ ಪಂಥ ಅಧಿಕಾರ ಲಂಚ ಭ್ರಷ್ಟಾಚಾರ ರಾಜಕೀಯ ಧರ್ಮ ಪೀಠ ಎಂದು ಸದಾ ಹಸಿ ಹಸಿಯುಳ್ಳ ಅಹಂಕಾರದ ಸೆಗಣಿಗೆ ಯಾರು ಅಗ್ನಿಸ್ಪರ್ಶ ಮಾಡಬೇಕು?

ಸೆಗಣಿಯನ್ನು ಯಾರೂ ಒಣಗಿಸುವುದಿಲ್ಲ ತಾನೇ ಒಣಗಿ ಕುರುಳಾಗಬೇಕು. ತನ್ನಲ್ಲಿರುವ ಜ್ಞಾನಾಗ್ನಿ ತನಗೇ ಸ್ಪರ್ಶವಾಗಿ ತಾನೇ ಭಸ್ಮವಾಗಬೇಕು. ಕಾಮಧೂಮ ಧೂಳೇಶ್ವರನಾಗಬೇಕು ಎನ್ನುವ ಸದಾಶಯವನ್ನು ಹೊಂದಿದ ಮಾದಾರ ಧೂಳಯ್ಯ ಶರಣರು ಸೆಗಣಿಯ ದೃಷ್ಟಾಂತದ ಸೂತ್ರ ರಚಿಸಿದ್ದಾರೆ.

□

**ಅರಿವಿನ ಪರಿಮಳ :**

- □ ಸೆಗಣಿ (ತೊಪ್ಪೆ) ಯಲ್ಲಿ ಜಲ ಇರುವವರೆಗೆ ಸೆಗಣಿಯನ್ನು ಬೆಂಕಿ ಸೋಂಕುವುದಿಲ್ಲ.
- □ ಭಸ್ಮದಲ್ಲಿ ಸೆಗಣಿ ಜಲ ಕುರುಳು ಅಗ್ನಿ ಲೀನವಾಯಿತು. ಭಸ್ಮಕ್ಕೆ ಮತ್ತೆ ಅಗ್ನಿಯ ಸ್ಪರ್ಶ ಬೇಕಿಲ್ಲ. ಅದು ಜಲದಲ್ಲಿ ಬೆರೆತು ಜಲವಾಗುತ್ತದೆ. ಗಾಳಿಯಲ್ಲಿ ಬೆರೆತು ಗಾಳಿಯಾಗುತ್ತದೆ.
- □ ಸೆಗಣಿ ಮುಕ್ತಿ ಪಡೆಯಿತೆಂದರೆ, ಜಲ ಮತ್ತು ದಂಟು ಸೇವಿಸಿದ ದನ ಸೆಗಣಿ ಹಾಕಿತು. ಆ ಸೆಗಣಿಯಲ್ಲಿ ಜಲವಿದೆ. ಜಲದಿಂದ ಜನ್ಮ ತಳೆದ ದಂಟು ಜೀರ್ಣವಾಗಿ ಮತ್ತೊಂದು ರೂಪ ಪಡೆದು ಸೆಗಣಿಯಾಗಿದೆ.
- □ ಜಲ ಮುಕ್ತಿ ಪಡೆಯಿತೆಂದರೆ, ಜಲವೂ ಜಲವಲ್ಲ. ಜಲಜನಕದ ಎರಡು ಕಣಗಳು ಆಮ್ಲಜನಕದ ಒಂದು ಕಣ ಕೂಡಿ ಜಲವಾಗಿದೆ.
- □ ಕುರುಳು ಮುಕ್ತಿ ಪಡೆಯಿತೆಂದರೆ, ಜಲ, ಜಲಜನಕ, ಆಮ್ಲಜನಕ ಗಟ್ಟಿಯಾಗಿ ಕುರುಳಾಗಿದೆ.
- □ ಅಗ್ನಿ ಮುಕ್ತಿ ಪಡೆಯಿತೆಂದರೆ, ಸೆಗಣಿಯಲ್ಲಿದ್ದು ಒಣಗಿ ಕುರುಳಾಗಿ ಕ್ರಿಯಾ ರೂಪದಲ್ಲಿ ಕುರುಳಿಗೆ ತಾಗಿ ತಾನೇ ಸುಟ್ಟು ತಾನೇ ಭಸ್ಮವಾಗಿ ಬಯಲಾಗಿದೆ.
- □ ಸೆಗಣಿಯನ್ನು ಯಾರೂ ಒಣಗಿಸುವುದಿಲ್ಲ ತಾನೇ ಒಣಗಿ ಕುರುಳಾಗಬೇಕು. ತನ್ನಲ್ಲಿರುವ ಜ್ಞಾನಾಗ್ನಿ ತನಗೇ ಸ್ಪರ್ಶವಾಗಿ ತಾನೇ ಭಸ್ಮವಾಗಬೇಕು.

# ಭೂಮಿ ನಷ್ಟ ಮಾಡುವ ಚೆನ್ನಬಸವಣ್ಣನವರ ಸೂತ್ರ

**ಭೂಮಿ ನಷ್ಟವಾದರೆ ಜಲಕ್ಕಿಂಬಿಲ್ಲ, ಜಲ ನಷ್ಟವಾದರೆ ಇಂದ್ರಿಯಕ್ಕಿಂಬಿಲ್ಲ,**
**ಇಂದ್ರಿಯ ನಷ್ಟವಾದರೆ ಜಂಗಮಕ್ಕಿಂಬಿಲ್ಲ, ಜಂಗಮ ನಷ್ಟವಾದರೆ ಲಿಂಗಕ್ಕಿಂಬಿಲ್ಲ,**
**ಇದು ಕಾರಣ ಕರಣಾದಿಗಳಂ ಬಿಡದೆ ಆನು ಪ್ರತಿಯೆಂಬುವವರ**
**ತೋರಯ್ಯಾ ಕೂಡಲ ಚೆನ್ನ ಸಂಗಮದೇವಾ.**

**- *ಚೆನ್ನಬಸವಣ್ಣ***

**ಭೂಮಿ ನಷ್ಟವಾದರೆ ಜಲಕ್ಕಿಂಬಿಲ್ಲ :**

ಭೂಮಿಗೂ ಜಲಕ್ಕೂ ನಂಟು. ಭೂಮಿ ಇಲ್ಲದೆ ಜಲವಿಲ್ಲ. ಜಲವಿಲ್ಲದೆ ಜೀವ ಜಲವಿಲ್ಲ. ಜಲದಿಂದಲೇ ಜೀವಜಲವೆಲ್ಲ. ಜಲಮರೆತ ಜೀವ ಕುಲವೆಲ್ಲ (ಮನುಕುಲ) ಭೂಮಿಗಾಗಿಯೇ ಹೋರಾಡುತ್ತದೆ, ಹೊಡೆದಾಡುತ್ತದೆ,ಯುದ್ಧ ಮಾಡುತ್ತದೆ. ಸಂಧಾನಕ್ಕಾಗಿ ಬಂದ ಕೃಷ್ಣ ಪಾಂಡವರಿಗೆ ಐದು ಗ್ರಾಮಗಳನ್ನಾದರೂ ಕೊಡು ಎಂದು ದುರ್ಯೋಧನನನ್ನು ಕೇಳಲು, ಐದು ಗ್ರಾಮವೇಕೆ ಸೂಜಿಯ ಮೊನೆಯ ಮೇಲಿನ ಮಣ್ಣನ್ನು ಕೊಡುವುದಿಲ್ಲವೆಂದು ತೊಡೆತಟ್ಟಿ ಯುದ್ಧಕ್ಕೆ ಆಮಂತ್ರಣ ನೀಡಿ ತನ್ನನ್ನು ಸೇರಿ 18 ಅಕ್ಷೋಹಿಣಿ ಸೈನ್ಯದ ಮಾರಣ ಹೋಮಕ್ಕೆ ಕಾರಣನಾಗುತ್ತಾನೆ.

ಇದರಿಂದ ಭೂಮಿಗಾಗಿ ಮನುಕುಲ ನಷ್ಟವಾಯಿತು. ಮನುಕುಲಕ್ಕೆ ಭೂಮಿ ನಷ್ಟ ಮಾಡುವ ಬಗೆ ತಿಳಿಯಲಿಲ್ಲ. ಮನುಕುಲದ ಸೃಷ್ಟಿಗೆ ಜಲವೇ ಆಧಾರ. ಜಲವಿಲ್ಲದೆ ಭೂಮಿಯಿಲ್ಲ;

ಈ ಜೀವಜಲಕ್ಕೆ ಅರಿವಿದೆ. ತನ್ನನ್ನು ತಾನು ತಿಳಿದುಕೊಳ್ಳುವುದರ ಜೊತೆಗೆ ತನಗೆ ಕಾಣುವ ಎಲ್ಲ ವಸ್ತುಗಳನ್ನು ತಿಳಿದುಕೊಳ್ಳುವ ಶಕ್ತಿಯಿದೆ.ಆದರೆ ಅರಿವು ಬಳಕೆಯಾಗದ ನಿಮಿತ್ತ ತನು ನೋಡುವ ವಸ್ತುಗಳು ವಿಪರೀತವಾಗಿ ಕಾಣುತ್ತವೆ. ಆ ವಸ್ತುಗಳಿಗಾಗಿಯೇ ಅರಿವಿನ ಜೀವಜಲ ನಷ್ಟವಾಗುತ್ತದೆ. ಆ ವಸ್ತುಗಳನ್ನು ನಷ್ಟ ಮಾಡುವ ಶಕ್ತಿ ಇಲ್ಲದಂತಾಗಿದೆ.

ಅರಿವಿನಿಂದ ತನ್ನನ್ನು ನೋಡಿದರೆ ತಾನು ಜಲದಿಂದಾದವನು: ಜಲಬಿಂದು ಗರ್ಭ ಪ್ರವೇಶಿಸಿ ಆ ಜಲವೇ ತನುವಾಗಿದೆ. ಅದರಂತೆ ಜಲಬಿಂದುಗಳೇ ಪಾಕವಾಗಿ ಗಟ್ಟಿಗೊಂಡು ಭೂಮಿಯಾಗಿದೆ. ಈ ಭೂಮಿಯ ಮೇಲೆ ಬಿದ್ದ ಜಲವೆಲ್ಲ ಜೀವ ಜಲವಾಗಿದೆ. ಆ ಜೀವಜಲದಿಂದಲೇ ಗಿಡಮರ ಬಳ್ಳಿ ಪಶು ಪಕ್ಷಿ ಪ್ರಾಣಿ ಕೊನೆಗೆ ತಾನೂ ಕೂಡಾ ಆಗಿದ್ದಾನೆ.ಭೂಮಿಯ ಮೇಲಿದ್ದ ವಸ್ತುಗಳೊಂದಿಗೆ ಪ್ರಾಣಿ ಸಂಕುಲವನ್ನು ಸಹಿತ ತಿಳಿದುಕೊಳ್ಳುವ ಅರಿವು ತನಗೊಂದೇ ಇದೆ.

ಅರಿವು ಬಳಕೆಯಾಗದ ನಿಮಿತ್ತ ಭೂಮಿಗಾಗಿ ಭೂಮಿಯೊಳಗಿದ್ದ ಲೋಹ ಕ್ಕಾಗಿ ಹಾಗೂ ಭೂಮಿಯ ಮೇಲಿದ್ದ ತನ್ನಂತೆ ಇರುವ ಇತರ ಜೀವಜಲದ ವಿಷಯದ ಕಾತುರಕ್ಕಾಗಿ ತಾನೇ ನಷ್ಟವಾ ಗುತ್ತಾನೆ.

ನೀರುಗಟ್ಟಿಗೊಂಡು ಭೂಮಿಯಾಗಿದೆ. ನೀರು ಗಟ್ಟಿಗೊಂಡು ತನುವಾಗಿದೆ. ತನುವಿಗೆ ಅರಿವಿದೆ. ಭೂಮಿಗೆ ಅರಿವಿಲ್ಲ. ಭೂಮಿ ಜಡ, ತನು ಚೇತನ. ಅರಿವು ಬಳಕೆ ಮಾಡಿಕೊಂಡು ಭೂಮಿ ನೋಡಲು ಭೂಮಿ ನಷ್ಟವಾಗಿ ಜೀವಜಲಕ್ಕಿಂಬಿಲ್ಲದಂತೆ ನೆರವಾಗುತ್ತದೆ. ನೋಡಲು ಬಾಳೆ ದಿಂಡು,ಸುಲಿದು ನೋಡಿದರೆ ಇಂಬಿಲ್ಲ.ನೋಡುಗರಿಗೆ ಕಂಬದಂತೆ ನಿಂತಿದೆ ತಿಳಿದುಕೊಂಡರೆ

ಕಂಬವಲ್ಲ. ಹಾಗೆಯೇ ಭೂಮಿ ನೋಡಿ ನಷ್ಟ ಮಾಡುವ ಅರಿವು ತನುವಿನಲ್ಲಿದೆ. ಭೂಮಿಗಾಗಿ ನಷ್ಟ ವಾಗುವ ಅಜ್ಞಾನವೂ ತನುವಿನಲ್ಲಿದೆ. ವ್ಯವಹಾರಕ್ಕಾಗಿ ತನುವು ಬಳಕೆಯಾದರೂ ಸಕಲವನ್ನು ನೋಡುವ ತನುವಿನ ಅರಿವು ಬಳಕೆಯಾಗದಿದ್ದರೆ ತನು ನಷ್ಟವಾಗುವುದು ಕಟ್ಟಿಟ್ಟ ಬುತ್ತಿ. ಇದು ಮಹಾಜ್ಞಾನಿ ಚೆನ್ನಬಸವಣ್ಣನವರ ಭೂಮಿ ನಷ್ಟ ಮಾಡುವ ಸೂತ್ರ.

**ಜಲ ನಷ್ಟವಾದರೆ ಇಂದ್ರಿಯಕ್ಕಿಂಬಿಲ್ಲ; ಇಂದ್ರಿಯ ನಷ್ಟವಾದರೆ ಜಂಗಮಕ್ಕಿಂಬಿಲ್ಲ:**

ಜಲ ಗಟ್ಟಿಗೊಂಡು ತನುವಾಗಿದೆ. ಈ ತನುವಿನಲ್ಲಿ ಕಣ್ಣು,ಕಿವಿ,ಮೂಗು, ನಾಲಿಗೆ,ಚರ್ಮ ಎಂಬ ಐದು ಇಂದ್ರಿಯಗಳಿವೆ. ಇವು ಕೂಡಾ ಜಲಾವೃತ್ತವೇ. ತನುವಿನ ಕಣ್ಣು, ಅನ್ಯ ತನುವನ್ನು ಜಾತಿ ಮತ ಪಂಥ ಶ್ರೀಮಂತ ಬಡವ ಅಧಿಕಾರಿ ಕಳ್ಳ ವೈರಿ ಸ್ನೇಹಿತ ಎಂದು ದ್ವೇಷಿಸಿದರೆ ಜಗಳ. ವಿಷಯಾಸಕ್ತನಾಗಿ ಭೋಗಿಸಿದರೆ ಹಾದರದ ಪಟ್ಟ; ಕೊಲೆ.

ಕೆರೆ ಹಳ್ಳ ನದಿಗಳ ಜಲ ಜಲದೊಂದಿಗೆ ಬೆರೆತು ಸಾಗರವಾಗುತ್ತದೆ. ಜಲ ನಷ್ಟವಾಗಿ ಅನಂತವಾಗುತ್ತದೆ. ತನುವೂ ಜಲವೇ; ಮತ್ತೊಂದು ತನು ಕೂಡಾ ಜಲವೇ. ತನುವಿನಲ್ಲಿದ್ದ ಪಂಚೇಂದ್ರಿಯಗಳೂ ಜಲವೇ. ಈ ಪಂಚೇಂದ್ರಿಯಗಳು ಜ್ಞಾನೇಂದ್ರಿಯಗಳೇ ಆಗಿವೆ. ಇದು ತಿಳಿದರೆ ಸಾಕು ತನ್ನಂತೆ ಇರುವ ತನುವು ಕೂಡಾ ತನುವೇ. ಜಲ ನಷ್ಟವಾಗಿ ತನುವಾಗಿದೆ. ತನು ನಷ್ಟವಾಗಿ (ಜಂಗಮ) ಜ್ಞಾನ ತನುವಾಗಿದೆ. ಇಂದ್ರಿಯ ನಷ್ಟವಾಗಿ ಜ್ಞಾನೇಂದ್ರಿಯವಾಗಿದೆ. ಜಲ ಜಲದೊಂದಿಗೆ ಕೂಡಿ ಸಾಗರ ಸೇರಿ ಜಲ ನಷ್ಟವಾಗಿ ಹೇಗೆ ಅನಂತ ವಾಗಿದೆಯೋ ಹಾಗೆ ತನುವಿನ ಇಂದ್ರಿಯಗಳು ನಷ್ಟವಾಗಿ ಜ್ಞಾನೇಂದ್ರಿಯಗಳಾಗಿ ಜಂಗಮವಾಗಿವೆ.

**ಜಂಗಮ ನಷ್ಟವಾದರೆ ಲಿಂಗಕ್ಕಿಂಬಿಲ್ಲ:** ತನುವು, ತನುವಿನ ಇಂದ್ರಿಯಗಳು ನಷ್ಟವಾಗಿ ಅರಿವೇ ತಾನಾದ ಜಂಗಮನೆಂಬ ಮಹಾಜ್ಞಾನಿಗೆ (ಲಿಂಗ) ಭೂಮಿ, ಹೇಮ,ವಿಷಯವೆಂಬ ಆಧಾರಗಳ ಅವಶ್ಯಕತೆಯಿಲ್ಲ.

**ಇದು ಕಾರಣ ಕರಣಾದಿಗಳ ಬಿಡದೆ ಆನು ವ್ರತಿಯೆಂಬುವರ**
**ತೋರಯ್ಯಾ ಕೂಡಲ ಚೆನ್ನ ಸಂಗಮದೇವಾ:**

ತನುವಿನ ಪಂಚೇಂದ್ರಿಯಗಳು ಜ್ಞಾನೇಂದ್ರಿಯಗಳಾಗಿವೆ. ಜ್ಞಾನಕ್ಕೆ ತನುವೇ ಲಾಂಛನ. ಈ ತನುವಿಗೆ ಕಾವಿಯೆಂಬ ವಸ್ತ್ರ ಹೊದ್ದು ವ್ರತಿಯಾಗಲು ಸಾಧ್ಯವೇ? ವಸ್ತುವಿನ ಸತ್ಯವನ್ನು ಕಣ್ಣಿನಿಂದ ನೋಡುವುದರ ಮೂಲಕ, ಶಬ್ದದ ಸತ್ಯವನ್ನು ಕಿವಿಯಿಂದ ಕೇಳುವುದರ ಮೂಲಕ , ವಸ್ತುವಿನ ಪರಿಮಳವನ್ನು ಮೂಗಿನಿಂದ ವಾಸಿಸುವುದರ ಮೂಲಕ ಜ್ಞಾನಿಯಾಗಬೇಕು. ಚರ್ಮದಿಂದ ವಸ್ತುವಿನ ಸತ್ಯವನ್ನು ಸ್ಪರ್ಶಿಸುವುದರ ಮೂಲಕ, ರುಚಿಯ ಸತ್ಯವನ್ನು ನಾಲಿಗೆಯ ಮೂಲಕ ತಿಳಿಯುವುದರೊಂದಿಗೆ ಜ್ಞಾನಿಯಾಗಬೇಕು. ಹೀಗೆ ತನುವಿನಲ್ಲಿ ಇಂದ್ರಿಯಗಳಿದ್ದೂ ನಷ್ಟವಾಗಿ ಜ್ಞಾನೇಂದ್ರಿಯಾದ ವ್ರತಿಯನ್ನು ತೋರಿಸಯ್ಯಾ ಎಂದು ಚೆನ್ನಬಸವಣ್ಣನವರು ತಮ್ಮ ತನುವಿನ ಅರಿವಿಗೆ ಕೂಡಲ ಚೆನ್ನ ಸಂಗಮದೇವಾ ಎಂದು ನಾಮಕರಣ ಮಾಡಿ ಆ ಅರಿವಿನೊಂದಿಗೆ ಮಾತನಾಡುತ್ತಾ ಜ್ಞಾನಕ್ಕೆ ಹೋಗುವ ಸೂತ್ರವನ್ನು ತಮ್ಮ ವಚನದಲ್ಲಿ ಬಂಧಿಸಿದ್ದಾರೆ.

□

# ಗುರುತನವನಳಿದು ತನುವಿನ ಗುರುತನ ತೋರುವವನೇ ಗುರು

**ಗುರು ಶಿಷ್ಯಂಗೆ ಭೋಧಿಸುವಲ್ಲಿ**
**ತನ್ನನಳಿದು ಲಿಂಗವ ತೋರಿಸಬೇಕು.**
**ಲಿಂಗದ ಸಂಗ ನೆನಹಾದಲ್ಲಿ ಆ ಲಿಂಗಕ್ಕೆ**
**ಉಂಬ ಬಾಯಿ ಜಂಗಮವಾದ ಕಾರಣ,**
**ಆ ಜಂಗಮಲಿಂಗದ ದಾಸೋಹದಿಂದ ಬೇರೊಂದಂಗವಿಲ್ಲ.**
**ಸಂಗನಬಸವಣ್ಣಪ್ರಿಯ ಚಂದೇಶ್ವರ ಲಿಂಗವು**
**ಹಿಂಗದ ಭಾವ ಕಾಣಾ ಮಡಿವಾಳಯ್ಯಾ.**

**- ನುಲಿಯ ಚಂದಯ್ಯ ಶರಣರು**

**ಗುರು ಶಿಷ್ಯಂಗೆ ಭೋದಿಸುವಲ್ಲಿ ತನ್ನನಳಿದು ಲಿಂಗವ ತೋರಿಸಬೇಕು:**

ಅರಿವೆಂಬುದು ತನುವಿನ ಸಂಪತ್ತು ; ಅದು ಮರೆವಾದ ಕಾರಣ ಶಬ್ದ ಸ್ಪರ್ಶ ವಾಸನೆ ರುಚಿ ದೃಶ್ಯದಿಂದ ಕ್ಷಣ ಕ್ಷಣಕ್ಕೂ ತನು ಯಾತನೆ ಅನುಭವಿಸುತ್ತದೆ. ಪರಿಹಾರಕ್ಕಾಗಿ ಹೊರಗೆ ಹುಡುಕುತ್ತದೆ. ದೊರೆಯದೆ ಗುರುವಿನ ಹತ್ತಿರ ಬಂದಾಗ, ಗುರು ತನುವಿನಲ್ಲಿರುವ ಅರಿವು ತೋರಿ ಯಾತನೆ ದೂರ ಮಾಡುತ್ತಾನೆ. ಇದು ಗುರು ಶಿಷ್ಯ ಪರಂಪರೆ.

ಅರಿವು ತೋರುವ ನೆಪದಲ್ಲಿ ಗುರುವಾಗಿ, ಶಿಷ್ಯನಿಂದ ಭೂಮಿ, ಹೇಮ, ವಾಹನ ಪಡಿ ಪದಾರ್ಥಗಳನ್ನು ಬೇಡುವ ಭಿಕ್ಷುಕನಾಗಬಾರದು. ಅರಿವು ಬೇಡಲು ಬಂದ ಶಿಷ್ಯ ಗುರುವಿಗೆ ನೀಡಿ ದಾನಿಯೆಂದು ಬೀಗಿ ಸದಾ ಶಿಷ್ಯನಾಗಬಾರದು. ಗುರು ಶಿಷ್ಯನ ತನುವಿನಲ್ಲಿ ಅರಿವು ತೋರಬೇಕು. ಶಿಷ್ಯ ತನ್ನ ತನುವಿನಲ್ಲಿಯ ಅರಿವು ನೋಡಿ ಗುರುವಾಗಬೇಕು. ಗುರುಶಿಷ್ಯರಿಬ್ಬರೂ ಅರಿವಿನ ಸಂಗ ಮಾಡಿ ಸುಖಿಸಬೇಕು.

ಅರಿವು ತೋರಿದ ಗುರುವಿನ ತನುವೂ ಜಂಗಮವೇ. ಅರಿವುಂಡು ಅರಿವು ತೇಗಿದ ಶಿಷ್ಯನ ತನುವೂ ಜಂಗಮವೇ ! ಈ ಎರಡೂ ತನುಗಳಿಗೆ ಕಾಣುವ ತನುಗಳೆಲ್ಲ ಅರಿವಿನ ತನುಗಳೇ. ಜಗದಲ್ಲಿ ಮಾತೆಂಬ ಜ್ಯೋತಿರ್ಲಿಂಗವನ್ನುಸುರುವ ದಾಸೋಹದ ಅಂಗದ ಹೊರತು ಬೇರೊಂದಂಗವಿಲ್ಲ.

'ಮರ್ತ್ಯಲೋಕದ ಭಕ್ತರೆಲ್ಲ ಕ್ಷೇಮವೇ ಎಂದು ಬಸವಣ್ಣನವರನ್ನು ಕೇಳಲಾಗಿ ; ಶಿವಶಿವಾ ನಾನೊಬ್ಬನೇ ಭಕ್ತ ; ಮರ್ತ್ಯಲೋಕದಲ್ಲಿರುವವರೆಲ್ಲಾ ಜಂಗಮರೇ ! ಎಂದು ಹೇಳಿದ ಸಂಗನಬಸವಣ್ಣನಿಗೆ ಪ್ರಿಯವಾದ ಚಂದೇಶ್ವರ ಲಿಂಗವೆಂಬ ಅರಿವು ಸದಾ ಹಿಂಗದ ಭಾವ. ಎಂದು ಗುರು-ಶಿಷ್ಯ ಪರಂಪರೆಯ ಸಾರವನ್ನು ನುಲಿಯ ಚಂದಯ್ಯ ಶರಣರು ಮಡಿವಾಳಯ್ಯ ಶರಣರಿಗೆ ಬಿತ್ತರಿಸಿದ್ದಾರೆ.

□

# ಸರ್ವಾಂಗ ಲಿಂಗವೇ ಆದ ಅಂಗಕ್ಕೆ ಲಿಂಗ ಬೇಕೆ ?

**ಉತ್ತಮಾಂಗ, ಗಳ, ಕಕ್ಷೆ, ಕರಸ್ಥಳ, ಮುಖಸಜ್ಜೆ, ಅಮಳೋಕ್ಯ**
**ಅಕಟಕಟಾ ! ಭಿನ್ನ ವಾರ್ತೆಯ ಕೇಳಲಾಗದು**
**ಕೂಡಲಚನ್ನಸಂಗಯ್ಯ , ಸರ್ವಾಂಗಲಿಂಗವಲ್ಲದೇ ಕೇಳಲಾಗದು.**

**- ಚೆನ್ನಬಸವಣ್ಣ**

ಮನುಕುಲದ ಧರ್ಮವೇ ಅರಿವಿನ ಧರ್ಮ. ಅರಿವು ತನುವಿನಲ್ಲಿ ಬೇರ್ಪಡಿಸದಂತೆ ಬೆರೆತಿದೆ. ಚಿನ್ನದಲ್ಲಿ ಬಣ್ಣ ಬೆರೆತಂತೆ. ಅಕ್ಕಸಾಲಿಗ ಆಭರಣ ಕೆಡಿಸಿ ಮತ್ತೊಂದು ಆಭರಣ ಮಾಡಬಹುದು. ಚಿನ್ನದಲ್ಲಿ ಬೆರೆತ ಬಣ್ಣ ಕೆಡಿಸಲರಿಯ. ಹಾಗೆಯೇ ತನುವಿನ ಅರಿವು ಬಳಕೆಯಾಗದ ನಿಮಿತ್ತ ; ಹೊಳೆದಂತೆಲ್ಲ ಒಂದೆಡೆ ಸೇರಿ ಚರ್ಚಿಸುವುದು, ಬರೆದು ದಾಖಲಿಸುವುದು ರೂಢಿಯಲ್ಲಿ ಬಂತು. ಇದಕ್ಕೆ ಕಾರಣವಾದ ತನು ಮುಖ್ಯವೇ ಹೊರತು ಚರ್ಚಿಸುವ ಗುಂಪಾಗಲೀ, ಪುಸ್ತಕವಾಗಲೀ ಮುಖ್ಯವಲ್ಲ. ಅರಿವು ಅನಂತ. ಜಗದಗಲ ಮುಗಿಲಗಲ, ಪಾತಾಳ ಬ್ರಹ್ಮಾಂಡದಿಂದಲೂ ಅತ್ತತ್ತ. ಗಮನಕ್ಕೂ ಗೋಚರಕ್ಕೂ ಪ್ರಮಾಣಕ್ಕೂ ನಿಲುಕದ ಅರಿವು ತನುವಿನಲ್ಲಿ(ಕರಸ್ಥಲ) ಬಂದು (ಡಿಜಿಟಲ್) ಚುಳುಕಾಗಿದೆ. ಹೀಗೆ ತನುವಿನ ಅರಿವು ಗಮನಕ್ಕೆ ಬಂದಾಗ ಆ ಅರಿವಿಗೆ ಲಿಂಗ ಎಂದು ನಾಮಕರಣ ಮಾಡಿದರು. ಆ ಅರಿವಿನ ಆಚರಣೆಯಲ್ಲಿರುವವರಿಗೆ ಜಂಗಮ ಎಂದು ನಾಮಕರಣ ಮಾಡಿದರು. ಆ ಅರಿವಿಗೆ ಮಾರು ಹೋದವನನ್ನು ಭಕ್ತ ಎಂದು ಕರೆದರು. ಆ ಅರಿವಿನ ವಿಚಾರವನ್ನೇ ಸದಾ ಮೆಲುಕು ಹಾಕುವವನಿಗೆ ಪ್ರಸಾದಿ ಎಂದರು. ಅರಿವಿನ ಪಾನವೇ ಪಾದೋದಕವಾಯಿತು. ತನುವಿನ ತುಂಬಾ ತನ್ಮಯವಾದ ಅರಿವೇ ತಾನಾಗಿ, ಆ ಅರಿವಿನಲ್ಲಿ ಸದಾ ತನ್ಮಯನಾದವನಿಗೆ ಐಕ್ಯಸ್ಥಲಿ ಎಂದರು. ತನುವಿನಲ್ಲಿರುವ ಅರಿವೇ ತಾನಾದಾಗ ತನುವಿಗೆ ಆವರಿಸಿಕೊಂಡ ಅಜ್ಞಾನ ಸುಟ್ಟು ಭಸ್ಮವಾಯಿತು. ಸೂಜಿಯ ಮೊನೆ ಚುಚ್ಚಲೂ ಸಂದಿಲ್ಲದಂತೆ ಬೆರೆತ ಅರುವುಳ್ಳ ತನುವಿನ ಕಣಕಣವೂ (ಕಣ್ಣಾಯಿತು) ರುದ್ರಾಕ್ಷಿಯಾಯಿತು. ಹೀಗೆ ತನುವಿನ ತುಂಬಾ ತನ್ಮಯವಾದ ಅರಿವು ತಿಳಿಯಲು ಬಳಸಿದ ಸಂಜ್ಞಾ ಪದಗಳನ್ನೇ ವಸ್ತು (ಲಿಂಗ) ಮಾಡಿಕೊಂಡು ತಲೆಗೆ, ಕುತ್ತಿಗೆಗೆ, ಎಡಕ್ಕೆ, ಬಲಕ್ಕೆ ರೆಟ್ಟೆಗೆ, ಕಂಠದೊಳಗೆ ಧರಿಸುವುದೇ ? ಅಕಟಕಟಾ ಅಯ್ಯಯ್ಯೋ ಇಂತಹ ಭಿನ್ನ ವಾರ್ತೆಯನ್ನು ಕೇಳಲಾಗದು. ಅಂಗಕ್ಕೆ ಲಿಂಗವೆಂಬ ವಸ್ತುವನ್ನು ಧರಿಸಿದರೆ ಅಂಗ ಲಿಂಗವಾಗಬಲ್ಲುದೆ? ಸರ್ವಾಂಗವೇ (ಅರಿವಾದ) ಲಿಂಗವಾದ ಅಂಗವನ್ನು ಉತ್ತಮಾಂಗ, ಗಳ, ಕಕ್ಷೆ, ಕರಸ್ಥಳ, ಮುಖಸಜ್ಜೆ, ಅಮಳೋಕ್ಯ ಎಂದು ಭೇದಿಸಿ ಲಿಂಗ ಎಂಬ ವಸ್ತುವನ್ನು ಕಟ್ಟಬಹುದೇ ? ಗುರುಗಳಿಂದ ಕಟ್ಟಿಸಿಕೊಳ್ಳಬಹುದೇ? ಅಕಟಕಟಾ ಅಯ್ಯಯ್ಯೋ . ಸರ್ವಾಂಗವೂ (ಅರಿವು)ಲಿಂಗವೆಂದು ತಿಳಿಯದೆ ಕಟ್ಟಿಸಿಕೊಳ್ಳುವ ಕಟ್ಟುವ ಭಿನ್ನ ವಾರ್ತೆಯನ್ನು ಕೇಳಲಾಗದು ಕೇಳಲಾಗದು ಎಂದಿದ್ದಾರೆ ಮಹಾಜ್ಞಾನಿ ಚೆನ್ನಬಸವಣ್ಣನವರು.

□

# ತನುವಿನ ಅಜ್ಞಾನ ಕಳೆಯುವ ಸೂತ್ರ

ಲಿಂಗದ ಪೂರ್ವಾಶ್ರಯವ ಕಳೆದು,
ಇದು, ಪ್ರಾಣಲಿಂಗವೆಂದು ತೋರಬಂದನಯ್ಯಾ ಬಸವಣ್ಣನು !
ಲಾಂಛನದ ಪೂರ್ವಾಶ್ರಯವ ಕಳೆದು,
ಇದು, ಲಿಂಗ ಜಂಗಮವೆಂದು ತೋರಬಂದನಯ್ಯಾ ಬಸವಣ್ಣನು !
ಪ್ರಸಾದದ ಪೂರ್ವಾಶ್ರಯವ ಕಳೆದು,
ಇದು,ಪ್ರಸಾದವೆಂದು ಸಯವ ಮಾಡಿ ತೋರಬಂದನಯ್ಯಾ ಬಸವಣ್ಣನು!
ಇಂತು, ಲಿಂಗ ಜಂಗಮ ಪ್ರಸಾದದ ಪೂರ್ವಾಶ್ರಯವ ಕಳೆಯಲೆಂದು
ಮರ್ತ್ಯಕ್ಕೆ ಜನಿಸಿದನಯ್ಯಾ ಕೂಡಲ ಚೆನ್ನಸಂಗಯ್ಯನಲ್ಲಿ ಬಸವಣ್ಣನು.
–ಚೆನ್ನಬಸವಣ್ಣ

**ಲಿಂಗದ ಪೂರ್ವಾಶ್ರಯವ ಕಳೆದು:** ಪೂರ್ವ ಕಾಲದಿಂದಲೂ ಲಿಂಗವನ್ನು ವಸ್ತುವಾಗಿಸಿ ದೇವರೆಂದು ಭಾವಿಸಿ, ಕೊರಳಲ್ಲಿ, ರೆಟ್ಟೆಯಲ್ಲಿ, ಕಂಠದಲ್ಲಿ, ಎಡಬಲದಲ್ಲಿ ತಲೆಯಲ್ಲಿ ಹಾಗೂ ಎದೆಯ ಮೇಲೆ ಧರಿಸಿ, ಪೂಜಿಸಿ ಆರಾಧಿಸಿದ್ದಾರೆ. ಆ ಜಡವಸ್ತು ಭಿನ್ನವಾದರೆ ಕೆಲವರು ಪ್ರಾಣವನ್ನೂ ಕಳೆದುಕೊಂಡಿದ್ದಾರೆ. ಇದು ಹಿಂದಿನಿಂದ ಇಂದಿನವರೆಗಿದ್ದ ಸಂಪ್ರದಾಯ. ಪೂರ್ವ ಕಾಲದಲ್ಲಿಯೂ ಜ್ಞಾನಿಗಳು ತನುವಿನಲ್ಲಿ ತನ್ಮಯವಾದ ಅರಿವಿಗೆ ಲಿಂಗವೆಂದು ಕರೆದರು. ಜನ ಮರೆತು ಲಿಂಗವೆಂದು ಪೂಜಿಸಿದರು. ಈ ಲಿಂಗದ ಪೂರ್ವಾಶ್ರಯ (ಅಜ್ಞಾನ) ಕಳೆಯಲು ಮಹಾಜ್ಞಾನಿ ಬಸವಣ್ಣನವರು: ತನುವು, ತನುವಿನ ಪ್ರಾಣದಲ್ಲಿ ಬೇರ್ಪಡಿಸದಂತೆ ಬೆರೆತ ಅರಿವೇ ಪ್ರಾಣಲಿಂಗವೆಂದು ತೋರಿಸಿದರು !

**ಲಾಂಛನದ ಪೂರ್ವಾಶ್ರಯವ ಕಳೆದು:** ತನುವಿನ ಮೇಲೆ ಹೊದ್ದುಕೊಂಡ ಕಾವಿ ಲಾಂಛನವಲ್ಲ. ತನುವಿನ ಮೇಲೆ ಹೇರಿಕೊಂಡ ಲಿಂಗವೂ ಲಾಂಛನವಲ್ಲ. ಕಾವಿಯ ಪೂರ್ವಾಶ್ರಯ ನೂಲ ಮತ್ತು ನೂಲಿಗೆ ಹಾಕಿದ ಬಣ್ಣವೇ ಆಗಿದೆ. ಅದು ಎಂದೂ ಅರಿವಾಗಲಾರದು. ಹಾಗೆಯೇ ಲಿಂಗದ ಪೂರ್ವಾಶ್ರಯ ಕೇರು ಮತ್ತು ಕಲ್ಲು ಆಗಿದೆ. ಇನ್ನು ತನುವನ್ನು ಬಿಚ್ಚಿ ನೋಡಲು: ತನುವು, ತನುವಿನ ಪ್ರಾಣ, ಪ್ರಾಣ ಬೆರೆತ ಅರಿವೇ ಆಗಿದೆ. ತನುವು ಅರಿವಿನ ಲಾಂಛನ ! ಈ ಲಾಂಛನದಿಂದ ಚಿನ್ನವೆಂಬ ಲೋಹದಲ್ಲಿ ಬೆರೆತ ಹಳದಿ ಬಣ್ಣ ನೋಡ ಬಹುದು. ವಜ್ರವೆಂಬ ಹೊಳೆಯುವ ಗಾಜು ನೋಡಬಹುದು. ತನ್ನಂತೆ ಇರುವ ತನುವಿನ ಚರ್ಮ ನೋಡಬಹುದು. ಚರ್ಮದೊಳಗಿರುವ ಮಾಂಸ, ರಕ್ತ, ಎಲುಬು, ಮಜ್ಜ, ಮೇದಸ್ಸು ನೋಡಬಹುದು. ನೀರಿನಿಂದ ಗಟ್ಟಿಗೊಂಡು ಥಳ ಥಳ ಹೊಳೆವ ಮುತ್ತು ಮಾಣಿಕ್ಯ ಸ್ಪಟಿಕ ನೋಡಬಹುದು. ಆಕಾಶದೆತ್ತರಕ್ಕೂ ಬೆಳೆದ ಗಿಡಮರಗಳನ್ನು ನೋಡಬಹುದು. ಪ್ರಾಣಿ ಪಶು ಪಕ್ಷಿ ಸಸ್ಯ ಸಂಕುಲಗಳನ್ನು ನೋಡಬಹುದು. ನೋಡಿ, ಮುಟ್ಟಿ, ಕೇಳಿ, ರುಚಿಸಿ, ಹೂ ಬೀರುವ ಕಂಪು ವಾಸಿಸಿ ಆನಂದ ಪಡು ಎಂದು ಅವು ಥಳ ಥಳಿಸಿ ನಳನಳಿಸಿ ಹೊಳೆಯುತ್ತವೆ. ಆದರೆ ತಾನು ತನುವಿನ ಮೇಲೆ ಹೇರಿಕೊಂಡ ಪೂರ್ವಾಶ್ರಯದ ಅಜ್ಞಾನದಿಂದ ನೋಡುತ್ತಾನೆ. ಯುದ್ಧ ಮಾಡಿ ಯಾದರೂ ಕೊಂದಾದರೂ ವಸ್ತುಗಳನ್ನು ಸಂಗ್ರಹಿಸುತ್ತಾನೆ. ಸಿಗದಿದ್ದರೆ ವ್ಯಾಕುಲಗೊಳ್ಳುತ್ತಾನೆ. ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ದ್ವೇಷಿಸುತ್ತಾನೆ. ನೋಡಿ, ಕೇಳಿ, ವಾಸಿಸಿ, ಸ್ಪರ್ಶಿಸಿ, ರುಚಿಸಿ ಆನಂದಪಡಬೇಕಾದ

ವಸ್ತುಗಳ ಮೇಲೆ ಮೋಹಗೊಂಡು ಒಬ್ಬ ಹಗಲು ರಾತ್ರಿ ದುಡಿದು ಸಂಗ್ರಹಿಸುತ್ತಾನೆ. ಮತ್ತೊಬ್ಬ ಕಳುವು ಮಾಡುತ್ತಾನೆ. ಇವರಿಬ್ಬರ ಉದ್ದೇಶ ವಸ್ತುಗಳನ್ನು ಸಂಗ್ರಹಿಸುವುದಲ್ಲವೇ ? ಇವರಿಬ್ಬರೂ ವಸ್ತುಗಳನ್ನು ಅರಿವಿನಿಂದ ನೋಡಲಿಲ್ಲ ಎಂದಾಗಲಿಲ್ಲವೇ ? ಅರಿವಿನ ಲಾಂಛನವಾದ ತನು ಜಡವಸ್ತುಗಳಿಗೆ ಬೆಲೆ ಕಟ್ಟಿ ಪೂರ್ವಾಶ್ರಯದ ಅಜ್ಞಾನದಿಂದ ಮಾರು ಹೋಯಿತು. ವಸ್ತುಗಳಿಗಾಗಿ ಒಬ್ಬ ಕಳ್ಳನೆಂದು ಕರೆಯಿಸಿಕೊಂಡ ಮತ್ತೊಬ್ಬ ಪ್ರಾಮಾಣಿಕನೆಂದು ಕರೆಯಿಸಿಕೊಂಡ. ಇವರಿಬ್ಬರ ಪೂರ್ವಾಶ್ರಯ ಒಂದೇ, ಅದು ಅಜ್ಞಾನ. ಬಸವಣ್ಣನವರು ತನುವೆಂಬ ಜ್ಞಾನ ಲಾಂಛನಕ್ಕೆ ಪೂರ್ವ ಕಾಲದಿಂದಲೂ ಆವರಿಸಿ ಕೊಂಡಿದ್ದ ಅಜ್ಞಾನವೆಂಬ ಪೊರೆಯನ್ನು ಕಿತ್ತೆಸೆಯಲು ಬಂದವರು. ತನುವಿನ ತುಂಬ ತನ್ಮಯವಾದ ಜ್ಞಾನವನ್ನು (ಲಿಂಗ) ಅರಿವೆಂಬ ಜಂಗಮನಿಂದ ತಾನೇ ನೋಡಿ ಕೊಳ್ಳುವ ಬಗೆಯನ್ನು ತೋರುವುದಕ್ಕಾಗಿಯೇ ಜನ್ಮವೆತ್ತಿದವರು.

**ಪ್ರಸಾದದ ಪೂರ್ವಾಶ್ರಯವ ಕಳೆದು:** ಕಾಯಿ, ಕಜ್ಜಾಯ, ನೈವೇದ್ಯ ಪ್ರಸಾದವಲ್ಲ. ಕಾವಿಧಾರಿ ಗುರುಗಳು ಕೊಡುವ ಪದಾರ್ಥವೂ ಪ್ರಸಾದವಲ್ಲ. ಪೀಠಾಧಿಕಾರಿ,ಧರ್ಮಾಧಿಕಾರಿಗಳು ಕೊಡುವ ತಿಂಡಿ ತೀರ್ಥಗಳೂ ಪ್ರಸಾದವಲ್ಲ. ಇವು ಹಳಸುತ್ತವೆ. ತಿಂದರೆ ಮಲವಾಗಿ ಹೊರಬರುತ್ತದೆ. ಪೂರ್ವ ಕಾಲದಿಂದಲೂ ಇವುಗಳನ್ನೇ ಪ್ರಸಾದವೆಂದು ಹೇಳುತ್ತಾ ಬಂದಿರುವುದರಿಂದ ಪ್ರಸಾದವೆಂಬ ಶಬ್ದ ರೋಗ ಇವುಗಳನ್ನು ಆವರಿಸಿಕೊಂಡಿದೆ. ಇವುಗಳನ್ನು ತಿನ್ನುವುದರಿಂದ ತನುವು ಬಲಿಯಬಹುದು ಆದರೆ ತಿಳಿಯಲರಿಯದು. ತನುವಿನಲ್ಲಿ ಇವುಗಳನ್ನು ನೋಡುವ ಕಣ್ಣಿದೆ. ಕೊಡುವವರನ್ನು ಪದಾರ್ಥವನ್ನೂ ನೋಡುವ ಅರಿವಿದೆ. ಪದಾರ್ಥ ತಿಂದರೆ ಅಜ್ಞಾನದಿಂದ ಮುಕ್ತನಾಗಲಾರ. ತಿಳಿದರೆ ಅಜ್ಞಾನದಿಂದ ಮುಕ್ತಿ, ಪದಾರ್ಥವನ್ನು ಪ್ರಸಾದವೆಂದು ತಿಳಿಯುವ ಅಜ್ಞಾನ ತನ್ನಲ್ಲಿ ಪೂರ್ವ ಕಾಲದಿಂದಲೂ ಆಶ್ರಯಿಸಿಕೊಂಡಿದೆ. ಪದಾರ್ಥವನ್ನು ಪದಾರ್ಥವೆಂದೇ ತಿಳಿಯುವ ಜ್ಞಾನ ತನುವಿನಲ್ಲಿ ತನ್ಮಯವಾಗಿದೆ. ಅದು ಹೀಗೆ ತನ್ಮಯವಾದ ಜ್ಞಾನ ತೋರುವವನೇ ನಿಜವಾದ ಗುರು. ಆತನೇ ಬಸವಣ್ಣ!

ಹಳಸುವ ಪದಾರ್ಥವನ್ನು ಕೊಟ್ಟು ಧನ್ಯತಾ ಭಾವದಿಂದ ಗುರುವೆನ್ನಿಸಿಕೊಂಡು ಮೆರೆಯಬೇಕಿಲ್ಲ. ಅದು ತನ್ನ ಪ್ರೌಢಿಕೆಕ್ಕೂ ಅಲ್ಲ. ಪದಾರ್ಥವನ್ನು ಪ್ರಸಾದವೆಂದು ಕೊಟ್ಟು ತನಗೆ ತಾನಲ್ಲದೆ ಇತರರನ್ನು ಮೋಸ ಮಾಡುವ ಪಾಖಂಡಿ. ತನುವಿನಲ್ಲಿ ತನ್ಮಯವಾದ ಅರಿವೆಂಬ ಪ್ರಸಾದವನ್ನು ತನಗೇ ತೋರಿ ತನ್ನ ಪ್ರಸಾದವನ್ನು ತನಗೇ ಉಣ ಬಡಿಸುವುದಕ್ಕಾಗಿಯೇ ಮರ್ತ್ಯಕ್ಕೆ ಜನಿಸಿದನಯ್ಯಾ ಬಸವಣ್ಣ! ಎಂದಿದ್ದಾರೆ ಚೆನ್ನಬಸವಣ್ಣ. ಲಿಂಗ,ಜಂಗಮ, ಪ್ರಸಾದದ ಪೂರ್ವಾಶ್ರಯವನ್ನು ಬಸವಾದಿ ಶರಣರು ನಷ್ಟ ಮಾಡಿಕೊಂಡರು. ತಾವೇ ಲಿಂಗವಾದರು.ತಾವೇ ಜಂಗಮವಾದರು. ತಾವೇ ಪ್ರಸಾದಿಯಾದರು. ಲಿಂಗ,ಜಂಗಮ,ಪ್ರಸಾದಿಯಾಗುವ ಬಗೆಯನ್ನು ತನುವಿನಲ್ಲಿ ತನ್ಮಯವಾದ ಅರಿವನ್ನು ಬಳಕೆ ಮಾಡಿಕೊಂಡು ಸರಳವಾಗಿ ಸರ್ವರಿಗೂ ತೋರಿದರು. ಗುರುವಾಗಿ ತೋರಲಿಲ್ಲ. ಲಿಂಗವಾಗಿ ತೋರಲಿಲ್ಲ. ಜಂಗಮವಾಗಿಯೂ ತೋರಲಿಲ್ಲ. ತೋರುವ ತನುವಿನ ಪೂರ್ವಾಶ್ರಯವ ಕಳೆದು ಆ ತನುವನ್ನೇ ಲಿಂಗ ಜಂಗಮ ಪ್ರಸಾದದ ತನುವಾಗಿಸಿದರು.

□

# ತನುವಿನ ಪೂರ್ವಾಶ್ರಯ ಕಳೆದಾತನೇ ಜ್ಞಾನಿ

ಲಿಂಗದ ಪೂರ್ವಾಶ್ರಯವ ಕಳೆಯಬಲ್ಲಾತನೆ ಭಕ್ತ
ಗುರುವಿನ ಪೂರ್ವಾಶ್ರಯವ ಕಳೆಯಬಲ್ಲಾತನೆ ಶಿಷ್ಯ
ಪ್ರಸಾದದ ಪೂರ್ವಾಶ್ರಯವ ಕಳೆಯಬಲ್ಲಾತನೆ ಪ್ರಸಾದಿ
ಇಂತಿ ತ್ರಿವಿಧದ ಪೂರ್ವಾಶ್ರಯವ ಕಳೆಯುಬಲ್ಲರೆ
ಕೂಡಲಸಂಗಯ್ಯನಲ್ಲಿ ಲಿಂಗೈಕ್ಯವು

- ಚೆನ್ನಬಸವಣ್ಣ

**ಲಿಂಗದ ಪೂರ್ವಾಶ್ರಯವ ಕಳೆಯಬಲ್ಲಾತನೆ ಭಕ್ತ :**

ತನುವಿನಲ್ಲಿ ಎಲ್ಲ ವಸ್ತುಗಳ ಸತ್ಯ ತಿಳಿಯುವ ಶಕ್ತಿಯಿದೆ, ಚೇತನವಿದೆ, ಅರಿವಿದೆ. ಹಾಗೆಯೇ ವಸ್ತುಗಳನ್ನು ವಿಪರೀತವಾಗಿ ತಿಳಿಯುವ ಅಜ್ಞಾನವೂ ಇದೆ. ತನುವನ್ನು ಹೆಣ್ಣೆಂದು ಗಂಡೆಂದು ತಿಳಿದು ಮೋಹಿಸುವ ಅಜ್ಞಾನ. ಜಾತಿ-ಮತ ಪಂಥ ಪಂಡಿತ ಪಾಮರನೆಂದು ತಿಳಿದು ಹೊಗಳುವ ಹೀಯ್ಯಾಳಿಸುವ ಅಜ್ಞಾನ. ಲೋಹದಲ್ಲಿಯ ಬಣ್ಣ ಕಂಡು ವಿವಿಧ ಆಭರಣಗಳಿಗೆ ಮರಳಾಗುವ ಅಜ್ಞಾನ. ದೊರೆಯದಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುವ ಅಜ್ಞಾನ.

ಹೀಗೆ ಪೂರ್ವದಿಂದಲೂ ತನುವಿನಲ್ಲಿ ಅಜ್ಞಾನ ಆಶ್ರಯ ಪಡೆದಿದೆ. ನೋಡುವ ಕಣ್ಣಿನಲ್ಲಿ ಕೇಳುವ ಕಿವಿಯಲ್ಲಿ ಚರ್ಮದಲ್ಲಿ ಅಜ್ಞಾನ ಆಶ್ರಯ ಪಡೆದು ಸತ್ಯ ಗೋಚರಿಸದಂತಾಗಿದೆ. ವಾಸಿಸುವ ಮೂಗಿನಲ್ಲಿ, ರುಚಿಸುವ ನಾಲಗೆಯಲ್ಲಿ ಅಜ್ಞಾನ ಆಶ್ರಯ ಪಡೆದು ಸತ್ಯ ಗೋಚರಿಸದಂತಾಗಿದೆ. ತನುವಿನ ಬಯಕೆಗಳನ್ನು ಅದುಮಿಟ್ಟು ಮನದಲ್ಲಿ ಸುಖಪಡುವವನು ಉತ್ತಮನಾಗಿದ್ದಾನೆ. ತನುವಿನ ಬಯಕೆಗಳಿಗನುಗುಣವಾಗಿ ಭೋಗಿಸುವವನು ಕಳ್ಳ ವಿಷಯಲಂಪಟ ಹಾದರಿಗ ಭ್ರಷ್ಟ ಲಂಚಕೋರನಾಗಿದ್ದಾನೆ. ಉತ್ತಮ ಮತ್ತು ಅಧಮ ಎನ್ನುವುದು ತನುವಿಗಂಟಿದ ಪೂರ್ವಾಶ್ರಯಗಳೇ ಆಗಿವೆ. ಇವುಗಳನ್ನು ತುಲನಾತ್ಮಕವಾಗಿ ನೋಡಿದರೆ ಸತ್ಯ ಗೋಚರಿಸುತ್ತದೆ. ಉದಾ: ಆಭರಣಗಳ ಮೂಲ, ಚಿನ್ನ. ಚಿನ್ನದ ಮೂಲ ಹಳದಿ ಬಣ್ಣವುಳ್ಳ ಲೋಹ. ಹಳದಿ ಲೋಹ ಎನ್ನುವುದೇ ಜ್ಞಾನ (ಲಿಂಗ) ಇದರಲ್ಲಿ ಬದಲಾವಣೆ ಆಗುವುದೇ ಇಲ್ಲ. ಲೋಹದಿಂದ ಕಿರೀಟ, ಕಡಗ, ವಂಕಿ, ನಾಗರ ನೆಕಲಿಸ್ ಮೂಗತಿ, ಬೆಂಡೋಲೆ ಮುಂತಾದ ಹೆಸರಿನ ಆಭರಣಗಳನ್ನು ಮಾಡಿ ಧರಿಸಿಕೊಂಡು ಸುಖ ಅನುಭವಿಸಿದ್ದು ಮನ. ಈ ಸುಳ್ಳು ಸುಖಕ್ಕಾಗಿ ರಾಜ ಮತ್ತೊಬ್ಬ ರಾಜನನ್ನು ಕೊಂದ, ಕಡಗದ ಆಸೆಗಾಗಿ ವೀರ ಮತ್ತೊಬ್ಬ ವೀರನನ್ನು ಕೊಂದ. ಆಭರಣಗಳ ಸಂಗ್ರಹಕ್ಕಾಗಿ ಜ್ಞಾನ ತನುವನ್ನೇ ದುರ್ಬಳಕೆ ಮಾಡಿಕೊಂಡ ಮನವೆಂಬ ಅಜ್ಞಾನವು ಪೂರ್ವ ಕಾಲದಿಂದಲೂ ತನುವನ್ನು ಆಶ್ರಯಿಸಿಕೊಂಡಿದೆ.

ಹೀಗೆ ಆಶ್ರಯಿಸಿಕೊಂಡ ಅಜ್ಞಾನವೂ ತನುವಿನಲ್ಲಿದೆ, ಇದೆಲ್ಲವನ್ನೂ ತಿಳಿಯುವ ಜ್ಞಾನವೂ ತನುವಿನಲ್ಲಿದೆ. ಇದನ್ನು ತುಲನಾತ್ಮಕವಾಗಿ ನೋಡಿ ನಿರ್ಧರಿಸಿ ಆವರಿಸಿಕೊಂಡ ಅಜ್ಞಾನ(ಮನ) ಕಳೆಯಬಲ್ಲ ಭಕ್ತನೂ ತನುವಿನಲ್ಲಿದ್ದಾನೆ. ಜ್ಞಾನಿ ತಾನೆ, ಆ ಜ್ಞಾನಕ್ಕೆ ಪೂರ್ವದಿಂದಲೂ ಆಶ್ರಯ ಪಡೆದ ಅಜ್ಞಾನ ಕಳೆಯಬಲ್ಲ ಭಕ್ತನೂ ತಾನೆ. ಈತ ಮಾತ್ರ ನಿಜಭಕ್ತ ! ಉಳಿದವ ವೇಷಧಾರಿ ಭಕ್ತ !!

**ಗುರುವಿನ ಪೂರ್ವಾಶ್ರಯವ ಕಳೆಯಬಲ್ಲಾತನೆ ಶಿಷ್ಯ :** ಅರಿವೇ ಗುರು. ಆ ಗುರು ಸಕಲ

ತನುವಿನಲ್ಲಿ ತನ್ಮಯವಾಗಿದ್ದಾನೆ. ಅರಿವನ್ನು ಭೋದಿಸುವುದಕ್ಕಾಗಿ ಗುರುವು ವೇಷ ಧರಿಸಿಕೊಂಡು ಶಿಷ್ಯರನ್ನು ಮಾಡಿಕೊಳ್ಳುತ್ತಾನೆ. ಮಠ ಪೀಠ ರಚಿಸಿಕೊಂಡು ಶಿಷ್ಯರಿಗೆ ದೀಕ್ಷೆ ಕೊಡುತ್ತಾನೆ. ಶಾಲಾ ಕಾಲೇಜು, ಪ್ರಸಾದ ನಿಲಯ ನಿರ್ಮಿಸಿ ನಿತ್ಯ ಅನ್ನದಾನ ಮಾಡುತ್ತಾನೆ. ಖರ್ಚುವೆಚ್ಚಕ್ಕಾಗಿ ಪಟ್ಟಿ ಎತ್ತುತ್ತಾನೆ.

ಗುರುವಿನ ಸಮಾಧಿ ಕಟ್ಟಿ ಜಾತ್ರೆ ಪಲ್ಲಕ್ಕಿ ಉತ್ಸವಗಳನ್ನು ಮಾಡುತ್ತಾನೆ. ಇಂತಹ ಗುರುವು ಸದಾ ಗುರುವಾಗಿರುತ್ತಾನೆ. ಶಿಷ್ಯ ಸದಾ ಶಿಷ್ಯನಾಗಿರುತ್ತಾನೆ. ತನ್ನಂತೆ ತನುವುಳ್ಳಾತನೊಬ್ಬ ತನಗೆ ಶಿಷ್ಯ . ತಾನು ಗುರು !

ಶಿಷ್ಯನನ್ನು ತನ್ನಂತೆ ಗುರುವಾಗಿಸುವ ಧೈರ್ಯ ವೇಷದ ಗುರುವಿಗಿಲ್ಲ. ಬೆಳಗುವ ದೀಪ ಬತ್ತಿಯನ್ನು ಚುಂಬಿಸಿ ತನ್ನಂತೆ ಬೆಳಗಿಸುತ್ತದೆ. ಬೆಳಗಿದ ಬತ್ತಿ ಶಿಷ್ಯನೆನ್ನಲಿಲ್ಲ. ಬೆಳಗುವ ದೀಪ ಗುರುವೆನ್ನಲಿಲ್ಲ. ಪೀಠದ ಮೇಲೆ ಕುಳಿತು ವೇದ ಶಾಸ್ತ್ರ ಉಪನಿಷತ್ತು ಪಠಣ ಮಾಡಿ ಗುರು ಎಂದು ಕರೆಯಿಸಿಕೊಳ್ಳುವುದು. ಇತರರನ್ನು ಶಿಷ್ಯರೆಂದು ಕರೆಯುವುದು ತನುವಿಗಂಟಿದ ಮಹಾರೋಗ ; ಪೂರ್ವ ಕಾಲದಿಂದಲೂ ಈ ರೋಗ ತನುವನ್ನು ಆಶ್ರಯಿಸಿಕೊಂಡಿದೆ. ಗುರುವಿನ ವೇಷದ ಅಜ್ಞಾನದ ಈ ಗುರುತನವನ್ನು ತುಲನೆ ಮಾಡಿ ಶಿಷ್ಯನಾಗಿ ತಾನೇ ಕಳೆದುಕೊಳ್ಳಬೇಕು. ತನುವಿನಲ್ಲಿ ಅರಿವೆಂಬ ಗುರುವಿದ್ದಾನೆ. ನಾನೇ ಗುರುವೆಂಬ ಅಜ್ಞಾನವೂ ಇದೆ. ಇವೆರಡನ್ನೂ ತುಲನೆ ಮಾಡಿ ನೋಡುವ ಶಿಷ್ಯನೂ ಇದ್ದಾನೆ. ಅವನು ಮಾತ್ರ ಗುರುವಿನ ಪೂರ್ವಾಶ್ರಯ ಕಳೆದು ಶಿಷ್ಯನಾಗಬಲ್ಲ. ಈತ ಮಾತ್ರ ನಿಜ ಶಿಷ್ಯ . ಉಳಿದವ ವೇಷಧಾರಿ ಶಿಷ್ಯ .

**ಪ್ರಸಾದದ ಪೂರ್ವಾಶ್ರಯವ ಕಳೆಯಬಲ್ಲಾತನೇ ಪ್ರಸಾದಿ. ಇಂತೀ ತ್ರಿವಿಧದ ಪೂರ್ವಾಶ್ರಯವ ಕಳೆಯಬಲ್ಲರೆ, ಕೂಡಲ ಚೆನ್ನಸಂಗಯ್ಯನಲ್ಲಿ ಲಿಂಗೈಕ್ಯ:**

**ಪ್ರಸಾದಿ :** ನೋಡುವ ಕಣ್ಣಿನ ಅಜ್ಞಾನ ಕಳೆದು ಅರಿವಿನ ರುಚಿ ಪಾನ ಮಾಡುವವನೇ ಪ್ರಸಾದಿ. ಕೇಳುವ ಕಿವಿಯ ಅಜ್ಞಾನ ಕಳೆದು ಶಬ್ದದ ರುಚಿ ಪಾನ ಮಾಡುವವನೇ ಪ್ರಸಾದಿ. ಚರ್ಮದ ಅಜ್ಞಾನ ಕಳೆದು ಸ್ಪರ್ಶದ ರುಚಿಯ ಪಾನ ಮಾಡುವವನೇ ಪ್ರಸಾದಿ. ನಾಲಿಗೆಯ ಅಜ್ಞಾನ ಕಳೆದು ಪ್ರಸಾದದ ರುಚಿಯ ಸವಿಯುವವನೇ ಪ್ರಸಾದಿ. ಮೂಗಿನ ಅಜ್ಞಾನ ಕಳೆದು ಪರಿಮಳದ ರುಚಿಯ ವಾಸಿಸುವವನೆ ಪ್ರಸಾದಿ. ಜ್ಞಾನ(ಲಿಂಗ)ಕ್ಕೆ ಆವರಿಸಿಕೊಂಡ ಅಜ್ಞಾನವನ್ನು ತಿಳಿಯಬಲ್ಲ ಭಕ್ತನಾಗಿ ಲಿಂಗದ (ಜ್ಞಾನದ) ಪೂರ್ವಾಶ್ರಯವ ಕಳೆದುಕೊಳ್ಳಬೇಕು. ಅರಿವೆಂಬ ಗುರುವಿಗೆ ಆವರಿಸಿಕೊಂಡ ಅಜ್ಞಾನವನ್ನು ತಿಳಿಯಬಲ್ಲ ಶಿಷ್ಯನಾಗಿ ಗುರುವಿನ ಪೂರ್ವಾಶ್ರಯ ಕಳೆಯಬೇಕು. ಪ್ರಸಾದಕ್ಕೆ ಆವರಿಸಿಕೊಂಡ ಅಜ್ಞಾನವನ್ನು ತಿಳಿಯಬಲ್ಲ ಪ್ರಸಾದಿಯಾಗಿ ಪ್ರಸಾದದ ಪೂರ್ವಾಶ್ರಯ ಕಳೆಯಬೇಕು. ಹೀಗೆ ಲಿಂಗ, ಗುರು, ಪ್ರಸಾದವೆಂಬ ಮೂರು ವಿಧದ ಅರಿವಿಗೆ ಆವರಿಸಿಕೊಂಡ ಅಜ್ಞಾನ ತಿಳಿಯಬಲ್ಲಾತನೆ ಮಹಾಜ್ಞಾನಿ. ಆ ಜ್ಞಾನ ತಿಳಿಯ ಹೋದ ಭಕ್ತ , ಶಿಷ್ಯ , ಪ್ರಸಾದಿ ಮಹಾಜ್ಞಾನದಲ್ಲಿಯೇ ಲಿಂಗೈಕ್ಯ ಎಂದಿದ್ದಾರೆ ಚೆನ್ನಬಸವಣ್ಣನವರು.

□

# ಅರಿವಿಗೆ ಶರಣರು ಹೋದವರು

**ಗುರುವಾದರೆ ಲಿಂಗವನೆತ್ತ ಬಲ್ಲ ?**
**ಜಂಗಮನಾದರೆ ಪ್ರಸಾದವನೆತ್ತ ಬಲ್ಲ ?**
**ಇದು ಕಾರಣ,**
**ಕೂಡಲ ಚೆನ್ನಸಂಗಮದೇವಯ್ಯನೆತ್ತ ಬಲ್ಲ ಬಸವಣ್ಣನ ?**
**- ಚೆನ್ನಬಸವಣ್ಣ**

ಗುರುವು ತಾನೆ, ಲಿಂಗವೂ ತಾನೇ, ಜಂಗಮವೂ ತಾನೇ, ಪ್ರಸಾದವು ಕೂಡಾ ತಾನೇ ಆಗಿದ್ದರೂ ತಿಳಿದುಕೊಳ್ಳಬೇಕೆಂಬ ಹಸಿವು ಇಲ್ಲದ ನಿಮಿತ್ತ ಆಯಾ ಶಬ್ದಗಳ ಪಾತ್ರದಲ್ಲಿ ಕಾಣಿಸಿಕೊಂಡು, ಸುಖಪಡುವ ವಂಚನೆಯ ಹುದುಲಿನಲ್ಲಿ ತನಗರಿಯದಂತೆ ತಾನೇ ಸಿಲುಕಿಕೊಂಡಿದ್ದಾನೆ.

**ಗುರುವಾದರೆ ಲಿಂಗವನೆತ್ತಬಲ್ಲ ?** : ಚೆನ್ನಬಸವಣ್ಣನವರು ಈ ವಚನದ ಸಾಲಿನಲ್ಲಿ ಗುರುವನ್ನು ನಿಂದಿಸಿಲ್ಲ. ಗುರುವೇಷದ ತನುವಿನ ಮೇಲೆ ಅಪಾರ ಕಳಕಳಿ ಅವರಿಗೆ. ಗುರುವೂ ತನುವುಳ್ಳವನೇ, ಭಕ್ತನೂ ತನುವುಳ್ಳವನೇ. ಭಕ್ತನಲ್ಲಿರುವ (ಅರಿವು) ಲಿಂಗ ಗುರುವಿಗೆ ಕಾಣಲಿಲ್ಲ. ಆ ಅರಿವೇ ಗುರು. ವೇಷಧಾರಿ ಗುರು ಆ ದಿಟದ ಗುರುವಿಗೆ ಆಶೀರ್ವದಿಸಬಹುದೆ ? ಭಕ್ತನನ್ನು ಕೆಳಗೆ ಕೂಡಿಸಿ ತಾನು ಮೇಲೆ ಕೂಡಬಹುದೆ ? ಭಕ್ತ ನೇಮಕ ಮಾಡಿದ್ದರಿಂದ ಗುರುವಾದ.

ಅರಿವೇ ಗುರು. ಆ ಅರಿವೆಂಬ ಗುರುದೇವನೇ ಮಹಾದೇವ, ಆ ಅರಿವೆಂಬ ಗುರುದೇವನೇ ಸದಾಶಿವ, ಆ ಅರಿವೆಂಬ ಗುರುದೇವನೇ ಸಾಕ್ಷಾತ್ ಪರಬ್ರಹ್ಮ ಎಂಬುದನ್ನು ಕಂಡುಕೊಂಡವ ನಿಜ ಗುರು. ವೇಷದ ಗುರು ಲಿಂಗವನೆತ್ತ ಬಲ್ಲ? ಲಿಂಗ (ಅರಿವು) ಬಲ್ಲಡೆ ಸಕಲ ತನುಗಳೂ ಲಿಂಗಮಯ; ಗುರುಮಯ !

**ಜಂಗಮನಾದರೆ ಪ್ರಸಾದವನೆತ್ತ ಬಲ್ಲ?** : ಪ್ರಸಾದ ಶಬ್ದವನ್ನು ಸಕಲರೂ ತಿಳಿಯಬೇಕೆಂಬ ಕಳಕಳಿ ಶರಣರಿಗಿರುವುದರಿಂದ ಈ ಸೂತ್ರ ರಚಿಸಿದ್ದಾರೆ. ಪದಾರ್ಥ ಪ್ರಸಾದವಲ್ಲ. ಇದು ಹಳಸುತ್ತದೆ. ಇದರ ರುಚಿ ಜಂಗಮನಿಗೂ ಗೊತ್ತು ಭಕ್ತನಿಗೂ ಗೊತ್ತು. ರುಚಿಗಾಗಿ ತನುವಿನೊಂದಿಗೆ ಸಂಕಟಪಡುವ ನಾಲಿಗೆ, ರೂಪಕ್ಕಾಗಿ ತನುವಿನೊಂದಿಗೆ ಸಂಕಟಪಡುವ ಕಣ್ಣು, ಸ್ಪರ್ಶಕ್ಕಾಗಿ ಸಂಕಟ ಪಡುವ ಚರ್ಮ, ವಾಸನೆಗಾಗಿ ಸಂಕಟ ಪಡುವ ಮೂಗು ಹಾಗೂ ಶಬ್ದಕ್ಕಾಗಿ ತನುವನ್ನು ಸಂಕಟಕ್ಕೀಡು ಮಾಡುವ ಕಿವಿ ಈ ಐದೂ ಅಜ್ಞಾನಗಳನ್ನು ಪ್ರಸಾದವಾಗಿ ಆನಂದದಿಂದ ಸ್ವೀಕರಿಸುವವನೇ ಜಂಗಮ. ರುಚಿ, ರೂಪ, ಶಬ್ದ, ವಾಸನೆ, ಸ್ಪರ್ಷಕ್ಕಾಗಿ ತನು ಸಂಕಟಕ್ಕೀಡಾಗದಂತೆ ವೈಜ್ಞಾನಿಕವಾಗಿ ಇವುಗಳ ಮಾಹಿತಿ ನೀಡಬಲ್ಲಾತನೇ ಜಂಗಮ.

**ಇದು ಕಾರಣ ಕೂಡಲಚೆನ್ನಸಂಗಮದೇವಯ್ಯಾ ನೆತ್ತಬಲ್ಲ ಬಸವಣ್ಣನ ?**: ಬಸವಣ್ಣ ತನುವಿನಲ್ಲಿ ತನ್ಮಯವಾದ ಜ್ಞಾನಕ್ಕೆ ಭಕ್ತಿ ಮಾಡಿದವರು. ಆ ಮಹಾ ಜ್ಞಾನಕ್ಕೆ ಭಕ್ತಿ ಮಾಡಿ, ಭಕ್ತಿ ಭಂಡಾರಿ ಎನ್ನಿಸಿಕೊಂಡವರು. ಜ್ಞಾನದ ಖಣಿ. ಜ್ಞಾನ ಭಂಡಾರವೇ ತಾವಾದವರು. ಇಂತಹ ಬಸವಣ್ಣನವರನ್ನು ನಾನೆತ್ತ ಬಲ್ಲೆ?

ಜಗದಗಲ ಮುಗಿಲಗಲ ಪಾತಾಳದಿಂದತ್ತತ್ತ , ಬ್ರಹ್ಮಾಂಡದಿಂದತ್ತತ್ತ ನಿಂತು ಮಹಾಜ್ಞಾನದ

ವಿರಾಟ ಸ್ವರೂಪವೇ ತಾವಾದವರು. ಇಂತಹ ಬಸವಣ್ಣನವರನ್ನು ನಾನೆತ್ತ ಬಲ್ಲೆ ?ಎಂದು ಚೆನ್ನಬಸವಣ್ಣ ಬಸವಣ್ಣನವರನ್ನು ಕೊಂಡಾಡಿದರೆ, ಬಸವಣ್ಣ ಚೆನ್ನಬಸವಣ್ಣ ನವರನ್ನು ಜ್ಞಾನಚಕ್ರವರ್ತಿ ಎಂದು ಕೊಂಡಾಡಿದ್ದಾರೆ. ಇದು ಗುರುವಾಗಿ ಲಿಂಗವಾದವರ ಇರುವು. ಜಂಗಮವಾಗಿ ಪ್ರಸಾದಿಯಾದವರ ಇರುವು. ತನುವಿನಲ್ಲಿ ತನ್ಮಯವಾದ ಅರಿವಿಗೆ ಶರಣು ಹೋದ ಶರಣರ ಇರುವು.

□

# ಕಲ್ಲು ಹಿಡಿದು ಪೂಜಿಸಿದರೆ ಜ್ಞಾನಿಯಾಗಲು ಸಾಧ್ಯವೆ?

**ಕಲ್ಲು ಹಿಡಿದು ಅಲ್ಲಮನ ನೋಡುವೆವೆಂಬವರ ಖುಲ್ಲ ಮನುಜರೆಂಬೆ**
**ಕಲ್ಲು ಹಿಡಿದವರೆಲ್ಲ ಅಲ್ಲಮನಾಗಲು ಭವ ಬೀಜ ಇನ್ನೆಲ್ಲಿಯದಯ್ಯಾ**
**ಕಪಿಲ ಸಿದ್ಧ ಮಲ್ಲಿಕಾರ್ಜುನಾ.**

**- ಸಿದ್ಧರಾಮ ಶಿವಯೋಗಿ.**

ತನ್ನ ಕಾಲು ತೊಳೆದ ಬಳಿಕ ಲಿಂಗಕ್ಕೆ ಮಜ್ಜನವ ಮಾಡುವರು, ತಾನು ಲಿಂಗವೋ ಲಿಂಗ ಲಿಂಗವೋ ಬಲ್ಲಡೆ ನೀವು ಹೇಳಿರೆ ಗುಹೇಶ್ವರ ಲಿಂಗವನು? ಮೊದಲು ತಾನು ಸ್ನಾನ ಮಾಡಿದ ಬಳಿಕ ದೇವರಿಗೆ ನೀರು ಹಾಕಿ ತೊಳೆದು ಪೂಜೆ ಮಾಡುವುದು ರೂಢಿಯಲ್ಲಿದೆ. ತನ್ನ ಸ್ನಾನ ಮೊದಲು ದೇವರ ಸ್ನಾನ ನಂತರವೆಂದ ಮೇಲೆ ತಾನು ದೇವರೋ, ದೇವರು ದೇವರೊ ಎಂದು ಪ್ರಶ್ನಿಸುವ ಮೂಲಕ ಸತ್ಯ ಕಂಡುಕೊಳ್ಳುವ ಸೂತ್ರ ನೀಡಿದ್ದಾರೆ ಅಲ್ಲಮ ಪ್ರಭುಗಳು.

ಕಲ್ಲು ಹಿಡಿದು ಪೂಜೆ ಮಾಡುವವರೆಲ್ಲ ಅಲ್ಲಮನಂತೆ ಮಹಾಜ್ಞಾನಿ ಗಳಾದರೆ ಜಗತ್ತಿನಲ್ಲಿ ಬಿಡಿ ಮನುಜರೆ ಉಳಿಯುವುದಿಲ್ಲವೆಂದು ಸಿದ್ಧರಾಮ ಶರಣರು ಮಾರ್ಮಿಕವಾಗಿ ನುಡಿದಿದ್ದಾರೆ.

ಜಗತ್ತಿನ ಮನುಜರೆಲ್ಲ ಮಹಾಜ್ಞಾನಿಗಳಾಗಬೇಕೆಂಬ ಉತ್ಕಟ ಬಯಕೆ ಅವರಿಗೆ. ದೇವರಾಗದ ಮುನ್ನ ಕಲ್ಲು ಕಲ್ಲಾಗಿಯೇ ಇತ್ತು. ಕಲ್ಲು ನೋಡಿದ ಜಗತ್ತಿನ ಯಾವ ಕಣ್ಣುಗಳು ಮೋಸಕ್ಕೆ ಒಳಗಾಗುವುದಿಲ್ಲ. ಕಲಾವಿದ ಕಲ್ಲು ಕಟೆದು ಮೂರ್ತಿ ಮಾಡಿದ ಮೇಲೆ ಆ ಕಲ್ಲು ಕಲ್ಲಾಗಿ ಉಳಿಯಲೇ ಇಲ್ಲ; ದೇವರಾಯಿತು. ದೇವರಾದ ಆ ಕಲ್ಲನ್ನು ಜಗತ್ತಿನ ಯಾವ ಕಣ್ಣುಗಳೂ ಕಲ್ಲೆಂದು ಪರಿಗಣಿಸಲೇ ಇಲ್ಲ. ಕಲ್ಲು ಸತ್ಯವೋ,ದೇವರು ಸತ್ಯವೋ ಎನ್ನುವ ಪ್ರಶ್ನೆ ಕೂಡ ತನ್ನಲ್ಲಿ ಸುಳಿಯಲೇ ಇಲ್ಲ.

ಕಟೆದ ಕಲ್ಲನ್ನೇ ದೇವರೆಂದು ಪೂಜಿಸುವುದು, ಆರಾಧಿಸುವುದು ನೈವೇದ್ಯ, ಫಲ ಪುಷ್ಪಗಳನ್ನು ಅರ್ಪಿಸುವುದು,ದೇವಾಲಯಗಳನ್ನು ನಿರ್ಮಿಸಿ ರಥೋತ್ಸವಗಳನ್ನು ಮಾಡಿ ಭ್ರಮೆಯಿಂದ ಸಂಭ್ರಮ ಪಡುವುದು.ಇದು ಬಾಲಿಷ ಮಕ್ಕಳಾಟವೆಂದು ಗಮನಕ್ಕೆ ಬರುವುದೇ ಇಲ್ಲ. ದೂರದೂರಿನವರೆಗೂ ಕುಟುಂಬದೊಂದಿಗೆ ಕ್ರಮಿಸಿ ಪುಣ್ಯ ಕ್ಷೇತ್ರ ದರ್ಶನ ಮಾಡಿಕೊಳ್ಳುವುದು ವ್ಯರ್ಥ ಅನ್ನಿಸುವುದೇ ಇಲ್ಲ. ವಸ್ತುವಿನ ಮೂಲ ತಿಳಿಯುವುದೇ ಸತ್ಯ. ಕಲ್ಲು ಮರೆತು ದೇವರೆಂದು ಪೂಜಿಸುವುದೇ ಮಿಥ್ಯ.

□

# ಬಯಲ ಬೀಜಗಳು

ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು
ಬಯಲು ಬಯಲಾಗಿ ಬಯಲಾಯಿತ್ತಯ್ಯಾ
ಬಯಲ ಜೀವನ ಬಯಲ ಭಾವನೆ,
ಬಯಲು ಬಯಲಾಗಿ ಬಯಲಾಯಿತ್ತಯ್ಯಾ
ನಿಮ್ಮ ಪೂಜಿಸಿದವರು ಮುನ್ನವೇ ಬಯಲಾದರು
ನಾ ನಿಮ್ಮ ನಂಬಿ ಬಯಲಾದೆ ಗುಹೇಶ್ವರಾ!!

-ಅಲ್ಲಮಪ್ರಭು

ಇದು ಪ್ರಭುವಿನ ಮಾತು. ನಿಜವನರಿತ ನಿಶ್ಚಿಂತ ಶರಣನ ಮಾತು. ಮರಣ ಗೆದ್ದ ಮಹಾಂತನ ಮಾತು. ಘನವ ಕಂಡ ಘನ ಮಹಿಮನ ಮಾತು. ಬಯಲು ಒಲಿದ ಭರಿತನ ಮಾತು!

ಅಭ್ಯಾಸ ಮಾಡಿ ಹಣೆಬರವ ತೊಡೆವ ಮಾತಲ್ಲ. ನಾರು ಬೇರಿನ ಮಾಟ ಮಂತ್ರದ ಕುಟಿಲ ಕಪಟದ ಮಾತಲ್ಲ. ಕಾಯ ಸಮಾಧಿ, ಜೀವ ಸಮಾಧಿ, ಕರಣ ಸಮಾಧಿಯ ಮಾತೂ ಅಲ್ಲ. ಬಯಲ ಮಾತು, ಬಯಲನೆ ಬಿತ್ತಿ ಬಯಲನೆ ಬೆಳೆದು ಬಯಲಾದ ಮಾತು, ಬಯಲನ್ನೆ ಪೂಜಿಸಿ, ಬಯಲನ್ನೇ ನಂಬಿ, ಬಯಲಲ್ಲೇ ಜೀವಿಸಿ, ಬಯಲನ್ನೇ ಭಾವಿಸಿ ಬಯಲಾದ ಮಾತು. ಶರಣ ಸಂತರ ಮಾತು, ದಾಸವರೇಣ್ಯರ ಮಾತು, ಬುದ್ಧ ಜಿನ ಅಲ್ಲಮರ ಮಾತು, ವಿಜ್ಞಾನದ ಮಾತು.

ರೂಪಕ್ಕಾಗಿ ಜಗಳ, ಮಣ್ಣಿಗಾಗಿ ಮಣ್ಣಿನಲ್ಲಿರುವ ಅದಿರಿಗಾಗಿ ಜಗಳ, ಕರೆನ್ಸಿಗಾಗಿ, ಮಾತಿಗಾಗಿ ಜಗಳ. ಆಳುವುದಕ್ಕೆ ಆಳಿಸಿಕೊಳ್ಳುವುದಕ್ಕಾಗಿ ಜಗಳ. ಆಡುವ ಮಾತು, ಜೀವಿಸುವ ಜೀವನ, ಬದುಕುವ ಬದುಕು ಬಯಲಾದರೂ ಬಯಲಲ್ಲ. ಬಯಲು ಬಲವಾಗಿ ತಿಳಿದಿಲ್ಲ. ಅದಕ್ಕಾಗಿಯೇ ಬದುಕು  ಬರ್ಬರ. ಸಂಕಟಮಯ ಜೀವನ, ಕ್ಷಣ ಕ್ಷಣಕ್ಕೂ ನರಕ ಯಾತನೆ ಅನುಭವಿಸುವ ಭಾವನೆ!

ಶರಣರು ಹೇಳಿದ ಬಯಲು ಬಲವಾಗಿ ತಿಳಿದರೆ, ಕಾಮಿಸುವ ರೂಪ ಬಯಲಾಗಿ ಕಾಮಿಸಲು ಬರುವುದಿಲ್ಲ. ಅತ್ಯಾಚಾರಗಳು ನಡೆಯುವುದೇ ಇಲ್ಲ. ದ್ವೇಶಿಸುವ ತನು ಬಯಲಾಗಿ ದ್ವೇಶಿಸಲು ಬರುವುದಿಲ್ಲ. ಕೇಳುವ ತನುವಿನ ಶಬ್ದ ಬಯಲಾಗಿ ಜಗಳ ಕಾಯುವುದಿಲ್ಲ. ಪ್ರೀತಿಸುವ ಮಣ್ಣು, ಅದಿರು ಚಿನ್ನ, ಕರೆನ್ಸಿ ಬಯಲಾಗಿ ಕೊಲೆ, ಸುಲಿಗೆ, ನಡೆಯುವುದಿಲ್ಲ. ಮಾಡುವ ಭ್ರಷ್ಟಾಚಾರ ಬಯಲಾಗಿ ಪೊಲೀಸ್ ಠಾಣೆ ಕೋರ್ಟ್, ಕಛೇರಿಗಳ ಅವಶ್ಯಕತೆಯೂ ಇರುವುದಿಲ್ಲ. ಶರಣರ ಮಾತು ವಿಜ್ಞಾನ; ಬಲವಾಗಿ ತಿಳಿಯಬೇಕಷ್ಟೆ!

ತಿಳಿದವನು ಬಯಲನ್ನೆ ಪೂಜಿಸುತ್ತಾನೆ, ಬಯಲನ್ನೇ ಆರಾಧಿಸುತ್ತಾನೆ. ಬಯಲನ್ನೇ ನಂಬಿ ಬಯಲಲ್ಲಿ ಬಯಲಾಗುತ್ತಾನೆ. ಅವನಿಗೆ ಕಾಣುವುದೆಲ್ಲವೂ ಬಯಲೆ.! ನೋಡಲು ಜಲ ಬಿಂದು. ಅದಕ್ಕೆ ರೂಪ ರುಚಿ ವಾಸನೆಗಳಿಲ್ಲ. ತನ್ನ ಮಟ್ಟ ತಾನು ಕಾಯ್ದುಕೊಳ್ಳುತ್ತದೆ. ಜಲಬಿಂದುವಿನ ಜನನ ಜಲಜನಕ, ಆಮ್ಲಜನಕದಿಂದ! ಇವೆರಡರ ವಾಸ ಬಯಲಲ್ಲಿಯೇ. ಬಯಲು ಕಾಣುವುದಿಲ್ಲ, ಜಲ ಜನಕ ಆಮ್ಲಜ ನಕಗಳೂ ಕಾಣುವುದಿಲ್ಲ. ಬಯಲ ಸಹಾಯದಿಂದ ಇವೆರಡೂ ಕೂಡಿ ಜಲ ಬಿಂದುವಾ

ಬಯಲ ವೇಗದಿಂದಲೇ ಜಲಬಿಂದು ಗರ್ಭಸೇರಿ ಪಾಕವಾಯಿತು. ಪಿಂಡವಾಗಿ ತನುವಾಗಿ ಹೊರ ಬಂದು ಪುನಃ ಬಯಲ ಸೇರಿತು. ಜಲರಾಸಿಯೇ ಪಾಕವಾಗಿ ಭೂಮಿಯಾಯಿತು. ನೀರು ಗಟ್ಟಿಗೊಂಡು ಲೋಹ ವಾಯಿತು, ಅದಿರಾಯಿತು. ಗಿಡಮರ ಬಳ್ಳಿ ಪಶು, ಪಕ್ಷಿ ಪ್ರಾಣಿಗಳಾದವು. ಸೂರ್ಯ ಚಂದ್ರ, ನಕ್ಷತ್ರ, ಆಕಾಶ ಕಾಯಗಳಾದವು. ಬಯಲ ಜಿಗಿಯಿಂದ ಗಟ್ಟಿ ಗೊಂಡ ವಸ್ತುಗಳು ಕಾಣುವಂತಾದವು. ವಸ್ತುಗಳಲ್ಲಿದ್ದ ಬಯಲು ಬಿಟ್ಟರೆ ವಸ್ತುಗಳೆಲ್ಲ ಬಯಲೆ. ಬಯಲು ಸೃಷ್ಟಿಸಿದ ಜಲ ಬಯಲಲ್ಲವೇ? ಬಯಲು ಸೃಷ್ಟಿಸಿದ ತನು ಬಯಲಲ್ಲವೆ? ತನುವಿನ ಕಣ ಕಣದಲ್ಲಿ ಬಯಲು ಸೇರಿ ನೋಡುವಂತೆ, ಮಾತನಾಡುವಂತೆ, ಕೇಳುವಂತೆ, ಸ್ಪರ್ಶಿಸುವಂತೆ; ಆನಂದದಿಂದ ವಾಸಿಸುವಂತೆ ಮಾಡಿತು, ರುಚಿಸುವಂತೆ ಮಾಡಿತು.

ಬಯಲು ಸೇರಿದ ಜಲ ಕಬ್ಬಿಗೆ ಸುರಿದು ಸಿಹಿಯಾಯಿತು. ಹುಣಸೆಗೆ ಸುರಿದು ಹುಳಿಯಾ ಯಿತು. ಕಾರ, ಉಪ್ಪು ಒಗರು ನಾನಾ ರುಚಿಯಾಯಿತು. ಅಮೃತವಾಯಿತು. ಹಾವು ಸೇರಿ ವಿಷವಾ ಯಿತು. ಬಯಲ ತಿಳಿದರೆ ಹುಟ್ಟಿಲ್ಲ ಸಾವಿಲ್ಲ, ನರಕಯಾತನೆಗಳು ಮೊದಲೆ ಇಲ್ಲ. ಜಾತಿ ಮತ ಪಂಥಗಳಿಲ್ಲ. ಹೆಣ್ಣಿಲ್ಲ-ಗಂಡಿಲ್ಲ, ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳಿಲ್ಲ. ಬಯಲು ತಾನು ಕಾಣುವುದಕ್ಕೆ ಜಲರೂಪ ತಾಳಿತು. ತನುವಾಯಿತು.

ಗಿಡ-ಮರ, ಬಳ್ಳಿ, ಪಶು, ಪಕ್ಷಿ, ಪ್ರಾಣಿಯಾಯಿತು. ಕೀಟ, ಉರುಗ, ಜಲಚರವಾಯಿತು. ಮಣ್ಣು ಕಲ್ಲು ಅದಿರು, ಲೋಹವಾಯಿತು. ಸೂರ್ಯ, ಚಂದ್ರ, ನಕ್ಷತ್ರ, ಅಗ್ನಿ, ಆಕಾಶ ಕಾಯಗ ಳಾಗಿ ಬಯಲು ತನ್ನ ಗರ್ಭದಲ್ಲಿಯೇ ಬಂಧಿಸಿ ಕೊಂಡಿತು.

ಭೂತಗಳೂ ಐದಲ್ಲ. ಇರುವುದೊಂದೇ ಭೂತ! ಅದು ಬಯಲು! ಬಯಲ ಬಿತ್ತಿಗೆಯಿಂದಲೇ ಆಮ್ಲಜನಕ, ಜಲಜನಕ; ಬಯಲ ಬಿತ್ತಿಗೆಯಿಂದಲೇ ಜಲ. ಬಯಲು ಸೇರಿದ ಜಲದಿಂದಲೇ ಸಕಲ ಜೀವಾಳ. ಭೂಮಿ ಬಿರಿದರೂ ಬಯಲಿಗೆ ಆನಂದ. ಅಗ್ನಿ ಪ್ರಳಯ, ಜಲಪ್ರಳಯವಾದರೂ ಬಯಲಿಗೆ ಆನಂದ, ಸಿಡಿಲು ಬಡಿದು ಬಿರುಗಾಳಿ ಬೀಸಿ ಚಂಡ ಮಾರುತಗಳು ಬಡಿದರೂ ಬಯಲಿಗೆ ಆನಂದ. ಪಂಚಭೂತಗಳ ಚಿನ್ನಾಟದಿಂದ ಗರ್ಭಧರಿಸಿದ ಶಿಶು ತಾಯಿಗೆ ಆನಂದ ನೀಡಿದಂತೆ! ಏಕೆಂದರೆ ಬಯಲ ಗರ್ಭದಲ್ಲಿಯೇ ಇವುಗಳ ವಾಸ !

ನೋಡುವ ನೋಟ ಬಯಲು, ಕೇಳುವ ಶಬ್ದ ಬಯಲು. ತಿನ್ನುವ ಪದಾರ್ಥ ಬಯಲು, ವಾಸಿಸುಸವ ವಾಸನೆ ಬಯಲು, ಸ್ಪರ್ಶಿಸುವ ಚರ್ಮ ಬಯಲು, ನಾನು ಬಯಲು, ನನ್ನೊಳಗಿರುವ ಅರಿವು ಬಯಲು. ಇದು ಅಲ್ಲಮ ಪ್ರಭುಗಳು ಬಿತ್ತಿ ಬೆಳೆದ ಬಯಲಿನ ವಿರಾಟಸ್ವರೂಪ! ಸ್ವಸ್ವರೂಪ !! ಶರಣರು ಕೂಡಿಟ್ಟ ವಚನ ರೂಪದ ಬಯಲು ಬೀಜಗಳಿವೆ, ಬಿತ್ತಿ ಬೆಳೆಯಬೇಕಷ್ಟೆ!

□

# ಭಾವದೊಂದಿಗೆ ಜಗಳ ಮಾಡಿದ ಜಗಳಗಂಟ ಕಾಮಣ್ಣ

**ಸಾವ ದೇವರನೊಲ್ಲೆ ಭಾವವಳಿಯದ ಭಕ್ತಿಯನೊಲ್ಲೆ**
**ಆವಾವ ಪರಿಯಲ್ಲೂ ವಿಧಿಯನೊಲ್ಲೆ**
**ಕಾಮೇಶ್ವರನೆಂಬುದ ನೊಂದನೆ ಬಲ್ಲೆ**

**– ಜಗಳಗಂಟ ಕಾಮಣ್ಣ ಶರಣರು**

ತನುವಿನ ಅರಿವು ಬಳಕೆ ಮಾಡಿಕೊಂಡ ಮಹನೀಯರಿಗೆ ಮಾತ್ರ ಈ ಮೂರು ಸಾಲಿನ ವಚನ ದಲ್ಲಿ ಪ್ರಾಯೋಗಿಕವಾಗಿ ನಿಲ್ಲಲು ಬರುತ್ತದೆ.

**ಸಾವ ದೇವರನೊಲ್ಲೆ ಭಾವವಳಿಯದ ಭಕ್ತಿಯನೊಲ್ಲೆ:**

ದೇವರೆನ್ನುವವರೆಲ್ಲ ಸತ್ತು ಹೋಗಿದ್ದಾರೆ. ಕಲ್ಲು ಕಟೆದು ಮಾಡಿದ ದೇವರು ದೇವರೇ ? ಅಂತಹ ದೇವರನ್ನು ಪೂಜಿಸುತ್ತಾ ಬಂದಿದ್ದೇವೆ. ಓಣಿಗೊಂದು ,ಊರಿಗೊಂದು ದೇವಸ್ಥಾನ, ಕಿವಿಗಡಚಿಕ್ಕುವ ಮೈಕಿನ ಶಬ್ದ, ಅರ್ಥವಿಲ್ಲದ ಮಂತ್ರದೊಂದಿಗೆ ಕಲ್ಲನ್ನು ತೊಳೆದು ಆರಾಧಿಸುತ್ತಾ , ಅದಕ್ಕೆ ನೈವೇದ್ಯ ಪುಷ್ಪ ಪರಿಮಳ ಗಂಧ ಧೂಪ ದೀಪ ಆಭರಣ ಛತ್ರಿ ಚಾಮರ ಕಲ್ಯಾಣೋತ್ಸವಗಳನ್ನು ಮಾಡುತ್ತ ಮನೆಮಂದಿ ನೆಂಟರನ್ನು ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ದುರ್ಗಮ ರಸ್ತೆಗಳನ್ನ ಕ್ರಮಿಸಿ ಅರ್ಥವಿಲ್ಲದೆ ಆರಾಧಿಸುತ್ತೇವೆ.

ಒಮ್ಮೊಮ್ಮೆ ಮನೆ ಮಂದಿಯೆಲ್ಲ ರಸ್ತೆ ಅಪಘಾತಗಳಲ್ಲಿ ಸತ್ತಿದ್ದುಂಟು. ಆದರೂ ದೇವರ ಭ್ರಮೆ ಬಿಟ್ಟಿಲ್ಲ. ಮುಂದುವರೆದ ಚೈನಾ, ವ್ಯಾಟಿಕಾನ್, ಜಪಾನ್, ಅಮೇರಿಕಾಗಳಲ್ಲೂ ದೇವರ ಆರಾಧನೆ ನಿಂತಿಲ್ಲ. ಕಲ್ಲು ಕಟೆದು ಮೂರ್ತಿ ಮಾಡುವುದನ್ನು ನೋಡುತ್ತೇವೆ, ನವಧಾನ್ಯಗಳಲ್ಲಿ ಮೂರ್ತಿಯನ್ನು ಹಾಕಿ ಪ್ರಾಣ ಪ್ರತಿಷ್ಠಾನ ಮಾಡುವುದನ್ನು ನೋಡುತ್ತೇವೆ. ಆ ಮೂರ್ತಿಯ ಮೇಲೆ ಹಾವು ಹಲ್ಲಿ ಇಲಿ ಪಕ್ಷಿ ನೊಣ ಜಿರಳೆ ಸೊಳ್ಳೆ ಹರಿದಾಡಿ ಮಲ ಮೂತ್ರ ಮಾಡುವುದನ್ನು ನೋಡುತ್ತೇವೆ. ಪುನಃ ಆ ಕಲ್ಲು ತೊಳೆದು ನೀರು ಕುಡಿದು ಧನ್ಯರಾದೆವೆಂಬ ಭಾವ ಮೆರೆಯುತ್ತೇವೆ.

ಪೃಥ್ವಿಗೆ ಹುಟ್ಟಿದ ಶಿಲೆ,ಕಲ್ಲುಕುಟಿಗಂಗೆ ಹುಟ್ಟಿದ ಮೂರುತಿ, ಮಂತ್ರಕ್ಕೆ ಲಿಂಗವಾಯಿತ್ತಲ್ಲ! ಈ ಮೂವರಿಗೆ ಹುಟ್ಟಿದ ಮಗನ ಲಿಂಗವೆಂದು ಕೈವಿಡಿವ, ಅಚ್ಚ ವ್ರತಗೇಡಿಗಳನೇನೆಂಬೆ ಗುಹೇಶ್ವರಾ. ಭೂಮಿಯಲ್ಲಿ ಹುಟ್ಟಿದ ಕಲ್ಲು,ಕಲಾವಿದನ ಮೊಳೆಗೆ ಹುಟ್ಟಿದ ಮೂರ್ತಿ, ಮಂತ್ರ ಹೇಳಿದರೆ ಕಲ್ಲು ದೇವ ರಾಯಿತೆ ! ಭೂಮಿ, ಕಲಾವಿದ,ಪೂಜಾರಿಯಿಂದ ಸೃಷ್ಠಿಯಾದ ಕಲ್ಲು ಮೂರ್ತಿಯಲ್ಲಿ ಮಾಯವಾ ಯಿತೆ ? ಕಣ್ಣು ಕಂಡರೂ ಕಲ್ಲನ್ನು ಕಾಣದ ಕಣ್ಣು ಕುರುಡಲ್ಲವೇ ? ಹಿಂದೆ ನೋಡಿದ ಕಲ್ಲನ್ನೇ ಇಂದು ದೇವರೆಂದು ಆರಾಧಿಸುವವನ್ನು ಜ್ಞಾನಿ ಎಂದು ಹೇಳುವುದಾದರೂ ಹೇಗೆ ? ಆ ಕಲ್ಲಿಗೆ ವ್ರತ,ಮಡಿ, ಆರಾಧನೆ, ಅರ್ಚನೆ, ಪೂಜೆ, ನೈವೇದ್ಯ ,ಉರುಳು ಸೇವೆ, ಬೆತ್ತಲೆ ಸೇವೆ ಮಾಡುವುದು ಅಜ್ಞಾನವಲ್ಲವೇ? ಆ ಕಲ್ಲಿಗೆ ಆಭರಣ, ವಸ್ತ್ರ, ವಜ್ರ ಕಿರೀಟ ಧರಿಸಿ ಸುಖಿಸುವುದು ಮೂರ್ಖತನವಲ್ಲವೇ ? ಕಲ್ಲು ಒಂದೇ ಆದರೂ ಕಲಾವಿದ ಕೆತ್ತಿದ ದೇವರು ಹಲವು.

''ಹೆಣ್ಣು ದೇವರು, ಗಂಡು ದೇವರು ಕೂಡಾ ಕಲ್ಲೇ . ಕಲ್ಲ ಮನೆಯ ಮಾಡಿ, ಕಲ್ಲ ದೇವರ ಮಾಡಿ, ಆ ಕಲ್ಲು ಕಲ್ಲ ಮೇಲೆ ಕೆಡೆದಡೆ,ದೇವರೆತ್ತ ಹೋದರೋ ? ದೇವರ (ಲಿಂಗ) ಪ್ರತಿಷ್ಠೆಯ ಮಾ

ಡಿದವಂಗೆ ನಾಯಕ ನರಕ ತಪ್ಪದು ಗುಹೇಶ್ವರಾ.''

'ರಂಗ ಒಂದೇ ಕಂಭ ಒಂದೇ ದೇವರೊಂದೇ ದೇಗುಲ ಒಂದೇ, ಗುಹೇಶ್ವರಾ ನಿಮ್ಮ ಮನ್ನಣೆಯ ಶರಣರ ದೇವರೆಂಬೆ.' ದೇವಾಲಯದ ಆವರಣದಲ್ಲಿರುವ ಕಲ್ಲನ್ನು ತುಳಿಯುತ್ತೇವೆ. ಅದರ ಒಂದು ತುಂಡಿಗೆ ದೇವರೆಂದು ಪೂಜಿಸುತ್ತೇವೆ. ಆಲಯಕ್ಕೆ ಹೊಂದಿಸಿದ ಕಂಬವನ್ನು ಮುಟ್ಟು ತ್ತೇವೆ. ಹೀಗೆ ಕಲ್ಲನ್ನೇ ದೇವರೆಂದು ಪೂಜಿಸುವ ಭಾವ ಭ್ರಮೆಗೊಂಡು ಮೋಸಕ್ಕೊಳಗಾಗಲಿಲ್ಲವೇ ? ಕಲ್ಲನ್ನು ಕಲ್ಲೆಂದು ತಿಳಿಯುವ ಸತ್ಯ ಕಣ್ಣಿನಲ್ಲಿ ಮರೆಯಾಗಲಿಲ್ಲವೇ ? ಭಾವದಿಂದ ಭ್ರಮಿತನಾಗಿ ಕಲ್ಲನ್ನೇ ದೇವರೆಂದು ಪೂಜಿಸುವ ಅಜ್ಞಾನ.

ಇದೊಂದು ತನುವನ್ನಾವರಿಸಿಕೊಂಡಿರುವ ಸಣ್ಣ ಹುಚ್ಚು ಅನ್ನಿಸುವುದಿಲ್ಲವೇ ? ಅದಕ್ಕಾಗಿಯೇ ಜಗಳಗಂಟ ಕಾಮಣ್ಣ ಶರಣರು ತನ್ನ ತನುವಿನ ಭಾವ ದೊಂದಿಗೆ ಜಗಳ ಮಾಡಿದರು. ಸಾವ ದೇವರ ನೊಲ್ಲೆ ಭಾವವಳಿಯದ ಭಕ್ತಿಯ ನೊಲ್ಲೆ ಎಂದರು. ತನುವಿನ ಭಾವ ನಿರ್ಭಾವವಾದರೆ ಕಲ್ಲಿನಲ್ಲಿ ಕಟೆದ ದೇವರು ಕಲ್ಲಾಗಿಯೇ ಕಾಣುತ್ತದೆ. ಆ ಕಲ್ಲಿಗೆ ಪೂಜಿಸುವುದಿಲ್ಲ ಆರಾಧಿಸುದಿಲ್ಲ. ರಥೋತ್ಸವಗಳನ್ನು ಮಾಡುವುದಿಲ್ಲ.

**ಆವಾವ ಪರಿಯಲ್ಲೂ ವಿಧಿಯನೊಲ್ಲೆ:**

ವಿಧಿ ಎನ್ನುವುದು ಇಲ್ಲವೇ ಇಲ್ಲ. ಗಿಡ ಮರ ಬಳ್ಳಿ ಪಶು ಪಕ್ಷಿ ಪ್ರಾಣಿಗಳಿಗೆ ವಿಧಿ ಎನ್ನುವುದು ಇಲ್ಲ. ಅವೆಲ್ಲ ಸುಂದರವಾಗಿ ಜೀವಿಸುತ್ತವೆ. ಮನುಷ್ಯ ಭಾವ ಬೆಳೆಸಿಕೊಂಡಿರುವುದರಿಂದ ಅದು ವಿಧಿ ಯಾಗಿ ಕಾಡುತ್ತದೆ. ಸ್ನೇಹಿತ,ಹೆಂಡತಿ, ಮಕ್ಕಳು, ಅಧಿಕಾರಿ,ದೇವರ ಮೇಲೆ ಇಟ್ಟ ಭಾವ ದುರ್ಭಾವವಾ ದರೆ ಅವರೆಲ್ಲ ವೈರಿಗಳಾಗಿ ಕಾಡುತ್ತಾರೆ. ನಿರ್ಭಾವದೊಂದಿಗೆ ನೋಡಿದರೆ ಅವರೆಲ್ಲ ನನ್ನಂತೆ ಕಾಣುತ್ತಾರೆ. ಭಾವ ನಿರ್ಭಾವವಾದರೆ ತನುವಿನ ಅರಿವೇ ತನ್ನಲ್ಲಿ ಗುರುವಾಗಿ ಕಾರ್ಯ ನಿರ್ವಹಿಸು ತ್ತಾನೆ. ಆ ಗುರುದೇವನೇ ಮಹಾದೇವ ಸದಾಶಿವ ಪರಬ್ರಹ್ಮನೂ ಆಗುತ್ತಾನೆ.

**ಕಾಮೇಶ್ವರನೆಂಬುದ ನೊಂದನೆ ಬಲ್ಲೆ:**

ಜಗಳಗಂಟ ಕಾಮಣ್ಣ ಶರಣರು ತನುವಿನಲ್ಲಿರುವ ವಿಷಯಗುಣಗಳೊಂದಿಗೆ ಜಗಳ ಮಾಡಿ ನಿರ್ವಿಷಯಿಗಳಾದರು. ಕಾಮ ನಿಃಕಾಮವಾದವರ ತೋರಾ ! ನೇಮವಳಿದು ನಿತ್ಯರಾದವರನಲ್ಲದೊಲ್ಲೆ, ಅಂಗದ ಗುಣವಳಿಯ ಲಿಂಗದಲ್ಲಿದ್ದವರನಲ್ಲದೊಲ್ಲೆ, ಕಾಮೇಶ್ವರಾ ಎಂದು ಕಾಮ ಗೆದ್ದು ಕಾಮೇಶ್ವರರಾ ದರು.

□

# ತನುವಿನ ಸಜ್ಜನನ ಪರಿಚಯ

**ಆವಾವ ಭೇದಂಗಳಿಂದ ಬಂದಡೂ ಕಾವುದೊಂದೆ ಭೇದ.**
**ಹೆಣ್ಣು ಹೊನ್ನು ಮಣ್ಣು ಕಾವಲ್ಲಿ ಸಜ್ಜನಂಗಲ್ಲದೆ ಅಶಕ್ಯ ನೋಡಾ**
**ಆವ ಕಾವಲ್ಲಿಯಾದಡೂ ಭಾವ ಶುದ್ಧವಾಗಿರಬೇಕು.**
**ಈ ಗುಣ ಅರಿವಿನ ಕುರುಹಿನ ಹಾದಿ;**
**ತುರುಗಾಹಿ ರಾಮನ ಪಥ.**
**ಗೋಪಿನಾಥ ವಿಶ್ವೇಶ್ವರಲಿಂಗವನರಿವುದಕ್ಕೆ ಸುಪಥದ ಪಥ.**

**- ತುರುಗಾಹಿ ರಾಮಣ್ಣ ಶರಣರು**

**ಆವಾವ ಭೇದಂಗಳಿಂದ ಬಂದಡೂ ಕಾವುದೊಂದೆ ಭೇದ :**

ತನು ಯಾವ ಗರ್ಭದಲ್ಲಿ ಜನಿಸಿದರೂ ಹಸಿವು, ನಿದ್ರೆ, ಭಯ , ಮೈಥುನಗಳೊಂದೆ. ಕಾಮ, ಕ್ರೋಧ , ಲೋಭ, ಮೋಹ ಮದ ಮತ್ಸರಗಳೊಂದೇ ಇವು ತನುವಿನ ವೈರಿಗಳು. ತನುವಿನಿಂದಲೇ ಜನ್ಮ ಪಡೆದ ಶತೃಗಳು. ಇವುಗಳನ್ನು ತಂದೆ ತಾಯಿ ಸಂಹರಿಸಲಾರರು. ಜಾತಿ, ಮತ, ಪಂಥ, ಪಂಗಡಗಳಿಂದ ಗುರುತಿಸಲ್ಪಟ್ಟ ತನುಗಳು ಕೂಡಾ ಇವುಗಳ ಬಾಧೆಯಿಂದ ಹೊರತಲ್ಲ. ಹೆಣ್ಣು(ವಿಷಯ), ಹೊನ್ನು, ಮಣ್ಣುಗ್ಗಳಿಂದ ತನುವಿನ ರಕ್ಷಣೆಯಾಗುವುದಿಲ್ಲ. ಬದಲಾಗಿ ಸಂಕಟ ವೃದ್ಧಿಯಾಗಿ ಮೃತ್ಯು ಹತ್ತಿರವಾಗುತ್ತದೆ.

ವ್ಯಾಘ್ರನ ಬಾಯಿಗೆ ತುತ್ತಾಗದಂತೆ ಕೋಲು ಹಿಡಿದು ದನಗಳನ್ನು ಕಾಯುವಂತೆ, ವಿಷಯಾದಿಗಳಿಗೆ, ಹೊನ್ನಿಗೆ, ಮಣ್ಣಿಗೆ ತುತ್ತಾಗದಂತೆ ತನುವನ್ನು ಕಾಯುವುದು ಅತ್ಯವಶ್ಯವಾಗಿದೆ. ವಿಷಯಾದಿಗಳಿಂದ ತನುವನ್ನು ನಿಗ್ರಹಿಸುವುದು ಸುಲಭ, ವ್ಯಾಘ್ರ ಮನವನ್ನು ಜಾಗ್ರದಲ್ಲಿ, ಸ್ವಪ್ನದಲ್ಲಿ, ಸುಷುಪ್ತಿಯಲ್ಲಿ ಹಾದರಕ್ಕೆಳಸದಂತೆ ಕಾಯುವುದು ಬಲು ಜಟಿಲ. ಸಜ್ಜನನ ಹೊರತಾಗಿ ಅನ್ಯರಿಗೆ ಸಾಧ್ಯವಾಗುವುದೇ ಇಲ್ಲ.

**ಆವ ಕಾವಲ್ಲಿಯಾದಡೂ ಭಾವ ಶುದ್ಧವಾಗಿರಬೇಕು. ಈ ಗುಣ ಅರಿವಿನ ಕುರುಹಿನ ಹಾದಿ; ತುರುಗಾಹಿ ರಾಮನ ಪಥ. ಗೋಪಿನಾಥ ವಿಶ್ವೇಶ್ವರಲಿಂಗವನರಿವುದಕ್ಕೆ ಸುಪಥದ ಪಥ.**

ತನುವ ಕಾಯುವ ಸಜ್ಜನನ ನೋಡಲು ಭಾವ ಶುದ್ಧವಾಗಿರಬೇಕು. ಇದು ಅರಿವಿನ ಕುರುಹಿ (ತನು)ನ ಹಾದಿ. ತುರುಗಾಹಿ ರಾಮನ ಪಥ. ತನುವನ್ನು ಕಾಯುವ ಸಜ್ಜನನಿದ್ದಾನೆ. ತನುವನ್ನು ವಿಷಯ; ಹೊನ್ನು, ಮಣ್ಣಿನೆಡೆಗೆ, ಅರಿಷಡ್ವರ್ಗದೆಡೆಗೆ ಕರೆದೊಯ್ಯುವ ದುರ್ಜನರೂ ಇದ್ದಾರೆ. ಸಜ್ಜನನ ಸಂಗವದು ಹೆಜ್ಜೇನು ಸವಿದಂತೆ, ದುರ್ಜನರ ಸಂಗವದು ದೂರ ಕಂಡಯ್ಯ . ತನುವಿನ ಸಜ್ಜನನ ಪರಿಚಯವಾದರೆ, ಅರಿಷಡ್ವರ್ಗಗಳೆಂಬ ದುರ್ಜನರನ್ನು ಸುಟ್ಟು ತನುವನ್ನು ತುರುಗಾಹಿಯಂತೆ ಕಾಯುತ್ತಾನೆ.

□

# ಕಾಯ ಗಂಧದ ತುಂಡು, ಜ್ಞಾನ ಅದರ ಶ್ರೀಗಂಧ

**ಕಾಯಕ್ಕೆ ಲಿಂಗವ ಸಾಹಿತ್ಯವ ಮಾಡುವಾಗ**
**ಕರಣಂಗಳು ಮುಂಚು, ಕಾಯ ಹಿಂಚಾಗಿರಬೇಕು**
**ಆತ್ಮನನರಿವಾಗ ಕುರುಹಿನ ಭಾವವೆಲ್ಲಿದ್ದಿತ್ತು ?**
**ಅಂಗ ನಿರಂಗವ ಕೂಡಿ ಸಂಘಟಿಸುವಾಗ**
**ಚಂದನ ಗಂಧದಂತೆ ಕ್ರೀ ಜ್ಞಾನದ ಭೇದ**
**ಅದರಂಗವ ತಿಳಿದಲ್ಲಿ ಕಾಲಾಂತಕ ಭೀಮೇಶ್ವರಲಿಂಗವನರಿದುದು.**

**– ಡಕ್ಕೆಯ ಬೊಮ್ಮಣ್ಣ ಶರಣರು**

**ಕಾಯಕ್ಕೆ ಲಿಂಗವ ಸಾಹಿತ್ಯವ ಮಾಡುವಾಗ ಕರಣಂಗಳು ಮುಂಚು, ಕಾಯ ಹಿಂಚಾಗಿರಬೇಕು:**

ಕಾಯಕ್ಕೆ ಲಿಂಗ ಕಟ್ಟುವುದು ಸರಳ. ಗುರುವಿನಿಂದ ಬೋಧೆ ಪಡೆಯುವುದೂ ಸರಳ. ಲಿಂಗ ಕಟ್ಟಿ ಬೋಧೆ ನೀಡಿ ಪ್ರಣವ ಷಡಕ್ಷರಿಗಳನ್ನು ಬೋಧಿಸುವ ವ್ಯವಹಾರದ ಗುರುಗಳು ಎಲ್ಲೆಲ್ಲೂ ಸಿಕ್ಕುತ್ತಾರೆ. ಆದರೆ ಡಕ್ಕೆಯ ಬೊಮ್ಮಣ್ಣನಂತೆ ಮನದ ಮಾರಿಯ ಭವಗೆಡಿಸಿ ಕರಣಂಗಳನ್ನು ಮುಂದೆ ಮಾಡಿ ಕಾಯವನ್ನು ಹಿಂದೆ ಮಾಡಿ ಕಾಯಕ್ಕೆ ಜ್ಞಾನ ಸಾಹಿತ್ಯ ಮಾಡುವ ಶರಣರು ಅಪರೂಪ !

ಯಾವ ವಿಶ್ವ ವಿದ್ಯಾಲಯದಲ್ಲಿಯೂ ಒಬ್ಬ ಅಧ್ಯಾಪಕನಿಗೆ ಸಾಧ್ಯವಾಗದ ಜ್ಞಾನ ಸಾಹಿತ್ಯದ ಮಾತನ್ನು ಡಕ್ಕೆಯ ಬೊಮ್ಮಣ್ಣ ಶರಣರು ತಮ್ಮ ಆರು ಸಾಲಿನ ವಚನದ ಮೂಲಕ ಇಡೀ ವಿಶ್ವಕ್ಕೇ ಅರುಹಿದ್ದಾರೆ. ಇದು ಪದವಿ ಪಡೆದು ಸಂಬಳಕ್ಕೆ ಪಾಠ ಮಾಡುವ ಅಧ್ಯಾಪಕರಿಗೆ ನಿಲುಕದ ಸಾಹಿತ್ಯ !

ತನುವಿನ ಜ್ಞಾನ ಒಂದು ಕಾಯವಾದರೆ ತನುವು ಒಂದು ಕಾಯ, ತನುವಿನ ಮನ ಮತ್ತೊಂದು ಕಾಯ. ಹೀಗೆ ಕಾಯದಲ್ಲಿ ಮೂರು ಕಾಯಕಗಳು. ಮನ ಕಾಯವನ್ನು ಹರಿದು ತಿನ್ನುತ್ತದೆ. ಅದು ತನುವಿನ ವೈರಿ. ಈ ಮನದ ಕಾಯಕ್ಕೆ ಲಿಂಗಕಟ್ಟಿ ಬೋಧೆ ಮಾಡುವ ಗುರುಗಳು ಎಲ್ಲೆಡೆ ಸಿಕ್ಕುತ್ತಾರೆ. ಬೋಧೆ ಪಡೆದ ಕಾಯ ಪಂಡಿತನಾಗಿ, ಪೀಠಾಧಿಪತಿಯಾಗಿ, ಉಪನ್ಯಾಸಕನಾಗಿ ಹಲವಾರು ಶರಣ ಸಂತರ ಮಾತುಗಳನ್ನು ಉದಾಹರಿಸಿ ವ್ಯವಹಾರ ಮಾಡುತ್ತದೆ. ತಾನು ಶ್ರೇಷ್ಠವಾಗಿ ಇತರ ತನುಗಳನ್ನೆಲ್ಲ ಕನಿಷ್ಟವಾಗಿ ಕಾಣುತ್ತದೆ. ಈ ಕಾಯದ ಮನ ಟೇಪಿನಂತೆ ಜ್ಞಾನ ಸಂಗ್ರಹ ಮಾಡಿಕೊಂಡು ಅದನ್ನೇ ಅಲ್ಪಸ್ವಲ್ಪ ಡೆಲಿವರಿ ಮಾಡುತ್ತದೆ.

ಕಾಯದ ಮನ ಸಾಹಿತ್ಯಕ್ಕೆ ಮಾರುಹೋದರೆ ಸಾಹಿತಿ ,ಕವಿ, ಪಂಡಿತನಾಗುತ್ತದೆ. ರಾಜಕೀಯಕ್ಕೆ ಮಾರುಹೋದರೆ ಶಾಸಕ ಸಂಸದ ಮಂತ್ರಿಯಾಗುತ್ತದೆ. ಆಭರಣ ಹಣಕ್ಕೆ ಮಾರುಹೋದರೆ ಶ್ರೀಮಂತ ಕಳ್ಳ ದರೋಡೆಕೋರನಾಗುತ್ತದೆ. ಹೆಣ್ಣಿಗೆ ಮಾರುಹೋದರೆ ಹಾದರಿಗ ವಿಷಯ ಲಂಪಟನಾಗುತ್ತದೆ. ಕುಡುಕ, ಜೂಜು ಕೋರ, ಕೊಲೆ ಗಡುಕ ಎನ್ನಿಸಿಕೊಂಡು ತನುವನ್ನು ಹಾಳುಗೆಡವಿ ತನ್ನದೆ ಸಾಮ್ರಾಜ್ಯವನ್ನು ತನುವಿನಲ್ಲಿ ಕಟ್ಟಿ ಮತ್ತೊಂದನ್ನು ತಿಳಿಯದಂತೆ ಮಾಡುತ್ತದೆ. ಯಾರಾದರೂ ಶಿಕ್ಷೆ ಕೊಟ್ಟರೆ ತನುವಿಗೆ ಶಿಕ್ಷೆ ಕೊಡುತ್ತಾರೆಯೇ ಹೊರತು ಶರಣರಂತೆ ತನುವಿನ ಮನಕ್ಕೆ ಶಿಕ್ಷೆ ಕೊಡಲರಿಯರು. ಮನ ತನುವಿನಲ್ಲಿ ಸೇಫಾಗಿ ಉಳಿಯುತ್ತದೆ. ಮನ ಮಾಡಿದ ಮನೆ ಹಾಳು ಕೆಲಸಕ್ಕೆ ತನು ಕೆಟ್ಟವನೆಂದು ಹಣೆ ಪಟ್ಟಿ ಕಟ್ಟಿಕೊಂಡು ಒಂದು ದಿನ ಹಾಳಾಗುತ್ತದೆ. ಇದು ತನುವಿನ ಮನ ಪಾಠ ಕೇಳಿಸಿಕೊಂಡು ಕಾಯಕ್ಕೆ ಬೋಧೆ

ಮಾಡಿದ ಕತೆ.

ತನುವಿನ ಜ್ಞಾನ : ಇದು ಜ್ಞಾನ ಕಾಯ. ಸದ್ಗುರು ಈ ಕಾಯಕ್ಕೆ ಲಿಂಗ ಸಾಹಿತ್ಯ ಮಾಡುವಾಗ ಅಂದರೆ ಜ್ಞಾನ ಬೋಧಿಸುವಾಗ ಕಾಯ ಹಿಂದಾಗಿ ಜ್ಞಾನೇಂದ್ರಿಯಗಳು ಮುಂದಾಗಿರುತ್ತವೆ. ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳ ಮೂಲಕ ಸದಾ ಜ್ಞಾನವನ್ನೇ ಬೀರುವ ಆತ್ಮದ ಕುರಿತು ಸದ್ಗುರುನಾಥ ತಿಳಿಹೇಳುವಾಗ ಕಾಯವಿದೆ ಎನ್ನುವ ಕಾಯದ ಭಾವವೂ ಇರುವುದಿಲ್ಲ. ಆತ ಸೂಚಿಸುವಾಗ ಕಾಯ ಜ್ಞಾನದೊಂದಿಗೆ ಕೂಡಿ ಚಂದನ ಮತ್ತು ಗಂಧದಂತೆ ಸಂಘಟಿಸುತ್ತದೆ. ಕಾಯ ಗಂಧದ ತುಂಡಾದರೆ ಜ್ಞಾನ ಅದರ ಶ್ರೀಗಂಧ !

ಕೊರಡಾವುದೆಂದು ಗಂಧಕ್ಕೆ ತಿಳಿಯದು ಗಂಧವಾವುದೆಂದು ಕೊರಡಿಗೆ ತಿಳಿಯದು. ಎರಡೂ ಶ್ರೀ ಗಂಧವೇ ! ಹೀಗೆ ತನುವಿನ ಮನವನ್ನು ಸದ್ಗುರು ಭೇದಿಸಿ ತನುವಿನ ಜ್ಞಾನದೊಂದಿಗೆ ಮಾತನಾಡಿ, ಆ ತನುವಿಗೆ ಜ್ಞಾನ(ಲಿಂಗ) ಸಾಹಿತ್ಯ ಮಾಡುತ್ತಾನೆ. ಕಾಯಕ್ಕೆ ಲಿಂಗ ಕಟ್ಟುವುದಿಲ್ಲ. ಕಾಯದ ಕಣ ಕಣದಲ್ಲಿರುವ ಜ್ಞಾನ (ಲಿಂಗ)ವನ್ನು ಶಿಷ್ಯನಿಗೆ ತೋರಿಸುತ್ತಾನೆ. ಬೋಧಿಸುವ ಗುರು (ಜ್ಞಾನ) ಬೇರಲ್ಲವೆಂದು ಕಾಯಕ್ಕೆ ಮನದಟ್ಟು ಮಾಡಿ ಹಿಂದೆ ಸರಿಯುತ್ತಾನೆ. ಬೋಧೆ ಮಾಡಿದವ ಗುರುವಲ್ಲ. ಬೋಧಿಸಿಕೊಂಡವ ಶಿಷ್ಯನಲ್ಲವೆಂದು ತನ್ನ ಜ್ಯೋತಿಯಿಂದ ಬತ್ತಿಗೆ ಚುಂಬಿಸುತ್ತಾನೆ. ಆಗ ಗುರು ಶಿಷ್ಯನೆನ್ನುವ ಭೇದವನರಿಯದೆ ಇಬ್ಬರೂ ಬೆಳಗುತ್ತಾರೆ. ಸಮರ್ಥ ಸದ್ಗುರು ಡಕ್ಕೆಯ ಬೊಮ್ಮಣ್ಣ ಶರಣರು ಹೀಗೆ ಕಥನವಲ್ಲದ ಕಥನದ ಮೂಲಕ ಈ ಕತೆಯನ್ನು ಸರ್ವ ತನುಗಳೂ ತಿಳಿಯಲೆಂದು ಬಹಿರಂಗವಾಗಿಯೇ ಬೋಧಿಸಿದ್ದಾರೆ.

ಶರಣರ ಈ ಪಾಠ ಕೇಳಿದ ತನುವಿನ ಮನ ಜ್ಞಾನ ಮನವಾಗುತ್ತದೆ. ಜ್ಞಾನ ತನುವಾಗುತ್ತದೆ. ಮನವೆಂಬ ಮಾರಿ ಜ್ಞಾನದಲ್ಲಿ ಸಿಲುಕಿ ಜಾತಿ ಮತ ಪಂಥ ಹೆಣ್ಣು ಗಂಡು ಎನ್ನುವ ಮನದ ಅಜ್ಞಾನ ಉದುರಿ ಬೀಳುತ್ತದೆ. ಶ್ರೀಮಂತ ಬಡವ ಅಧಿಕಾರಿ ಭಿಕ್ಷುಕ ದಾನಿ ಎನ್ನುವ ಅವ ಗುಣ ಕಳೆದುಕೊಂಡು ನಿರ್ಗುಣಿಯಾಗುತ್ತದೆ. ಭೂಮಿ ಹೇಮ ವಿಷಯ ವಸ್ತುಗಳನ್ನು ಜ್ಞಾನದಿಂದ ನೋಡಿ ನಿರ್ವಿಷಯಿಯಾಗುತ್ತದೆ. ಜ್ಞಾನಕ್ಕಿಂತ ಮಿಗಿಲಾದ ಸಂಪತ್ತು ಮತ್ತೊಂದಿಲ್ಲವೆಂದು ಜ್ಞಾನದಿಂದಲೇ ತಿಳಿಯುತ್ತಾನೆ. ರಾಜಕಾರಣಿಯಾದರೆ ಜನಕನಂತಾಗುತ್ತಾನೆ. ಶಿಕ್ಷಕನಾದರೆ ಬಸವ ಬುದ್ಧ ಶರಣ ದಾಸವರೇಣ್ಯರಂತೆ ಪಾಠ ಮಾಡುತ್ತಾನೆ. ಇತರರನ್ನು ತನ್ನಂತೆ ನೋಡುತ್ತಾನೆ. ಕಾಲಾಂತಕ ಭೀಮೇಶ್ವರ ಲಿಂಗವನ್ನು ತನುವಿನಲ್ಲಿಯೇ ಕಂಡು ಅವನೇ ತಾನಾಗುತ್ತಾನೆ.

□

# ಕಾಲವಂಚನೆಗೊಳಗಾದ ತನು

**ಕಾಲವಂಚಕನಾಗಿ ಗುರುವಿಂಗೆ ಮಾಡಲಿಲ್ಲ.**
**ಕರ್ಮವಂಚಕನಾಗಿ ಲಿಂಗಕ್ಕೆ ಮಾಡಲಿಲ್ಲ.**
**ಧನವಂಚಕನಾಗಿ ಜಂಗಮಕ್ಕೆ ಮಾಡಲಿಲ್ಲ.**
**ತ್ರಿವಿಧ ನಿರತಂಗೆ,**
**ಮನ ವಚನ ಕಾಯ ತ್ರಿಕರಣದಲ್ಲಿ ಶುದ್ಧವಾಗಿರ್ಪ ಸದ್ಭಕ್ತ**
**ಕಾಲಾಂತಕ ಭೀಮೇಶ್ವರ ಲಿಂಗವು ತಾನೆ.**

**- ಡಕ್ಕೆಯ ಬೊಮ್ಮಣ್ಣ ಶರಣರು**

**ಕಾಲವಂಚಕನಾಗಿ ಗುರುವಿಂಗೆ ಮಾಡಲಿಲ್ಲ:**

ಪ್ರಾಥಮಿಕ, ಪ್ರೌಢ, ಪದವಿ, ಸ್ನಾತಕ ಪದವಿಗಳನ್ನು ಪಡೆಯುವುದಕ್ಕೆ ಕಾಲ ವ್ಯಯವಾಯಿತು, ಕಲಿತದ್ದಾದರೂ ಏನು ಎಂದು ಒಮ್ಮೆಯಾದರೂ ಪರಾಮರ್ಶಿಸಲಿಲ್ಲ. ತನುವಿನ ಕಾಲು ಶತಮಾನದ ಕಾಲವನ್ನು ತನುವಿನಿಂದ ಹೊರ ಬಂದ ಅರಿವನ್ನೇ ಕಲಿತೆನಲ್ಲದೆ ಅರಿವೆಂದರೇನೆಂದು ಅರಿಯಲಿಲ್ಲ. ತನುವಿನ ಅರಿವೇ ಗುರು ! ಆ ಗುರು ದೇವನನ್ನು ತಿಳಿಯಲಿಲ್ಲ. ಯಾವ ಅಧ್ಯಾಪಕನೂ ತಿಳಿಹೇಳಲಿಲ್ಲ. ಶಾಲೆ ಕಾಲೇಜು ವಿಶ್ವವಿದ್ಯಾಲಯಗಳಿಗೂ ಗುರುವಿನ ಸುಳುಹು ಹೊಳೆಯಲಿಲ್ಲ. ಸರಕಾರಕ್ಕೆ ಇದರ ಗೊಡವೆಯೇ ಬೇಕಿಲ್ಲ. ತನುವಿನ ಕಾಲು ಶತಮಾನದ ಕಾಲವನ್ನು ವ್ಯರ್ಥ ಕಳೆದ ವಂಚಕ ನಾನು.

ಅರಿವಿನ ಗುರು ಪರಿಚಯವಾಗಿದ್ದರೆ ಕಾಲು ಶತಮಾನದ ಓದು ಒಂದು ಕಾಲದಲ್ಲಿ(ಮೂರು ತಿಂಗಳಲ್ಲಿ) ಲಭ್ಯವಾಗುತ್ತಿತ್ತು . ಓದಿದ ಓದು ನೋಡಿದ ನೋಟವೆಲ್ಲ ಕಣ್ಣಿನೊಳಗೆ ಸಂಗ್ರಹವಾಗುತ್ತಿತ್ತು . ಕೇಳಿದ ಶಬ್ದವೆಲ್ಲ ಕಿವಿಯೊಳಗೆ ಸಂಗ್ರಹವಾಗುತ್ತಿದ್ದವು. ಸ್ಪರ್ಶಿಸಿದ ವಸ್ತುಗಳೆಲ್ಲ ಚರ್ಮದಲ್ಲಿ ಸಂಗ್ರಹವಾಗುತ್ತಿದ್ದವು. ವಾಸಿಸಿದ ವಾಸನೆಯೆಲ್ಲ ಮೂಗಿನಲ್ಲಿ ಸಂಗ್ರಹವಾಗುತ್ತಿತ್ತು. ರುಚಿಸಿದ ಪದಾರ್ಥವೆಲ್ಲನಾಲಗೆಯಲ್ಲಿಸಂಗ್ರಹವಾಗುತ್ತಿತ್ತು. ಪರೀಕ್ಷೆಯಲ್ಲಿಕೇಳಿದ್ದನ್ನು ಎಡಿಟ್ ಮಾಡಿ ಕೂಡಲೇ ಬರೆಯಬಹುದಿತ್ತು . ಆದರೆ ತನುವಿನ ಅರಿವನ್ನು ತಿಳಿಯದೆ ಮರೆವನ್ನು ಕಲಿತು ಆ ಗುರುದೇವನಿಗೆ ವಂಚನೆ ಮಾಡಿದ ಕಾಲವಂಚಕ ನಾನು. ತನುವೇನು ಚಿಕ್ಕದೆ ? ಜಗತ್ತಿನ ಪುಸ್ತಕಗಳೆಲ್ಲ ತನುವಿನಿಂದಲೇ ಬಂದವು.

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ ಪಾತಾಳದಿಂದತ್ತತ್ತ ನಿಮ್ಮ ಶ್ರೀ ಚರಣ ಬ್ರಹ್ಮಾಂಡದಿಂದತ್ತ ನಿಮ್ಮ ಶ್ರೀಮುಕುಟ ಅಗಮ್ಯ ಅಗೋಚರ ಅಪ್ರಮಾಣ ಅಪ್ರತಿಮ ಲಿಂಗ(ಅರಿ)ವೇ ಎನ್ನಕರಸ್ಥಲ (ದೇಹ) ದಲ್ಲಿಬಂದು ಚುಳುಕಾದಿರಿ (ಡಿಜಿಟಲ್ಲಾದಿರಿ) ಅಯ್ಯಾ ಎಂದು ಬೃಹದಾಕಾರವಾದ ತನುವಿನ ಹಾರ್ಡ್ ಡಿಸ್ಕ್‌ನ್ನು ಅದರಲ್ಲಿರುವ ಅರಿವನ್ನು ಮಹಾಜ್ಞಾನಿ ಬಸವಣ್ಣನವರು ಬಾಯಿ ತುಂಬ ಹೊಗಳಿದ್ದಾರೆ.

ತನುವಿನ ಜ್ಞಾನವನ್ನು ಮಹಾಜ್ಞಾನಿಗಳಾದವರು ಕೇವಲ ಎಂಟು ಪರ್ಸೆಂಟ್ ಮಾತ್ರ ಬಳಸಿಕೊಳ್ಳಬಲ್ಲರು ಎಂದು ಜಾರ್ಜ್ ಬರ್ನಾಡ್ ಶಾ ಮರುಕ ವ್ಯಕ್ತಪಡಿಸಿದ್ದಾರೆ. ಶ್ರೀ ಕೃಷ್ಣ ಭಗವದ್ಗೀತೆಯಲ್ಲಿತನುವಿನ ವಿರಾಟ ಸ್ವರೂಪವನ್ನು ವ್ಯಕ್ತಪಡಿಸಿದ್ದಾರೆ. ಬಳಕೆ ಮಾಡಿಕೊಳ್ಳುವ ಬಗೆಯನ್ನು

ವಿವರಿಸಿದ್ದಾರೆ.ಆದರೆ ಅರಿವಿನ ದಾರಿ ತೋರಿದ ಸಂತರನ್ನೆ ದೇವರೆಂದು ಪೂಜಿಸಿ ತನುವಿನ ಅರಿವು ತಿಳಿಯದ ಕಾಲವಂಚಕ ನಾನು.

**ಕರ್ಮವಂಚಕನಾಗಿ ಲಿಂಗಕ್ಕೆ ಮಾಡಲಿಲ್ಲ :** ಕಾಲು ಶತಮಾನದವರೆಗೆ ಕಲಿತದ್ದನ್ನೇ ಮಾಡಿ ತನುವಿನ ಆಯುಷ್ಯವೆಲ್ಲ ಅಜ್ಞಾನದಿಂದ ಕಳೆದೆ. ಮಾಡಬೇಕಾದ ಅರಿವಿನ ಕೆಲಸವನ್ನು ಮಾಡದೆ ಕರ್ಮವಂಚಕನಾದೆ. ಬಂಗಾರದಲ್ಲಿ ಬಣ್ಣ ಬೆರೆತಂತೆ ಅಂಗದಲ್ಲಿ (ಅರಿವು) ಲಿಂಗ ಬೇರ್ಪಡಿಸದಂತೆ ಬೆರೆತಿದೆ. ಅಜ್ಞಾನದ ಕೆಲಸಗಳಲ್ಲಿ ನಿರತನಾದ ನಾನು ಅಂಗದಲ್ಲಿದ್ದ ಅರಿವನ್ನು ನೋಡಲೇ ಇಲ್ಲ. ಅರಿವು ಗಮನಕ್ಕೆ ಬಂದರೆ ಸಾಕು ಅಜ್ಞಾನದ ಕೆಲಸಗಳು ಮಾಡುವುದಿಲ್ಲ. ಆದರೆ ಕೆಲಸದ ಒತ್ತಡಗಳು ಅಂಗದಲ್ಲಿರುವ ಆ ಲಿಂಗಯ್ಯನನ್ನು ನೋಡದಂತೆ ಮಾಡಿದ್ದರಿಂದ ಮಾಡಬೇಕಾದ ಅರಿವಿನ ಕರ್ಮ ಮಾಡದೆ ಕರ್ಮವಂಚಕನಾದೆ.

**ಧನವಂಚಕನಾಗಿ ಜಂಗಮಕ್ಕೆ ಮಾಡಲಿಲ್ಲ :** ತನುವಿನಲ್ಲಿ ಅರಿವಿನ ಸಂಪತ್ತಿದೆ. ಆ ಸಂಪತ್ತನ್ನು ಸದ್ಬಳಕೆ ಮಾಡುವವನೆ ಜಂಗಮ. ತನುವಿನ ತಲೆ ಉರುಳಿದರೂ ಜಂಗಮನಾದವನು ಅರಿವು ಬಿಟ್ಟು ನಡೆಯಲಾರ. ಅರಿವಿನ ಆಚಾರದಲ್ಲಿಯೇ ಸದಾ ಕಾಲ ಕಳೆಯುವನು. ಹೊರಗಿನ ಸಂಪತ್ತೆಲ್ಲ ಸೃಷ್ಟಿಯಾದದ್ದು ಅರಿವಿನಿಂದಲೇ. ಭೂಮಿ ಅಗೆದು ಲೋಹ ತೆಗೆದ. ಹೊರ ಬಂದ ಅದಿರಿಗೆ ಕಬ್ಬಿಣ ಚಿನ್ನ ಕಂಚು ಹಿತ್ತಾಳೆ ಬೆಳ್ಳಿ ಎಂದು ಹೆಸರಿಟ್ಟು ವಿನಿಮಯಕ್ಕಾಗಿ ಬಳಕೆ ಮಾಡಿಕೊಂಡ. ಹೀಗೆ ತನುವಿನ ಅರಿವಿನಿಂದ ಸೃಷ್ಟಿಯಾದದ್ದು ತನುವಿಗೆ ಸಂಪತ್ತು ಹೇಗಾಗುತ್ತದೆ ? ಅಜ್ಞಾನದ ಈ ಸಂಪತ್ತಿನ ಆಸೆಗಾಗಿ ಧನವಂಚಕನಾಗಿ ಅರಿವಿನ ಆಚಾರದ ಜಂಗಮನಿಗೆ ವಂಚನೆ ಮಾಡಿದೆ. ಅದಕ್ಕಾಗಿಯೆ ಬಸವಣ್ಣನವರು ಹಾಡಿದೊಡೆ ಎನ್ನೊಡೆಯನ ಹಾಡುವೆ, ಬೇಡಿದೊಡೆ ಎನ್ನೊಡೆಯನ ಬೇಡುವೆ, ಒಡೆಯಂಗೊಡಲ ತೋರಿ ಎನ್ನ ಬಡತನವ ಬಿನ್ನೈಸುವೆ ಒಡೆಯ ಮಹಾದಾನಿ ಕೂಡಲ ಸಂಗಮದೇವರಿಗೆ ಸೆರಗೊಡ್ಡಿ ಬೇಡುವೆ ಎಂದು ತನುವಿನ ಅರಿವೆಂಬ ಗುರುವಿಗೆ ಮೊರೆ ಹೋಗಿದ್ದಾರೆ. ತನುವಿನೊಳಗೆ ಅರಿವು ಸಂಗಮವಾಗಿ ಸಂಗಮನಾಥನೇ ಆದ ಆ ಗುರುವನ್ನು ಸೆರಗೊಡ್ಡಿ ಬೇಡಿ ತಮ್ಮ ಬಡನತವನ್ನು ನಿವಾರಿಸಿಕೊಂಡಿದ್ದಾರೆ.

**ತ್ರಿವಿಧ ನಿರತಂಗೆ, ಮನ ವಚನ ಕಾಯ ತ್ರಿಕರಣದಲ್ಲಿ ಶುದ್ಧವಾಗಿರ್ಪ ಸದ್ಭಕ್ತ ಕಾಲಾಂತಕ ಭೀಮೇಶ್ವರ ಲಿಂಗವು ತಾನೆ :** ಅರಿವನ್ನೇ ಗುರುವಾಗಿಸಿಕೊಂಡವನು, ಅಂಗವನ್ನೇ ಲಿಂಗ(ಅರಿವು) ಮಾಡಿಕೊಂಡವನು, ಅಂಗದ ಅರಿವನ್ನೇ ಜಂಗಮವಾಗಿ ಬಳಕೆ ಮಾಡಿಕೊಂ ಡವನೇ ತ್ರಿವಿಧ ನಿರತನು. ಈತನ ಮನ ಶುದ್ಧ ವಚನ ಶುದ್ಧ ಕಾಯವೂ ಶುದ್ಧ. ಈತನೇ ಕಾಲಾಂತಕ ಭೀಮೇಶ್ವರ ಲಿಂಗವು ಎಂದಿದ್ದಾರೆ ಡಕ್ಕೆಯ ಬೊಮ್ಮಣ್ಣ ಶರಣರು.

□

# ಮನ ಭಾವ ಕತ್ತರಿಸಿ ಅರಿವಿನ ರುಚಿ ಕಂಡ ತನು

ನೆನೆಯಲರಿಯೆ ನಿರ್ಧರಿಸಲರಿಯೆ ಮನವಿಲ್ಲವಾಗಿ.
ಭಾವಿಸಲರಿಯೆ ಬೆರೆಸಲರಿಯೆ ಭಾವ ನಿರ್ಭಾವವಾಯಿತ್ತಾಗಿ.
ಧ್ಯಾನ ಮೌನವನರಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ.
ಜ್ಞಾತೃ ಜ್ಞಾನ ಜ್ಞೇಯಂಗಳೆಲ್ಲವ ಮೀರಿ
ಅಭಿನವ ಮಲ್ಲಿಕಾರ್ಜುನನಲ್ಲಿ ಪರಮಸುಖಿಯಾಗಿರ್ದೆ.

-ಡೋಹರ ಕಕ್ಕಯ್ಯ ಶರಣರು.

**ನೆನೆಯಲರಿಯೆ ನಿರ್ಧರಿಸಲರಿಯೆ ಮನವಿಲ್ಲವಾಗಿ:**

ಡೋಹರ ಕಕ್ಕಯ್ಯ ಶರಣರು ತಮ್ಮ ತನುವಿನಲ್ಲಿರುವ ಜ್ಞಾನ ಸಂಪತ್ತನ್ನು ಕಂಡುಕೊಂಡು, ಆ ಸಂಪತ್ತಿನ ಒಡೆಯರಾಗಿ, ತಮ್ಮನ್ನು ಆ ಸಂಪತ್ತನ್ನು ಮರೆತು ಪರಮಸುಖಿಯಾಗಿ ಹಾಡಿದ್ದಾರೆ. ಮೇಲ್ಕಂಡ ಮಾತುಗಳು ಆಶ್ಚರ್ಯವೆನಿಸಿದರೂ ಸತ್ಯ .

ಮನಕ್ಕೆ ಸಿಹಿ ತಿನ್ನುವ ಬಯಕೆಯಾದರೆ, ಸಿಹಿ ಇದ್ದ ಸ್ಥಳಕ್ಕೆ ತನುವನ್ನು ಕರೆದುಕೊಂಡು ಹೋಗಿ ಮನ ತನುವಿನೊಂದಿಗೆ ರುಚಿಸುತ್ತದೆ. ತಿಂದು ಸಾಕೆನಿಸುತ್ತದೆ. ಪುನಃ ಮನ ಸಿಹಿ ಬೇಡುತ್ತದೆ. ಹೀಗೆ ತನುವಿರುವವರೆಗೆ ಮನದ ಬೇಡಿಕೆ ನಿಲ್ಲುವುದಿಲ್ಲ. ಬೆಲ್ಲದ ರುಚಿ ಸಿಹಿ ಹೇಗೆ ಎಂದು ನಿರ್ಧರಿಸುವುದು ಮನಕ್ಕೆ ಸಾಧ್ಯವಾಗುವುದಿಲ್ಲ. ನೆನೆದು ಬೆಲ್ಲವಿದ್ದೆಡೆಗೆ ತನುವನ್ನು ಕರೆದೊಯ್ಯುವುದೂ ಬಿಡುವುದಿಲ್ಲ. ದೊರೆಯದಿದ್ದರೆ ಹಿಂಸಿಸುತ್ತದೆ. ನೋಡುವ ಕಣ್ಣನ್ನು ಕೇಳುವ ಕಿವಿಯನ್ನು ಸ್ವಾಧೀನ ಮಾಡಿಕೊಂಡು ಸ್ಪರ್ಶಿಸುವ ಚರ್ಮವನ್ನು, ವಾಸಿಸುವ ಮೂಗನ್ನು ರುಚಿಸುವ ನಾಲಗೆಯನ್ನು ಸ್ವಾಧೀನ ಪಡಿಸಿಕೊಂಡು, ತನಗೆ ಬೇಕಾದಂತೆ ಬೇಡಿ ಇಡೀ ತನುವನ್ನು ಕುಣಿಸುತ್ತದೆ. ಆ ಕೋತಿಯ ತಾಳಕ್ಕೆ ತಕ್ಕಂತೆ ಕುಣಿದು ಕಳ್ಳ ಹಾದರಿಗ ವಿಷಯಲಂಪಟ ಪ್ರಾಮಾಣಿಕ ಭ್ರಷ್ಟ ದುಷ್ಟ ಬಜಾರಿ ಪಂಡಿತ ಮುತ್ಸದ್ಧಿ ಶಾಸ್ತ್ರಿ ಪೀಠಾಧಿಪತಿ ಧರ್ಮಾಧಿಕಾರಿ ಜಗದ್ಗುರು ಎನ್ನುವ ನಾಮದ ಹಣೆಪಟ್ಟಿ ತನು ಪಡೆಯುತ್ತದೆ. ಹೀಗೆ ತನುವನ್ನು ಕ್ಷಣ ಕ್ಷಣಕ್ಕೂ ಹಿಂಸಿಸುವ ದುಷ್ಟ ಮನ ತನುವಿನ ಕಣಕಣದಲ್ಲಿರುವ ಅರಿವಿನೊಂದಿಗೆ ಬೆರೆತು ಆ ಅರಿವೇ ತಾನಾದರೆ ನೆನೆಯಲರಿಯದು ನಿರ್ಧರಿಸಲರಿಯದು ಮನವಿಲ್ಲವಾಗಿ.

**ಭಾವಿಸಲರಿಯೆ ಬೆರೆಸಲರಿಯೆ ಭಾವ ನಿರ್ಭಾವವಾಯಿತ್ತಾಗಿ:**

ತನುವಿನಲ್ಲಿರುವ ಬಾವ ಒಳ್ಳೆಯದೇ, ಸದ್ಭಾವ ಕೂಡಾ ಒಳ್ಳೆಯದೆ. ಭಾವನೆಗಳಿಲ್ಲದ ತನುವು ತನುವೆ ಅಲ್ಲವೆಂದು ಸಾಹಿತಿಗಳಾದವರು ಹೇಳಬಹುದು. ಆದರೆ ಶರಣರು ವಿಜ್ಞಾನಿಗಳು ತನುವಿನ ಭಾವ ಮತ್ತು ಮನವನ್ನು ಎಳೆಎಳೆಯಾಗಿ ಕತ್ತರಿಸಿ ಅರಿವಿನ ರುಚಿ ಕಂಡವರು. ಆ ರುಚಿ ಸರ್ವ ತನುಗಳೂ ಸವಿಯಲೆಂದು ಬೆಳಕಿನ ಬುತ್ತಿ ಬಿಟ್ಟು ಹೋದವರು. ಅವರು ಹೇಳಿದ ಒಂದೊಂದು ಮಾತನ್ನು ಅರಿವಿನ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಿಕೊಂಡು ಅರಿವಾಗಬೇಕಷ್ಟೆ.

ತನುವಿನ ಭಾವ ಅರಳಿದರೆ ಮಿತ್ರ, ಆ ಮಿತ್ರನ ಗುಣಗಾನ ಸದಾ ನಡೆಯುತ್ತದೆ. ಹೆಂಡತಿ ಮಕ್ಕಳು ಬಂಧು ಬಳಗಕ್ಕಿಂತ ಮಿತ್ರನ ಪ್ರೀತಿ ಅಧಿಕವಾಗುತ್ತದೆ. ಮಿತ್ರನಿಗೆ ಅಪಮಾನ ಮಾಡಿದರೆ ಉರಿದು ಬೀಳುತ್ತಾನೆ. ಹೀಗಿರುವ ಮಿತ್ರ ತನಗೆ ದ್ರೋಹ ಬಗೆದದ್ದು ತಿಳಿದರೆ ಸಾಕು ಮಿತ್ರನನ್ನು ದೂಷಣೆ

ಮಾಡುತ್ತಾನೆ, ದ್ವೇಷಿಸುತ್ತಾನೆ. ಸಂದರ್ಭ ನೋಡಿ ಕೊಲೆ ಮಾಡುತ್ತಾನೆ. ಮಿತ್ರನ ತನುವಿನಲ್ಲಿ ಬದಲಾವಣೆಗಳಿಲ್ಲದಿದ್ದರೂ ಪ್ರೀತಿಸುವ ತನುವಿನ ಭಾವ ದುರ್ಭಾವಗೊಂಡಿತು. ಹಿಂದೆ ಭಾವದಿಂದ ಪ್ರೀತಿಸಿದ, ಇಂದು ದುರ್ಭಾವ ದಿಂದ ದ್ವೇಷಿಸಿದ. ಭಾವ ನಿರ್ಭಾವವಾದರೆ ಪ್ರೀತಿಸಲಿಲ್ಲ ದ್ವೇಷಿಸಲಿಲ್ಲ. ತನ್ನಂತೆ ಇತರರನ್ನು ಪ್ರೀತಿಸುತ್ತಾನೆ. ಕಕ್ಕಯ್ಯ ಶರಣರು ಅದಕ್ಕಾಗಿಯೇ ಭಾವಿಸಲರಿಯೆ ಬೆರೆಸಲರಿಯೆ ಭಾವ ನಿರ್ಭಾವವಾಗಿತ್ತಾಗಿ ಎಂದಿದ್ದಾರೆ.

**ಧ್ಯಾನ ಮೌನವನರಿಯೆ ಧ್ಯಾನಾತೀತ ತಾನೆಯಾಯಿತ್ತಾಗಿ:**

ಧ್ಯಾನ ಮೌನ ಯೋಗ ಜಪ ತಪಗಳು ಒಂದು ತನು ಮತ್ತೊಂದು ತನುವಿಗೆ ಮಾಡುವ ಮೋಸದ ವ್ಯವಹಾರ ! ಯೋಗವೆನ್ನುವುದು ಸರ್ಕಸ್ ಮಾಡಿ ದುಡ್ಡು ಪಡೆದಂತೆ. ಮನ ಭಾವಗಳು ಮನೆ ಮಾಡಿಕೊಂಡ ತನುವಿಗೆ ಯೋಗ ಮೌನ ಜಪ ತಪ ಸಂಧ್ಯಾ ವಂದನೆ ಪೂಜೆ ಆಚಾರಗಳೆಲ್ಲ ರೋಗಗಳೇ. ಮನ ಒಂದನ್ನು ಬಿಟ್ಟು ಮತ್ತೊಂದನ್ನು ಹಿಡಿಯುತ್ತದೆ. ಯೋಗ ಧ್ಯಾನ ಮೌನ ಕಲಿಸುವ ತನುಗಳು ಕಲಿಯುವ ತನುಗಳೆರಡೂ ರೋಗದಿಂದ ಮುಕ್ತವಲ್ಲ. ಇವೆರಡೂ ಮನ ಮತ್ತು ಭಾವದ ಮೋಸಕ್ಕೆ ಒಳಗಾದ ತನುಗಳು. ಮನ ಘನದಲ್ಲಿ ಸಿಲುಕಿ ಘನಮನವಾದಾಗ, ಭಾವಿಸುವ ಭಾವ ನಿರ್ಭಾವವಾದಾಗ ಧ್ಯಾನ ಮೌನವನರಿಯದೆ ಧ್ಯಾನಕ್ಕೆ ಅತೀತವಾದ ಘನವಸ್ತು ತಾನೆಯಾಗಿತ್ತು. ಮನದಿಂದ ತಿಳಿಯುವ ತಿಳಿಸಲ್ಪಡು ಜ್ಞಾತೃ ಜ್ಞಾನ ಜ್ಞೇಯಂಗಳೆಲ್ಲವ ಮೀರಿ ಅಭಿನವ ಮಲ್ಲಿಕಾರ್ಜುನನಲ್ಲಿ ಪರಮ ಸುಖಿಯಾಗಿರ್ದೆ ಎಂದಿದ್ದಾರೆ ಕಕ್ಕಯ್ಯ ಶರಣರು.

□

# ವಂಚನೆಗೊಳಗಾಗದೆ ತನುವಿನ ಜ್ಞಾನ ತನುವೇ ಪಡೆದು ಸುಖಿಸಬೇಕು

**ಸತಿ ಸುತ ಮಾತಾ ಪಿತರಿಗೆಂದು ಪಡೆದಡೆ ನಿಮ್ಮಾಣೆ ಕಂಡಯ್ಯಾ**
**ಮಾನವರ ಸೇವೆಯ ಮಾಡಿದಡೆ ನಿಮ್ಮಾಣೆ ಕಂಡಯ್ಯಾ**
**ನೀವಲ್ಲದನ್ಯಕ್ಕೆರಗಿದಡೆ ನಿಮ್ಮಾಣೆ ಕಂಡಯ್ಯಾ**
**ಎನ್ನ ಸತಿಗಲ್ಲದನ್ಯ ಸತಿಗಳುಪಿದಡೆ ನಿಮ್ಮಾಣೆ ಕಂಡಯ್ಯಾ**
**ತನುಮನ ಧನ ವಂಚನೆಯಾದಡೆ**
**ನಾಚಯ್ಯ ಪ್ರಿಯ ಮಲ್ಲಿನಾಥಯ್ಯ ನಿಮ್ಮಾಣೆ ಕಂಡಯ್ಯಾ.**

**- ದಶಗಣ ಸಿಂಗಿದೇವಯ್ಯ ಶರಣರು**

**ಸತಿ ಸುತ ಮಾತಾಪಿತರಿಗೆಂದು ಪಡೆದಡೆ ನಿಮ್ಮಾಣೆ ಕಂಡಯ್ಯಾ :**

ಜ್ಞಾನಿ ವಿಶ್ವಮಾನವ . ಆತನಿಗೆ ತಂದೆ ತಾಯಿ ಬಂಧು ಬಳಗವೆಲ್ಲ ಜ್ಞಾನವೆ. ಜ್ಞಾನವಿಲ್ಲದ ಒಬ್ಬರೂ ಗೋಚರಿಸುವುದಿಲ್ಲ. ತನುವಿನ ಜ್ಞಾನ ತನುವಿಗೆ ವಶವಾದ ಬಳಿಕ ಹೆಂಡತಿ ಮಕ್ಕಳು ತಂದೆ ತಾಯಿಗಳೆಂದು ಅಜ್ಞಾನದ ಕೆಲಸಗಳಲ್ಲಿ ಭಾಗಿಯಾಗಿ ದ್ರವ್ಯವನು ಸಂಗ್ರಹಿಸುವುದಿಲ್ಲ. ಅವರ ಸುಖಕ್ಕಾಗಿ ತನ್ನ ತನುವನ್ನು ಪಣಕ್ಕೊಡ್ಡುವುದಿಲ್ಲ. ತನ್ನಂತೆ ಅವರೂ ಕೂಡಾ ಸಮರ್ಥರೇ!

ಸಕಲರ ತನುಗಳಲ್ಲಿ ಸಮರ್ಥ ಜ್ಞಾನ ಇದೆ. ಬಳಕೆ ಮಾಡಿಕೊಳ್ಳದ ತನುಗಳನ್ನು ಅಸಮರ್ಥ, ಅಸಹಾಯಕ ತನುಗಳೆಂದು ತುಚ್ಛೀಕರಿಸುವಂತಿಲ್ಲ. ಕಳುವು ಹಾದರಕ್ಕೆಳಸಿ ಸತಿ ಸುತ ಮಾತಾಪಿತರಿಗೆಂದು ದ್ರವ್ಯ ಸಂಗ್ರಹಿಸಿದರೆ ತನುವಿನ ಜ್ಞಾನದ ಮೇಲೆ ಆಣೆ ಎಂದಿದ್ದಾರೆ ಸಿಂಗಿದೇವಯ್ಯ ಶರಣರು.

**ಮಾನವರ ಸೇವೆಯ ಮಾಡಿದಡೆ ನಿಮ್ಮಾಣೆ ಕಂಡಯ್ಯಾ :**

ಮಾನವ ಸೇವಾ ಸಂಸ್ಥೆಗಳು ಜ್ಞಾನ ಹೇಳಿ ಸನ್ಮಾರ್ಗಕ್ಕೆ ಕೊಂಡೊಯ್ಯಬೇಕಾದ ಮಠ ಮಾನ್ಯಗಳು ಶಾಲೆ ಪ್ರಸಾದ ನಿಲಯ ಉಚಿತ ಮದುವೆ ಮುಂತಾದ ಕೆಲಸಗಳಲ್ಲಿ ನಿರತವಾಗಿವೆ. ತನ್ನಂತೆ ಸಾಮರ್ಥ್ಯವುಳ್ಳ ಜ್ಞಾನಿ ತನುವಿಗೆ ಭಿಕ್ಷುಕ ಅಸಹಾಯಕನೆಂದು ಕನಿಕರಿಸುತ್ತವೆ ! ಸಹಾಯ ಮಾಡಿ ತಾನು ಧನಿಕ ಎನಿಸಿಕೊಳ್ಳುವುದು. ಅವರ ಸೇವೆಗಾಗಿ ಮತ್ತೊಂದು ರೂಪದಲ್ಲಿ ಭಿಕ್ಷೆ ಬೇಡುತ್ತವೆ. ಹೀಗೆ ಮಾಡುವುದು ಕೂಡ ತನ್ನ ಸತಿ ಸುತ ಮಾತಾಪಿತರಿಗೆಂದು ತನಗನ್ನಿಸುವುದೇ ಇಲ್ಲ. ದೇಣಿಗೆ ಪಡೆದು ಸಂಸ್ಥೆ ಕಟ್ಟುವುದು, ಆ ಸಂಸ್ಥೆಯಲ್ಲಿ ಸತಿ ಸುತ ಮಾತಾಪಿತರೊಂದಿಗೆ ತಾನು ಸೇರಿ ಐಶಾರಾಮಿ ಜೀವನ ನಡೆಸುತ್ತಾನೆ. ಹಲವರನ್ನು ಅಸಹಾಯಕರೆನ್ನುತ್ತಾ ತನಗರಿಯದಂತೆ ಅವರೊಂದಿಗೆ ಅಸಹಾಯಕನಾಗುತ್ತಾನೆ. ಇದಕ್ಕೆ ತನ್ನ ತನುವಿನ ಜ್ಞಾನ ಒಪ್ಪುವುದಿಲ್ಲ ಆದರೂ ಮನ ಹೇಳಿದಂತೆ ಕೇಳಿ ತನುವಿನ ಜ್ಞಾನವನ್ನು ತನಗರಿಯದಂತೆ ವ್ಯರ್ಥ ಕೊಲ್ಲುತ್ತಾನೆ. ಆದಕ್ಕಾಗಿಯೇ ಬಸವಣ್ಣನವರು ಕೊಲಬೇಡ ಎಂದರು.

ದೇವ ಸ್ವರೂಪಿ ಜ್ಞಾನ ಉಳ್ಳ ತನುವನ್ನು ಅಸಹಾಯಕ ಭಿಕ್ಷುಕನೆಂದು ಜರಿದು ಸೇವೆಯ ಮಾಡಿದಡೆ ನಿಮ್ಮಾಣೆ ತನುವಿನ ಜ್ಞಾನದ ಮೇಲೆ ಆಣೆ ಎಂದಿದ್ದಾರೆ ಸಿಂಗಿದೇವಯ್ಯ ಶರಣರು.

**ನೀವಲ್ಲದನ್ಯಕ್ಕೆರಗಿದಡೆ ನಿಮ್ಮಾಣೆ ಕಂಡಯ್ಯಾ :**

ತನುವಿನಲ್ಲಿರುವ ಜ್ಞಾನವನ್ನು ಶರಣರು ಕಾಮಧೇನು ಬೇಡಿದ್ದನೀವ ಕಲ್ಪವಲ್ಲರಿ ಎಂದು ಸ್ತುತಿಸಿದ್ದಾರೆ. ಬಸವಣ್ಣ ನವರು ಬೇಡಿದಡೆ ಎನ್ನೊಡೆಯನ ಬೇಡುವೆ ಎಂದಿದ್ದಾರೆ. ಅನ್ಯರು ತನ್ನಂತೆ ಇರುವ ತನುವುಳ್ಳವರು. ಅವರು ಕೊಟ್ಟರೆ ಲೋಹ,ಕರೆನ್ಸಿ,ಅನ್ನ , ವಸ್ತ್ರ ಕೊಟ್ಟಾರು. ಅವು ಕೂಡಾ ಅವರಿಂದ ನಿರ್ಮಾಣವಾದುದಲ್ಲ. ಅವುಗಳಿಗೆ ದಾಸನಾಗುವುದೇ? ನಾನು ಬೇಡಿದರೆ ನನ್ನ ಒಡೆಯನಾದ ನಿನ್ನನ್ನೆ (ಜ್ಞಾನ) ಬೇಡುವೆ ನಿನ್ನನ್ನಲ್ಲದೆ ಅನ್ಯಕ್ಕೆರಗಲಾರೆ, ವಸ್ತ್ರ ಒಡವೆ ದ್ರವ್ಯಕ್ಕೆ ದಾಸನಾಗಲಾರೆ ಎಂದಿದ್ದಾರೆ ಸಿಂಗಿದೇವಯ್ಯ .

**ಎನ್ನ ಸತಿಗಲ್ಲದನ್ಯ ಸತಿಗಳುಪಿದಡೆ ನಿಮ್ಮಾಣೆ ಕಂಡಯ್ಯಾ, ತನು ಮನ ಧನ ವಂಚನೆಯಾದಡೆ ನಾಚಯ್ಯ ಪ್ರಿಯ ಮಲ್ಲಿನಾಥಯ್ಯ ನಿಮ್ಮಾಣೆ ಕಂಡಯ್ಯಾ :**

ಮದುವೆಯಾದವರು ಶ್ರೀರಾಮಚಂದ್ರರಲ್ಲ. ಮದುವೆಯಾಗದ ಸ್ವಾಮಿಗಳು ಬ್ರಹ್ಮ ಚಾರಿಗಳಲ್ಲ. ನಿಯಂತ್ರಣದಲ್ಲಿರುವ ಹಾದರಿಗರು. ಎನ್ನ ಸತಿಗಲ್ಲದನ್ಯಸತಿಗಳುಪಿದಡೆ ನಿಮ್ಮಾಣೆ ಎನ್ನುವ ಶಕ್ತಿ ತನುವಿನ ಜ್ಞಾನ ಬಳಕೆ ಮಾಡಿಕೊಂಡ ಸಮರ್ಥ ಮಹಾಜ್ಞಾನಿಗೆ ಮಾತ್ರ ಸಾಧ್ಯ. ಶರಣ ಸಂತ ಋಷಿ ಮುನಿಗಳಿಗೆ ಮಾತ್ರ ಸಾಧ್ಯ. ಜ್ಞಾನ ಬಳಕೆ ಮಾಡಿಕೊಂಡರೆ ಸಕಲರಿಗೂ ಸಾಧ್ಯ!

ಮದುವೆಯಾದ ತನು ಮತ್ತೊಂದು ತನುವಿನ ರೂಪಕ್ಕೆ ಮಾರುಹೋಗುತ್ತದೆ. ಸಮಾಜಕ್ಕಂಜಿ ಮನದಲ್ಲಿ ಹಾದರ ಮಾಡುತ್ತದೆ. ಅದಕ್ಕೂ ತೃಪ್ತಿಯಾಗದ ತನು ತನ್ನ ಸತಿ ಅಥವಾ ಪತಿಯೊಂದಿಗೆ ತಾನು ನೋಡಿದ ಆ ರೂಪದೊಂದಿಗೆ ಭೋಗಿಸುತ್ತದೆ. ಹೀಗೆ ಹಾದರಿಗ ಮತ್ತು ಶೀಲವಂತನ ಎರಡು ಪಾತ್ರಗಳನ್ನು ಮನ ಪ್ರತಿ ಕ್ಷಣ ಮಾಡುತ್ತಲೇ ಇರುತ್ತದೆ. ನಿಯಂತ್ರಣದಲ್ಲಿದ್ದ ತನು ಶೀಲವಂತ ! ಭೋಗಕ್ಕೆ ಗುರಿಯಾದ ತನು ಹಾದರಿಗ ವಿಟ, ರಾವಣ, ಕೀಚಕ, ವೇಶ್ಯೆ ಎಂದು ಕರೆಯಿಸಿಕೊಳ್ಳುತ್ತದೆ ! ತನುವಿನಲ್ಲಿರುವ ಈ ಅಜ್ಞಾನ ಕಳೆದುಕೊಂಡು ಸಹಜನಾಗಬೇಕೆಂಬ ಬಯಕೆ ತನುವಿಗೆ ಸಾಧ್ಯವಾಗುವುದಿಲ್ಲ ಕಾರಣ ಜ್ಞಾನಿಯಂತೆ ಕಾವಿ ಹಾಕಿ ಪಾತ್ರ ಮಾಡುತ್ತದೆ ! ಈ ಪಾತ್ರದಿಂದ ಜ್ಞಾನಿಯೆಂದು ತನಗೆ ತಾನು ಸಿದ್ಧವಾಗುವುದಿಲ್ಲ. ಬದಲಾಗಿ ತನು ಮನ ಹಾಗೂ ತನುವಿನ ಜ್ಞಾನಕ್ಕೆ ವಂಚನೆ ಮಾಡಿಕೊಳ್ಳುತ್ತದೆ ! ದಶಗಣ ಸಿಂಗಿದೇವಯ್ಯ ಶರಣರು ತಮ್ಮ ತನುವಿನೊಡೆಯನಿಗೆ ನಾಚಯ್ಯ ಪ್ರಿಯ ಮಲ್ಲಿನಾಥಯ್ಯ ಎಂದು ನಾಮಕರಣ ಮಾಡಿ, ಆ ಮಹಾಜ್ಞಾನದ ಮೇಲೆ ಆಣೆ ಇಟ್ಟು ಕೊಂಡಿದ್ದಾರೆ. ನನ್ನ ತನು ಮನ ಧನವನ್ನು ವಂಚನೆ ಮಾಡಿಕೊಳ್ಳುವುದಿಲ್ಲ ಎಂದು ಸಾಕ್ಷಿಯಾಗಿ ನುಡಿದಿದ್ದಾರೆ.

ಜ್ಞಾನ ಎನ್ನುವುದು ತನುವಿನ ಸುಖ. ವೇಷ ಹಾಕಿ ಜ್ಞಾನಿ ಎಂದು ಮತ್ತೊಬ್ಬರಿಗೆ ತೋರಿಸುವುದು ಸಾಧ್ಯವಾಗದ ಮಾತು. ಹಾಗೆ ನೋಡಿ ಜ್ಞಾನಿ ಎಂದು ದೃಢೀಕರಿಸುವುದೂ ಸಾಧ್ಯವಾಗದ ಮಾತು. ವಂಚನೆಗೊಳಗಾಗದೆ ತನುವಿನ ಜ್ಞಾನ ತನುವೇ ಪಡೆದುಕೊಂಡು ಸುಖಿಸಬೇಕು.

□

# ಆರು ಸ್ಥಲ ಒಡಗೂಡಿದ ತನುವೇ ಮಹಾಸ್ಥಲ !

**ಆಸೆಯ ಬಿಟ್ಟಡೆ ಭಕ್ತರೆಂಬೆ. ವೇಷವ ಬಿಟ್ಟಡೆ ಮಾಹೇಶ್ವರರೆಂಬೆ. ಭವ ಪಾಶವ**
**ಬಿಟ್ಟಡೆ ಪ್ರಸಾದಿಯೆಂಬೆ. ಭಾವ ಘಟಿಸಿದಡೆ ಪ್ರಾಣಲಿಂಗಿ ಎಂಬೆ.**
**ಬಯಕೆ ನಿಂದಡೆ ಶರಣನೆಂಬೆ. ಅರಿವು ಶೂನ್ಯವಾದಡೆ ಐಕ್ಯನೆಂಬೆ.**
**ಈ ಷಡುಸ್ಥಲದ ಮಹಾಸ್ಥಲದಲ್ಲಿ ಒಡಗೂಡಿ ನಿಂದುದ**
**ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲ**
**ರಾಜೇಶ್ವರಲಿಂಗಕ್ಕಲ್ಲದೆ ಇಲ್ಲವೆಂಬೆ.**

**-ಬಾಚಿ ಕಾಯಕದ ಬಸವಣ್ಣ ಶರಣರು**

ನಿಯಂತ್ರಣದಲ್ಲಿದ್ದ ತನು ತೋರಿಕೆಗಾಗಿ ಮುಖವಾಡ ಧರಿಸಿ ಆಯಾ ಪಾತ್ರದಲ್ಲಿ ಅಭಿನಯಿಸುತ್ತದೆ. ಭೂಮಿ ಹೇಮ ವಿಷಯಕ್ಕಾಗಿ ಹಾತೊರೆಯುತ್ತಿರುತ್ತದೆ.ಸಂದರ್ಭಾನುಸಾರ ಮನದಲ್ಲಿ ಹಾದರ ನಡೆದೇ ಇರುತ್ತದೆ. ಅವಕಾಶ ಸಿಕ್ಕರೆ ಮನದ ಆಸೆ ತನುವಿನ ಮೂಲಕ ಈಡೇರಿಸಿಕೊಳ್ಳುತ್ತದೆ. ಹೀಗೆ ನಿಯಂತ್ರಣದಲ್ಲಿದ್ದ ತನು ಭಕ್ತ ತನುವಲ್ಲ; ಭೂಮಿ ಹೇಮ ವಿಷಯವನ್ನು ಅರಿವಿನಿಂದ ತಿಳಿದು ಸಹಜವಾಗಿ ಬಿಟ್ಟ ತನು ಭಕ್ತತನು.

ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಐಕ್ಯ ಭಕ್ತ ಎನ್ನುವ ಶಬ್ದಗಳು ವೇಷದಿಂದ ಬಂದವುಗಳಲ್ಲ. ಜಾತಿಯಿಂದ ಬಂದವುಗಳೂ ಅಲ್ಲ. ತನುವಿನಲ್ಲಿ ಉಂಟಾಗುವ ತುಮುಲಗಳನ್ನು ಅರಿವಿನ ಟೆಕ್ನಿಕ್‌ನಿಂದ ಕಳೆದುಕೊಂಡು ಸಹಜವಾಗಿರುವುದು. ವೇಷದ ಗುರುವಿಗೆ ಭಕ್ತಿ ಮಾಡುವುದಲ್ಲ. ತನ್ನ ತನುವಿನಲ್ಲಿರುವ ಅರಿವಿಗೆ ತನುವಿನ ಮನದಿಂದ ತಿಳಿದು ಭಕ್ತಿ ಮಾಡುವುದೇ ಭಕ್ತಿ. ಇದು ತನಗೆ ತಾನೇ ಕೊಟ್ಟುಕೊಂಡ ಸರ್ಟಿಫಿಕೇಟ್.

**ಪ್ರಸಾದಿ:** ತಟ್ಟೆಯಲ್ಲಿರುವುದೆಲ್ಲ ಬಿಡದಂತೆ ತಿನ್ನುವುದಲ್ಲ. ತನುವಿಗೆ ಬಡಿದ ಶಬ್ದ , ಸ್ಪರ್ಶ,ವಾಸನೆ,ರುಚಿಗಳಿಂದ ವಿಕೃತನಾಗದೆ, ಆನಂದದಿಂದ ಸ್ವೀಕರಿಸುವವನೇ ಪ್ರಸಾದಿ.

ಭಾವ ಎಂದೂ ದುರ್ಭಾವವಾಗದಿದ್ದೊಡೆ ಪ್ರಾಣಲಿಂಗಿ. ಏನನ್ನೂ ಬಯಸದಿದ್ದವನೇ ಶರಣ. ವೇಷ ಹಾಕಿದವನು ಮಾಹೇಶ್ವರನಲ್ಲ. ಅರಿವಿನ ಪಾಲನೆ ಮಾಡಿದವನೇ ಮಾಹೇಶ್ವರ.

**ಐಕ್ಯ :** ಎಲ್ಲ ತನುಗಳಲ್ಲಿಯೂ ಅರಿವಿದೆ. ತಿಳಿ ಹೇಳಲು ಗುರುವೇಷ ಹಾಕಿ ವ್ಯವಹಾರ ಮಾಡುವ ಅಗತ್ಯವಿಲ್ಲ; ತನಗೂ ಇತರ ತನುಗಳಿಗೂ ಮೋಸ ಮಾಡಿದಂತೆ. ಈ ಸೂಕ್ಷ್ಮತೆಯನ್ನು ತಿಳಿದು ಅರಿವಿನಲ್ಲಿ ಐಕ್ಯವಾಗುವುದು.

ಪ್ರಾಣ ಕಳೆದುಕೊಂಡ ತನು ಹೊಗಳಿಕೆ ತೆಗಳಿಕೆಗೆ ವಿಕೃತವಾಗಲರಿಯದು. ಹಾಗೆಯೇ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಸ್ಥಲಗಳನ್ನು ದಾಟಿ,ಐಕ್ಯಸ್ಥಲದಲ್ಲಿ ನಿಂತ ತನು ವಿಕೃತವಾಗಲರಿಯದು. ಅಣು ಬಾಂಬುಗಳ ನಿಷ್ಕ್ರಿಯ ತಜ್ಞನಂತೆ ಶಬ್ದಗಳನ್ನು ಅರಿವಿನಿಂದ ನಿಷ್ಕ್ರಿಯೆಗೊಳಿಸಿ ನಿಶ್ಯಬ್ದ ವೇದಿಯಾಗುತ್ತಾನೆ.

ಇದು ಜಪ ತಪ ಪೂಜೆ ಯೋಗಗಳಿಂದ ಸಾಧ್ಯವಾಗುವುದಲ್ಲ.ಜಾತಿಮತ ಪಂಥಗಳಿಗೆ ಸೀಮಿತವಾದದ್ದಲ್ಲ. ಹೆಣ್ಣು ಗಂಡು ಎಂಬ ತಾರತಮ್ಯದ ಅಗತ್ಯವೂ ಇಲ್ಲ.ತನು ಮನ ಅರಿವಿಗೆ ಮಾತ್ರ

ಸಂಬಂಧಪಟ್ಟದ್ದು. ತನುವಿನ ಅರಿವಿನಲ್ಲಿ ಮನ ಲೀನಗೊಳಿಸಿ ಅರಿವಿನ ತನುವಾಗುವುದು.

ಈ ತಾಂತ್ರಿಕ ಜ್ಞಾನ ಕ್ರಿಷ್ಣ ಬುದ್ಧ ಕ್ರಿಸ್ತ ಮಹಾವೀರ ಹಾಗು ಶರಣರಿಗೆ, ದಾಸರಿಗೆ ಗೊತ್ತಿತ್ತು. ಅದನ್ನೇ ಅವರು ಸೂತ್ರ ರೂಪದಲ್ಲಿ ಬರೆದಿಟ್ಟು ಹೋಗಿದ್ದಾರೆ. ಶಿಕ್ಷಣದಲ್ಲಿ, ಮನೆಯಲ್ಲಿ, ಸಮಾಜದಲ್ಲಿ, ಕಾರ್ಯಾಲಯ, ಕಾರ್ಖಾನೆ, ವ್ಯಾಪಾರದಲ್ಲಿ ಪ್ರಾಯೋಗಿಕವಾಗಿ ಬಳಕೆಗೆ ತಂದರೆ ತನುಗಳು ಅರಿವಿನಿಂದ ಆನಂದದಿಂದ ಜೀವಿಸಲು ಸಾಧ್ಯ ! ಆರು ಸ್ಥಲಗಳು ಒಡಗೂಡಿದ ತನು ಮಹಾಸ್ಥಲವಾಗುವುದು ಸಾಧ್ಯ.

□

---

**ಅರಿವಿನ ಪರಿಮಳ :**

□ ಪ್ರಾಣ ಕಳೆದುಕೊಂಡ ತನು ಹೊಗಳಿಕೆ ತೆಗಳಿಕೆಗೆ ವಿಕೃತವಾಗಲರಿಯದು. ಹಾಗೆಯೇ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣ ಸ್ಥಲಗಳನ್ನು ದಾಟಿ,ಐಕ್ಯಸ್ಥಲದಲ್ಲಿ ನಿಂತ ತನು ವಿಕೃತವಾಗಲರಿಯದು. ಅಣು ಬಾಂಬುಗಳ ನಿಷ್ಕ್ರಿಯ ತಜ್ಞನಂತೆ ಶಬ್ದಗಳನ್ನು ಅರಿವಿನಿಂದ ನಿಷ್ಕ್ರಿಯೆಗೊಳಿಸಿ ನಿಶ್ಯಬ್ದ ವೇದಿಯಾಗುತ್ತಾನೆ.

# ತೋರಿ ಅಡಗುವ ಭ್ರಾಂತಿ

**ಸ್ವಪ್ನದಲ್ಲಿ ಸಕಲ ಭೋಗಂಗಳ ಕಂಡು**
**ಎಚ್ಚೆತ್ತು ನೋಡಿದಡೆ, ಮತ್ತಲ್ಲಿಯೇ ಬಟ್ಟಬಯಲಾಯಿತು.**
**ಅದು ತನುವಿನ ಇರವು, ಮನದ ಭ್ರಾಂತು,**
**ತೋರಿ ಅಡಗುವ ಭೇದ,**
**ಏಣಾಂಕಧರ ಸೋಮೇಶ್ವರ ಲಿಂಗದಲ್ಲಿಯೇ ಐಕ್ಯ.**

**- ಬಿಬ್ಬಿ ಬಾಚಯ್ಯ ಶರಣರು**

ಜಾಗ್ರತ್ ಸ್ವಪ್ನ ಸುಶುಪ್ತಿ ತನುವಿನ ಮೂರು ಅವಸ್ಥೆಗಳು. ತನು ಎಚ್ಚರವಿದ್ದಾಗ ಎಲ್ಲ ವಸ್ತುಗಳು ಕಾಣುತ್ತವೆ. ಮನ ತನುವನ್ನು ಆವರಿಸಿರುವುದರಿಂದ ವಸ್ತುಗಳ ನಿಜಸ್ಥಿತಿ ಕಣ್ಣಿಗೆ ಗೋಚರಿಸುವುದಿಲ್ಲ. ಕಾರಣ ಎಚ್ಚರವಿದ್ದರೂ ಕಣ್ಣು ಕುರುಡಾಗಿ ವಸ್ತುವಿನ ಪ್ರತಿರೂಪ ನೋಡುತ್ತದೆ. ಆ ಪ್ರತಿರೂಪದೊಂದಿಗೆ ಮನ ಭೋಗಿಸುತ್ತದೆ. ಇದಕ್ಕೆ ಹಗಲು ಕನಸು ಎನ್ನಬಹುದು.

ಮಲಗಿದಾಗ ಸ್ವಪ್ನ ಬೀಳುತ್ತದೆ. ರಂಭೆ, ಊರ್ವಶಿ ನೋಡಿದ ಸುಂದರ ರೂಪಗಳೊಂದಿಗೆ ತನು ಭೋಗಿಸುತ್ತದೆ. ಶ್ರೀಮಂತ, ಅಧಿಕಾರಿಯಾಗುತ್ತದೆ. ಮಲಗಿದಾಗ ಇದು ಸತ್ಯವಾದರೂ ಎಚ್ಚೆತ್ತು ನೋಡಿದಾಗ ಏನೂ ಗೋಚರಿಸುವುದಿಲ್ಲ. ಇದು ತನುವಿನ ಇರುವು, ಮನದ ಭ್ರಾಂತಿ, ತೋರುತ್ತದೆ. ತನುವಿನಲ್ಲಿಯೇ ಅಡಗುತ್ತದೆ. ಇದು ಮನದ ಭೇದ.

ಸುಶುಪ್ತಿಯಲ್ಲಿ ತನು ಗಾಢವಾದ ನಿದ್ರೆ ಮಾಡುತ್ತದೆ. ಏನೂ ಗೊತ್ತಾಗುವುದಿಲ್ಲ. ಎಚ್ಚೆತ್ತಾಗ ನಿದ್ರೆಯಲ್ಲಿದ್ದೆ ಎನ್ನುವುದು ಮಾತ್ರ ಗೋಚರಿಸುತ್ತದೆ. ಅದು ಸ್ವಪ್ನರಹಿತ ಸುಖನಿದ್ರೆ ಎನ್ನಿಸುತ್ತದೆ.

ತನು ಹಗಲಿನಲ್ಲಿ ಕನಸು ಕಾಣುತ್ತದೆ. ರಾತ್ರಿ ಸ್ವಪ್ನದ ಮೂಲಕ ಕನಸು ಕಾಣುತ್ತದೆ. ಸುಷುಪ್ತಿಯಲ್ಲಿ ಸುಖವಾಗಿ ಮಲಗಿ ಎಚ್ಚೆತ್ತಾಗ ಗೊತ್ತಾಗುತ್ತದೆ. ಇದೆಲ್ಲ ಮನದ ಭ್ರಾಂತಿ ತೋರಿ ಅಡಗುವ ಭೇದ. ತನುವಿನಲ್ಲಿಯೇ ಚಿತ್ರದ ಮೂಲಕ ತೋರಿತು, ತನುವಿನಲ್ಲಿಯೇ ಅಡಗಿತು.

ಸಮುದ್ರದ ನೀರೂ ನೀರೇ ; ಅಲೆಯೂ ನೀರೆ. ಇವೆರಡೂ ನೀರು ಆದರೂ ಹೆಸರು ಬೇರೆ ಬೇರೆ. ಒಂದಕ್ಕೆ ಸಮುದ್ರ ಮತ್ತೊಂದಕ್ಕೆ ಅಲೆ ಎಂದು ಹೆಸರು. ಅಲೆ ಮತ್ತು ಸಮುದ್ರ ನೀರಲ್ಲಿಯೇ ಐಕ್ಯ. ಹಾಗೆ ತನುವಿನ ಅರಿವು ಪರಿಚಯವಾದರೆ ಮನ ಮತ್ತು ತನು ಅರಿವಿನಲ್ಲಿಯೇ ಐಕ್ಯ. ಸೋಮೇಶ್ವರಲಿಂಗ ತಾನೆ.

□

# ಜ್ಞಾನ ಜಲದ ಹತ್ತು ತತ್ವಗಳು

**ಕಲ್ಪಿತೋದಕವೊಂದು, ಅರ್ಪಣೋದಕ ಮೂರು,**
**ಮತ್ತೆ ಅಂಗೋದಕ ತ್ರಯವಾಗಿಯೂ**
**ಮಿಕ್ಕ ಪ್ರಸಾದೋದಕ ಅವು ಮೂರು.**
**ಸತ್ವರಜ ತಮವನತಿಗಳೆದವರಿಗಲ್ಲದೆ,**
**ಹತ್ತು ಪಾದೋದಕವನರಿಯಲರಿದು.**
**ತಾನು ಚಿತ್ತ ಶುದ್ಧನಾಗಿ ಗುರುಕರುಣದಿಂದವೆ**
**ಹತ್ತು ಪಾದೋದಕವ ಗ್ರಹಿಸುವ ಭಕ್ತರಿಗೆ ಸಂದಿಲ್ಲದಿಹೆ.**
**ಅವನು ನೀನು, ಮುತ್ತು ನೀರನು ಕೂಡಿದಾನಂದ ಭೇದದೊಲು,**
**ತತ್ವಮಸಿಯಪ್ಪನೈ ಶ್ರೀಮಲ್ಲಿಕಾರ್ಜುನಾ.**

**-ಮಲ್ಲಿಕಾರ್ಜುನ ಪಂಡಿತಾರಾಧ್ಯ ಶರಣರು**

ನಿಜದರಿವು ತನುವಿನಲ್ಲಿದ್ದರೂ ಇಲ್ಲದ ಬಂಧನವನು ಸೃಷ್ಟಿ ಮಾಡಿಕೊಂಡು, ತನುವಿನಲ್ಲಿಯೇ ಮರೆಯಾದ ಅರಿವನ್ನು ತಿಳಿಯಲು ಸಾಧ್ಯವಾಗುತ್ತಿಲ್ಲ. ಮರೆತದ್ದು ದೊರೆಯಿತೆಂದು ಆಧ್ಯಾತ್ಮ, ದ್ವೈತ, ಅದ್ವೈತವನು, ಆಗಮ ಉಪನಿಷತ್ತುಗಳನ್ನು ಸಂಪಾದಿಸಿ ಸಂಗ್ರಹಿಸಲು ಹೋದರೆ ಅದು ಕೂಡಾ ತನುವಿನಿಂದಲೇ ಬಂದು ಪುಸ್ತಕ ಸೇರಿದೆ! ಪುಸ್ತಕದ ಅರಿವು ತನುವಿನ ಮರೆವನ್ನು ದೂರ ಮಾಡಲು ಸಾಧ್ಯವೆ? ಆ ಅರಿವಿನ ಮೇಲೆಯೇ ಮರೆವು ಸವಾರಿ ಮಾಡಿ ಅರಿವೇ ತಾನೆಂದು ಹೇಳುತ್ತಾ ತಿರುಗುತ್ತದೆ. ತನುವಿನ ಮರೆವನ್ನು ಕಳೆದು ಕೊಳ್ಳಲು ಶರಣರು ಸಾವಿರಾರು ಸೂತ್ರಗಳನ್ನು ಹೆಣೆದಿದ್ದಾರೆ. ಆ ಪ್ರಯತ್ನದ ಹತ್ತು ಸೂತ್ರಗಳು ಈ ವಚನದಲ್ಲಿವೆ.

**ಕಲ್ಪಿತೋದಕವೊಂದು, ಅರ್ಪಣೋದಕ ಮೂರು:**

ಉದಕದ ಬಿಂದುವಿನಿಂದಾದ ತನು. ಆ ಉದಕದಿಂದಲೇ ಗುರು ಲಿಂಗ ಜಂಗಮ, (ಜ್ಞಾನ ಅರಿವು ಆಚರಣೆ) ಎಂಬ ಮೂರು ಶಾಖೆಗಳು. ಈ ಮೂರು ಶಾಖೆಗಳಿಗೆ ಕಲ್ಪಿತೋದಕವೆಂಬ ಮನ ಸಮರ್ಪಣೆಯಾಗಬೇಕು.

**ಮತ್ತೆ ಅಂಗೋದಕ ತ್ರಯವಾಗಿಯೂ:**

ಉದಕದಿಂದ ಹುಟ್ಟಿದ ಅಂಗ , ಸ್ಥೂಲ ಸೂಕ್ಷ್ಮ ಕಾರಣಾಂಗಗಳೆಂದು ಮೂರು ಪಂಗಡಗಳಾಯಿತು.

**ಸತ್ವ ರಜ ತಮವನತಿಗಳೆದವರಿಗಲ್ಲದೆ, ಹತ್ತು ಪಾದೋದಕವನರಿಯಲರಿದು:**

ಗರ್ಭದಲ್ಲಿ ಪ್ರವೇಶವಾದುದು ಒಂದೇ ಉದಕದ ಬಿಂದು. ಹೊರ ಬಂದುದು ಕೂಡ ಒಂದೇ ಉದಕದ ತನು. ಆ ಉದಕದ ತನುವಿನಲ್ಲಿ (ಮನ) ಕಲ್ಪಿತೋದಕ ಒಂದು, ಗುರು ಲಿಂಗ ಜಂಗಮ ಎಂಬ ಅರ್ಪಣೋದಕ ಮೂರು, ಸ್ಥೂಲ ಸೂಕ್ಷ್ಮ ಕಾರಣಗಳೆಂಬ ಅಂಗೋದಕ ಮೂರು. ಸತ್ವ ರಜ ತಮ ಎಂಬ ಮೂರು ಗುಣಗಳು ಸೇರಿ ಒಟ್ಟು ಹತ್ತು ಪಾದೋದಕವನು ಜ್ಞಾನದಿಂದ ತಿಳಿದು.

**ತಾನು ಚಿತ್ತ ಶುದ್ಧನಾಗಿ ಗುರುಕರುಣದಿಂದವೆ ಹತ್ತು ಪಾದೋದಕವ ಗ್ರಹಿಸುವ ಭಕ್ತನಿಗೆ ಸಂದಿಲ್ಲದಿಹೆ:**

ತನುವಿನ ಕಣಕಣದಲ್ಲಿರುವ (ಪಾದೋದಕ) ಹತ್ತು ಜ್ಞಾನ ಜಲ ಮಾರ್ಗಗಳನು ಅರಿವಿನಿಂದ ಗುರುವಿನ ಕರುಣೆಯ ಮೂಲಕ ಸೂತ್ರದಿಂದ ತಿಳಿಯುವ ಭಕ್ತನಿಗೆ ತನುವಿನಲ್ಲಿಯೇ ಸಂದಿಲ್ಲದಂತೆ ಬ್ರಹ್ಮಜ್ಞಾನ ಒಲಿಯುವುದು.

**ಅವನು ನೀನು, ಮುತ್ತು ನೀರನು ಕೂಡಿದಾನಂದ ಭೇದದೊಲು, ತತ್ತ್ವಮಸಿಯಪ್ಪನೈ ಶ್ರೀಮಲ್ಲಿಕಾರ್ಜುನಾ :**

ಅವನೆಂದರೆ ದೇವರು, ನಾನೆಂದರೆ ಭಕ್ತ. ಅವನೆಂದರೆ ಘನ ನಾನೆಂದರೆ ಮನ. ಅವನೆಂದರೆ ಅರಿವು, ನಾನೆಂದರೆ ಮರೆವು. ಅವನೆಂದರೆ ಗುರು, ನಾನೆಂದರೆ ಶಿಷ್ಯ. ಅವನೆಂದರೆ ಪತಿ, ನಾನೆಂದರೆ ಪಶು. ಅವನೆಂದರೆ ಲಿಂಗಪತಿ ನಾನೆಂದರೆ ಶರಣಸತಿ, ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ. ಕಣ್ಣಿನಲ್ಲಿ ನೋಡುವ ಅರಿವಿದೆ; ಆ ಅರಿವಿನಲ್ಲಿ ಕಲ್ಪನೆಯ ಹಾದರಮಾಡಿ ಬೇಡುವ ಮನವೆಂಬ ದುರ್ಗುಣವಿದೆ. ಈ ಮನ ಅರಿವಿನಲ್ಲಿ ಅರ್ಪಣೆಯಾದರೆ ಕಣ್ಣು ವಸ್ತುವನ್ನು ಅರಿವಿನಿಂದ ನೋಡುತ್ತದೆ; ಬೇಡುವುದಿಲ್ಲ.

ಮುತ್ತು ನೀರನು ಕೂಡಿ ಮತ್ತೆ ನೀರಾಗದಂತೆ ಬೆಳಗುತ್ತದೆ. ಹೀಗೆ ಮನ ತನುವಿನ ಜ್ಞಾನ ಜಲದ ಹತ್ತು ತತ್ತ್ವಗಳನು ತಿಳಿದು ಆ ತತ್ವವೇ ತಾನಾಗುತ್ತದೆ. **ತತ್ತ್ವಮಸಿ**ಯಾಗುತ್ತದೆ. ತನುವಿನ ಈ ಹತ್ತು ತತ್ವಗಳ ಆನಂದವನು ಶರಣರು ಓದುಗರಿಗೆ ವಚನದ ಮೂಲಕ ಉಣಬಡಿಸಿದ್ದಾರೆ.

□

---

**ಅರಿವಿನ ಪರಿಮಳ :**

□ ಹೋದರೆ ಅದು ಕೂಡಾ ತನುವಿನಿಂದಲೇ ಬಂದು ಪುಸ್ತಕ ಸೇರಿದೆ! ಪುಸ್ತಕದ ಅರಿವು ತನುವಿನ ಮರೆವನ್ನು ದೂರ ಮಾಡಲು ಸಾಧ್ಯವೆ? ಆ ಅರಿವಿನ ಮೇಲೆಯೇ ಮರೆವು ಸವಾರಿ ಮಾಡಿ ಅರಿವೇ ತಾನೆಂದು ಹೇಳುತ್ತಾ ತಿರುಗುತ್ತದೆ.

# ಅರಿವು ತನುವಿನ ಭಗವದ್ಗೀತೆ

ಆಗಿಲ್ಲದ ಸಿರಿ, ಆಯುಷ್ಯವಿಲ್ಲದ ಬದುಕು.
ಸುಖವಿಲ್ಲದ ಸಂಸಾರ
ಎಳತಟೆಗೊಂಬ ಕಾಯದ ಸಂಗ
ಬಳಲಿಸುವ ಜೀವಭಾವ.
ಇವರ ಕಳವಳವಳಿದಲ್ಲದೆ
ಮಳುಬಾವಿಯ ಸೋಮನ ತಿಳಿಯಬಾರದು.

-ಮಳುಬಾವಿಯ ಸೋಮಣ್ಣ ಶರಣರು

ಸಾಸಿವೆಯಷ್ಟು ಸುಖಕ್ಕೆ ಸಾಗರದಷ್ಟು ದುಃಖ ಹೇರಿಕೊಂಡು ತನು ಸದಾ ಸಂಕಟಪಡುತ್ತದೆ. ಶ್ರೀಮಂತ ಬಡವ ಅಧಿಕಾರಿ ರಾಜಕಾರಣಿ ಪೀಠಾಧಿಪತಿ ಹೆಣ್ಣುಗಂಡು ವೇಷದಲ್ಲಿರುವ ತನುಗಳೆಲ್ಲ ಒಂದೇ. ತನುವಿನಲ್ಲಿರುವ ಮಟೀರಿಯಲ್ ಕೂಡಾ ಒಂದೇ. ಹುದ್ದೆಗಳು ಮಾತ್ರ ಬೇರೆ ಇವೆಲ್ಲ ಹೊರಗಿನವು. ಹೊರಗಿನ ಮಟೀರಿಯಲ್ ಒಳಗಿನ ಮಟೀರಿಯಲ್‌ನ್ನು ಸಂಕಟದಿಂದ ಪಾರು ಮಾಡಲರಿಯವು. ತನುವಿನಲ್ಲಿ ಸಂಕಟ ನಿರ್ಮಾಣಗೊಂಡಿರುವುದೇ ಹೊರಗಿನ ಮಟೀರಿಯಲ್‌ನಿಂದ.

ಒಂದು ತನು ತನ್ನಂತೆ ಇರುವ ಮತ್ತೊಂದು ತನುವಿನೊಂದಿಗೆ ಸುಖಪಡಲು ಬಯಸುತ್ತದೆಯಾದರೂ ಅದು ಸಾಸುವೆಯಷ್ಟೆ ಸುಖ. ಹೆಂಡತಿಯಿದ್ದರೂ ರಾವಣ ಸೀತೆಯನ್ನು ಬಯಸಿ ತನುವಿನೊಂದಿಗೆ ರಾಜ್ಯ ಕಳೆದುಕೊಂಡಂತೆ.

ತನು ಮತ್ತೊಂದು ತನುವಿನೊಂದಿಗೆ ಸುಖಿಸಲು ಹವಣಿಸುತ್ತದೆ. ಸಾಧ್ಯವಾಗದಿದ್ದರೆ ಮನದಲ್ಲಿ ಹಾದರಮಾಡಿ ಸದಾ ಸಂಕಟಪಡುತ್ತದೆ. ಇದು ತನುವಿನ ಅಜ್ಞಾನದ ಗುಣ. ಜಾತಿ ಮತ ಪಂಥ ಧರ್ಮ ಪೀಠ ಅಧಿಕಾರ ಶ್ರೀಮಂತ ಬಡವ ಎನ್ನುವ ಹುದ್ದೆಯ ತನುಗಳಿಗೂ ಇದು ಹೊರತಾದುದಲ್ಲ. ವಿದ್ಯೆ ಪದವಿ ಪುರಸ್ಕಾರ ಗೌರವಗಳು ಇದಕ್ಕೆ ಸಂಬಂಧವಿಲ್ಲ.

ಎಂಭತ್ತೆಂಟು ವರ್ಷದ ಹಿರಿಯ ಎನ್.ಡಿ. ತಿವಾರಿ, ಪೀಠಾಧಿಪತಿ ನಿತ್ಯಾನಂದ ಹೆಸರಿನ ತನುಗಳು ಸಿಕ್ಕಿ ಹಾಕಿಕೊಂಡವು. ಆ ಎರಡು ತನುಗಳನ್ನು ನಿಂದಿಸಿದ ಯಾವ ತನುಗಳೂ ಶುದ್ಧ ಚಾರಿತ್ರ್ಯದ ತನುಗಳಲ್ಲ. ಹಾಗೆ ನಿಂದಿಸಿ ಚಾರಿತ್ರ್ಯ ರೂಪಿಸುವ ಸೋಗಿನ ವೇಷದಲ್ಲಿ ತನು ಮುಂದುವರಿಯುತ್ತದೆ. ಇದು ತನುವಿನ ಮನದ ಅಜ್ಞಾನ. ಈ ಅಜ್ಞಾನ ಒಂದು ತನುವಿಗೆ ಇದೆ ಮತ್ತೊಂದು ತನುವಿಗೆ ಇಲ್ಲವೆಂದಲ್ಲ. ಧಾರ್ಮಿಕ ವಸ್ತ್ರ ಹೊದ್ದು ಸುಂದರವಾಗಿ ಮಾತನಾಡುವ ತನು ಶುದ್ಧವೆಂದಲ್ಲ. ತನುವಿನ ಮನ ಪುಸ್ತಕದ ಮಾತು ಸಂಗ್ರಹಿಸಿಕೊಂಡು ಜ್ಞಾನದ ಮೇಲೆ ಸವಾರಿ ಮಾಡುತ್ತದೆ ಅಷ್ಟೆ. ಆಡುವ ಮಾತಿಗೂ ಮಾಡುವ ಕೆಲಸಕ್ಕೂ ಸಂಬಂಧವೇ ಇರುವುದಿಲ್ಲ.

ತನುವನ್ನು ತನ್ನತ್ತ ಸೆಳೆಯುವ ಅಜ್ಞಾನದ ಮನವೂ ತನುವಿನಲ್ಲಿದೆ ; ತನುವನ್ನು ಜ್ಞಾನದೆಡೆಗೆ ಸೆಳೆಯುವ ಅರಿವೂ ತನುವಿನಲ್ಲಿದೆ. ಜ್ಞಾನ : ತನುವಿನ ಆಭರಣ. ಮನ:ಜ್ಞಾನ ತನುವನ್ನಾವರಿಸಿದ ಅಜ್ಞಾನ. ತನು, ನಿರಪರಾಧಿ. ಜ್ಞಾನ ಮತ್ತು ಮನದ ಮಾತು ಕೇಳುವ ಸ್ವಂತಿಕೆಯಿಲ್ಲದ ಉಪಕ

ರಣ. ಜ್ಞಾನದ ಮಾತು ಕೇಳಿದರೆ ಜ್ಞಾನಿಯಾಗುತ್ತದೆ. ಮನದ ಮಾತು ಕೇಳಿದರೆ ರಕ್ಕಸನೆಂಬ ಹೆಸರು ಪಡೆಯುತ್ತದೆ.

ಭೂಮಿ ಚಿನ್ನ ಕರೆನ್ಸಿ ಹಾಗೂ ಮದಿರೆ ಮಾದಕ ದ್ರವ್ಯಗಳನ್ನು , ರುಚಿಕರವಾದ ಪದಾರ್ಥಗಳನ್ನು ಕಣ್ಣು ಕಿವಿ ಮೂಗು ಚರ್ಮ ನಾಲಿಗೆ ಮೂಲಕ ಅನುಭವಿಸಲು ತನುವಿಗೆ ಆದೇಶ ನೀಡುತ್ತದೆ. ತನು ಪಡೆಯಲು ಹೋಗಿ ರಕ್ಕಸನಾಗುತ್ತದೆ. ಅರಿವು ಎಚ್ಚರಿಸುತ್ತದೆ. ಮನದ ಬಲ ಅಧಿಕವಾಗಿ ತನುವಿನೊಂದಿಗೆ ಸುಖಿಸುತ್ತದೆ. ***ಕೋತಿ ಮೊಸರನ್ನ ತಿಂದು ಮೇಕೆ ಮೂತಿಗೆ ಸವರಿದಂತೆ.*** ಕಳುವು ಹಾದರವೆಸಗಿ ತನುವಿನೊಂದಿಗೆ ಸುಖಿಸಿದ ಅಪರಾಧಿ ಮನವೆಂಬ ಕೋತಿ ಪಾರಾಗುತ್ತದೆ. ನಿರಪರಾಧಿ ತನು ಸಿಕ್ಕಿಹಾಕಿಕೊಳ್ಳುತ್ತದೆ. ಸಮಾಜ ಸರಕಾರ ಕೋರ್ಟ್ ಪೊಲೀಸರು ನಿರಪರಾಧಿ ತನುವನ್ನು ನೋಡಿ ಶಿಕ್ಷಿಸುತ್ತಾರೆಯೇ ಹೊರತು ಅಪರಾಧಿ ಮನವನ್ನು ಶಿಕ್ಷಿಸುವ ನೈಪುಣ್ಯತೆಯನ್ನು ಹೊಂದಿಲ್ಲ.

ಶಿಕ್ಷೆಗೆ ಗುರಿಯಾದ ತನುವಿನಲ್ಲಿ ಮನ ಪುನಃ ಪ್ರವೇಶ ಮಾಡಿ ಶಿಕ್ಷೆ ನೀಡಿದವರ ಮೇಲೆ ಸೇಡು ತೀರಿಸಿಕೊಳ್ಳಲು ತನುವನ್ನು ಅಣಿಗೊಳಿಸುತ್ತದೆ. ಅರಿವು ತಿಳಿಯ ಹೇಳಿ ಸಾಂತ್ವನ ಪಡಿಸುತ್ತದೆ. ಸಾಂತ್ವನದ ಮಾತುಗಳು ಅಪರಾಧಿ ಮನಕ್ಕೆ ಗೋಚರವಾಗುವುದಿಲ್ಲ. ಮನ ಮಾಡುವ ಕಳುವು, ಹಾದರ, ಹಲ್ಲೆ, ಅತ್ಯಾಚಾರ, ಕೊಲೆ, ಭ್ರಷ್ಟಾಚಾರ, ಲಂಚಗುಳಿಯಲ್ಲಿ ಅರಿವು ಭಾಗಿಯಲ್ಲ. ಅರಿವು ತನುವಿನ ಭಗವದ್ಗೀತೆ. ಅದು ನೋಡುವಾಗ ಕಣ್ಣಿನ ಮೂಲಕ ಬೋಧಿಸುತ್ತದೆ. ಕೇಳುವಾಗ ಕಿವಿಯ ಮೂಲಕ ಬೋಧಿಸುತ್ತದೆ. ವಾಸಿಸುವಾಗ ಮೂಗಿನ ಮೂಲಕ ಬೋಧಿಸುತ್ತದೆ. ರುಚಿಸುವಾಗ ನಾಲಿಗೆಯ ಮೂಲಕ ಬೋಧಿಸುತ್ತದೆ. ಸ್ಪರ್ಶಿಸುವಾಗ ಚರ್ಮದ ಮೂಲಕ ಬೋಧಿಸುತ್ತದೆ. ಬೋಧೆ ತಿಳಿಯದ ಮನ ಅನಂತ ಕೋಟಿ ತಪ್ಪು ಮಾಡುತ್ತದೆ. ಎನ್ನ ತಪ್ಪು ಅನಂತ ಕೋಟಿ ನಿಮ್ಮ ಸೈರಣೆಗೆ ಲೆಕ್ಕವಿಲ್ಲ ಎಂದಿದ್ದಾರೆ ಬಸವಣ್ಣನವರು.

ಒಂದು ಭಗವದ್ಗೀತೆಯನ್ನು ಕೋಟಿಗಟ್ಟಲೆ ಗ್ರಂಥಗಳು ವ್ಯಾಖ್ಯಾನಿಸಿವೆ. ಮನ ಸಂಗ್ರಹಿಸಿಕೊಂಡು ತನುಗಳಿಗೆ ಪಾಠ ಮಾಡುತ್ತಲಿವೆ. ಪಠ್ಯಗಳಲ್ಲಿಯೂ ಸೇರಿವೆ. ಮನ ಪಂಡಿತನಾಗಿ, ಹಿಂದು ಮುಸಲ್ಮಾನ, ಕ್ರೈಸ್ತನೆಂದು ತನುಗಳನ್ನು ವಿಂಗಡಿಸಿ ಸಂಕಟಕೊಡ್ಡಿತೇ ಹೊರತು ತನು ತನುಗಳು ಒಂದಾಗುವಂತೆ ಅರಿವಿನ ತನುವಾಗಿ ಪಾಠ ಮಾಡಲಿಲ್ಲ.

ಮನ ತನುವಿನ ಅರಿವನ್ನು ಬಳಕೆ ಮಾಡಿಕೊಂಡು ಆ ಅರಿವೇ ತಾನಾಗುವುದು ಒಂದು ಕ್ರಮಬದ್ಧ ಶಿಕ್ಷಣ. ಇದೊಂದು ತನುವಿನಲ್ಲಿಯೇ ನಡೆಯುವ ಮಹಾ ಯಜ್ಞ. ಸಾಧ್ಯವಾದರೆ ಮತ್ತೊಂದು ಅರಿವಿನ ತನುವಿನ ಸಹಾಯ ಪಡೆಯಬಹುದು. ಸಹಾಯ ಪಡೆಯುವ, ಸಹಾಯ ಮಾಡುವ ತನುವಿನ ಅರಿವು ಒಂದೇ ಎಂದು ಎರಡು ತನುಗಳೂ ತಿಳಿದಿರಬೇಕು. ತನು ಗುರುವಿನ ವೇಷ, ಶಿಷ್ಯನ ವೇಷ ಕಳಚಿಕೊಂಡಿರಬೇಕು. ಅಲ್ಲಿಯವರೆಗೆ ತನುವಿನ ಅರಿಯುವ ರುಚಿಯೆಂದರೇನೆಂದು ಮನಕ್ಕೆ ತಿಳಿಯುವುದಿಲ್ಲ. ಭೂಮಿ ಚಿನ್ನ ವಿಷಯ ಅಧಿಕಾರ ಪದವಿಯ ರುಚಿಗೆ ಬೆನ್ನುಹತ್ತಿದ ಮನ ತಿಳಿದರೆ ಅರಿವಿನ ರುಚಿಗೆ ಬೆನ್ನುಹತ್ತುತ್ತದೆ. ಮುಳುಬಾವಿಯ ಸೋಮನ ತಿಳಿದು ಆ ಸೋಮೇಶ್ವರನೇ ತಾನಾಗುತ್ತದೆ. ಅರಿವಿನ ಗೀತೆಯ ತಿಳಿದು ಭಗವದ್ಗೀತೆಯೇ ತಾನಾಗುತ್ತದೆ.

□

# ರಂಜನೆಗೆ ಒಳಗಾಗಿ ರತ್ನ ಕೆಡಿಸಿಕೊಂಡ ತನು

**ರಂಜಕರೆಲ್ಲರೂ ರತ್ನವ ಕೆಡಿಸಿ,**
**ಅಂಧಕಾರದಲ್ಲಿ ಬಂದು ಅರಸುವರು,**
**ಅದರಂದ ತಿಳಿಯದು, ಛಂದಕಾಣಬಾರದು.**
**ಬಂದಬಟ್ಟೆಯಲ್ಲಿ ತೊಳಲುವರು.**
**ಸಂದೇಹವಿಡಿದು ಬಂದವರೆಲ್ಲಾ**
**ಅಂದಂದಿಗೆ ದೂರ, ಮಾರೇಶ್ವರಾ.**

**- ಶರಣ ಮಾರೇಶ್ವರೊಡೆಯ**

**ರಂಜಕರೆಲ್ಲರೂ ರತ್ನವ ಕೆಡಿಸಿ ಅಂಧಕಾರದಲ್ಲಿ ಬಂದು ಅರಸುವರು;**

ಭೂಮಿ ಹೇಮ ವಿಷಯದ ರಂಜನೆಯಲ್ಲಿ ಬೆರೆತ ತನು, ಭೂಮಿ ಹೇಮ ವಿಷಯ ವೆಂಬ ಅಂಧಕಾರದಲ್ಲಿಯೇ ಜ್ಞಾನ ಹುಡುಕಲು ಹೊರಟಿದೆ. ಹಣ ಆಭರಣ ಭೂಮಿಯನ್ನು ಗುರುವಿಗೆ, ದೇವಸ್ಥಾನಕ್ಕೆ, ಪುಣ್ಯ ಕ್ಷೇತ್ರಕ್ಕೆ ನೀಡಿ ಸಮಾಧಾನ ಪಡೆಯಲು ಯತ್ನಿಸುತ್ತದೆ.

ಜ್ಞಾನವೆನ್ನುವುದು ತನುವಿನ ಕಣ್ಣು ಕಿವಿ ಮೂಗು ನಾಲಿಗೆ ಚರ್ಮ ಇವು ತನುವಿನ ಜ್ಞಾನ ಸಂಪತ್ತು. ತನುವಿನ ಅಲಂಕಾರದ ಐದು ರತ್ನದ ಕಿರೀಟಗಳು. ನೋಡುವ ನೋಟದಲ್ಲಿ ಅಜ್ಞಾನ ಬೆರೆತುದರಿಂದ ವಸ್ತುವಿನ ಸತ್ಯ ಗೋಚರಕ್ಕೆ ಬಾರದೆ ನೋಡಬಾರದ್ದನ್ನು ಕಣ್ಣು ನೋಡಿ ತನುವನ್ನು ಸಂಕಟಕ್ಕೀಡು ಮಾಡುತ್ತದೆ. ಜ್ಞಾನ ಕಣ್ಣಿನಲ್ಲಿಯೇ ಮರೆಯಾಗಿ ರತ್ನ ವ್ಯರ್ಥ ಕೆಟ್ಟು ಹೋಗುತ್ತದೆ.

ತನು ಮತ್ತೊಂದು ತನುವಿಗೆ ಜನ್ಮ ಬಯಸಿ ತನುವಿನೊಂದಿಗೆ ಋತು ಕ್ರಿಯೆಗೆ ಒಳಗಾ ಗುತ್ತದೆ. ಇದು ಸಹಜ. ಗಿಡ ಮರ ಬಳ್ಳಿ ಪಶು ಪಕ್ಷಿ ಜಲಚರಗಳು ಇದಕ್ಕೆ ಹೊರತಲ್ಲ. ಆದರೆ, ಕಣ್ಣು ಇದಕ್ಕೆ ಹೊರತಾಗಿ ತನುವಿನಂತೆ ಇರುವ ತನುವನ್ನು ಮತ್ತೆ ಮತ್ತೆ ವಿಕೃತವಾಗಿ ಸುಖಿಸುವ ಆಸೆಯನ್ನು ತನುವಿಗೆ ರವಾನೆ ಮಾಡುತ್ತದೆ, ಮನದಲ್ಲಿಯೇ ಹಾದರ ಮಾಡುತ್ತದೆ. ಹೊಂಚು ಹಾಕುತ್ತದೆ; ದೊರೆಯದಿದ್ದರೆ. ತನುವು ತನುವಿನ ಮೇಲೆಯೇ ಅತ್ಯಾಚಾರ ಹಲ್ಲೆ ಮಾಡುತ್ತದೆ. ಕೊಲೆ ಮಾಡುತ್ತದೆ. ಸದಾ ವಿಷಯದ ಆಸಕ್ತಿಗಾಗಿಯೇ ತನುವಿನ ಕಣ್ಣು  ಬಳಕೆಯಾಗುತ್ತದೆ. ಕಣ್ಣಿನ ಜ್ಞಾನ ರತ್ನ ಬಳಕೆಯಾಗದೆ ಕೆಟ್ಟು ಹೋಗುತ್ತದೆ.

ಜ್ಞಾನರತ್ನದ ಬೆಳಕಿನಿಂದ ತನುವನ್ನು ನೋಡಿದರೆ ತನ್ನಂತೆ ಇರುವ ಚರ್ಮ. ಅದರೊಳಗಿ ರುವ ರಕ್ತ ಮೂಳೆ ಮಾಂಸ ಕೂಡಾ ತನ್ನಂತೆಯೇ ಇದೆ. ತಿಳಿಯುವ ಜ್ಞಾನ ಕೂಡಾ ಒಂದೆ. ರತ್ನ ಬ ಳಕೆಯಾಗದ್ದಕ್ಕಾಗಿ ತನುಗಳು ರಂಜನೆಗೆ ಒಳಗಾಗಿ ಕೆಡುತ್ತವೆ.

ಭೂಮಿ ನಿನ್ನದಲ್ಲ, ಹೇಮ ನಿನ್ನದಲ್ಲ, ಕಾಮಿನಿ ನಿನನ್ನವಳಲ್ಲ. ಇವು ಜಗಕ್ಕಿಕ್ಕಿದ ವಿಧಿ. ನಿನ್ನದೆಂಬುದು ಜ್ಞಾನರತ್ನ ಕಾಣಾ. ಅದನ್ನು ಕೆಡಗೊಡದೆ ಅಲಂಕರಿಸಿದೆಯಾದೊಡೆ ನಿನ್ನಂತಹ ಸಿರಿ ವಂತರು ಯಾರೂ ಇಲ್ಲ ಎಲೆ ಮನವೆ ಎಂದು ಅಲ್ಲಮ ಪ್ರಭುಗಳು ಮನಕ್ಕೆ ಬುದ್ಧಿಹೇಳಿದ್ದಾರೆ. ಬಸವಣ್ಣನವರು ಕೂಡಾ  ಜ್ಞಾನ ತನುವಿನ ಸಂಪತ್ತು ; ಅದನ್ನು ಪುಸ್ತಕದ ಮೂಲಕ 'ಕಳಬೇಡ'

ಅದನ್ನು ಬಳಸದೆ 'ಕೊಲ್ಲಬೇಡ' ಎಂದಿದ್ದಾರೆ.

**ಅದರಂದ ತಿಳಿಯದು, ಛಂದ ಕಾಣಬಾರದು. ಬಂದ ಬಟ್ಟೆಯಲ್ಲಿ ತೊಳಲುವರು. ಸಂದೇಹವಿಡಿದು ಬಂದವರೆಲ್ಲಾ ಅಂದಂದಿಗೆ ದೂರ, ಮಾರೇಶ್ವರಾ:**

ಜ್ಞಾನ ರತ್ನವನ್ನು ಹಣಕೊಟ್ಟು ಶಾಲಾ ಕಾಲೇಜುಗಳ ಮೂಲಕ ಕೊಳ್ಳಲು ಬರುವುದಿಲ್ಲ. ಪುಸ್ತಕಗಳಿಂದ ಪಡೆಯಲೂ ಬರುವುದಿಲ್ಲ. ಧರ್ಮಗುರುಗಳಿಂದ ಪೀಠಾಧಿಪತಿಗಳಿಂದ ಪಡೆಯಲೂ ಬರುವುದಿಲ್ಲ. ಹಣ ಆಭರಣ ಭೂಮಿ ಪಡೆದು ಬದಲಿಗೆ ಜ್ಞಾನ ಕೊಡಲು ಬರುವುದಿಲ್ಲ. ಜ್ಞಾನದ ಅಂದ ಚೆಂದವನು ತನುವಿನ ಮೂಲಕವೇ ಕಾಣಬೇಕು. ಅದು-ಸತ್ಯವೂ ಸುಂದರವೂ ಶಿವಮಯವೂ ಆಗಿದೆ. ತನುವಿನ ಅರಿವನ್ನು ಮರೆಯದೆ ಮಾರೇಶ್ವನಾದರೆ ಎಲ್ಲವೂ ಶಿವಮಯವೇ.

□

# ಕಾಯವೆಂಬುದು ಅರಿವಿನ ಡಕ್ಕೆ

ಕಾಯವೆಂಬುದು ಅರಿವಿನ ಡಕ್ಕೆ
ಕಾಯವೆಂಬ ಡಕ್ಕೆಕ್ರೀ ಭಾವವೆಂಬ ಹೊದಕೆ
ಅರಿವೆಂಬ ನೇಣಿನಲ್ಲಿ ಸ್ಥೂಲ ಸೂಕ್ಷ್ಮವೆಂಬ ಹೊಡೆಚೆಂಡು ಕಟ್ಟಿ
ಹೊಯ್ಯುತ್ತಿದೆ ಡಕ್ಕೆ, ಕಾಲಾಂತಕ ಭೀಮೇಶ್ವರ ಲಿಂಗವಲ್ಲದಿಲ್ಲ ಎಂದು
- ಡಕ್ಕೆಯ ಬೊಮ್ಮಣ್ಣ ಶರಣರು

ಶರಣರು ಯಾವ ಕಾಯಕ ಮಾಡಿದರೂ ಆ ಕಾಯಕದಲ್ಲಿ ಸತ್ಯ ಕಂಡುಕೊಂಡಿದ್ದಾರೆ. ಕೆಲಸ ಸಣ್ಣದು ದೊಡ್ಡದು ಎಂದು ಅರ್ಥ ಮಾಡಿಕೊಂಡು ಸಂಕಟ ಪಡುವ ನಮಗೆ ಶರಣರ ಮಾತುಗಳು ಅರ್ಥವಾಗುವುದು ಜಟಿಲ. ಅರ್ಥವಾದರೆ ಸಾಕು ಕಾಯ ಅರಿವಿನ ಕಾಯವಾಗುತ್ತದೆ. ಎಂದೂ ಸಂಕಟ ಪಡದೆ ಯಾರನ್ನೂ ಸಂಕಟಕ್ಕೀಡು ಮಾಡದೇ ಸತ್ಯದ ಕೀಲ ಹೊಳೆದು ಸದಾ ಸದ್ಭಾವನೆಯಿಂದ ಬೆಳಗುತ್ತದೆ.

ಡಕ್ಕೆಯ ಬೊಮ್ಮಣ್ಣ ಶರಣರು ತಮ್ಮ ವಚನದಲ್ಲಿ ಕಾಯ ಭಾವ ಅರಿವು ಸ್ಥೂಲ ಸೂಕ್ಷ್ಮವೆಂಬ ಪದಗಳನ್ನು ಬಳಸಿಕೊಂಡು ತಾವು ಬಾರಿಸುವ ಡಕ್ಕೆಯ ಮೂಲಕ ಓದುಗರಿಗೆ ಅರಿವಿನ ಸೂತ್ರ ವಿವರಿಸಿದ್ದಾರೆ.

ಕಾಯವನ್ನು ಡಕ್ಕೆಯ ಮಾಡಿ, ಅದರಲ್ಲಿರುವ ಭಾವವನ್ನು ಹೊದಕೆಯ ಮಾಡಿ, ಅರಿವೆಂಬ ನೇಣಿನಲ್ಲಿ ಸ್ಥೂಲ ಸೂಕ್ಷ್ಮವೆಂಬ ಕಾಯಗಳ ಹೊಡೆಚೆಂಡು ಕಟ್ಟಿ ಕಾಯವೆಂಬ ಡಕ್ಕೆಗೆ ಹೊಡೆದಡೆ ಕಾಲಾಂತಕ ಭೀಮೇಶ್ವರ ಲಿಂಗವಲ್ಲದೆ ಬೇರಲ್ಲವೆಂದು ಸದಾ ಅರಿವಿನ ಕಾಯ ನಾದ ಮಾಡುತ್ತದೆ.

ಕಾಯವೆನ್ನುವುದು ಸ್ಥೂಲ ಶರೀರ, ಮನವೆನ್ನುವುದು ಸೂಕ್ಷ್ಮ ಶರೀರ, ಅರಿವು ಎನ್ನುವುದು ಕಾರಣ ಶರೀರ ಕಾಯದಲ್ಲಿ ಅರಿವು ಇದೆ. ಮನವೂ ಇದೆ, ಭಾವವೂ ಇದೆ. ಭಾವ ದುರ್ಭಾವಗೊಂಡು ಮತ್ತು ಮನ ಸುಖ ದುಃಖವನ್ನುಂಟು ಮಾಡಿ ಸದಾ ತನುವನ್ನು ತಲ್ಲಣಗೊಳಿಸುತ್ತವೆ. ಸ್ನೇಹಿತ, ಸಹೋದರ, ಸಮಾಜದ ಮೇಲಿಟ್ಟ ಭಾವ ದುರ್ಭಾವಗೊಂಡರೆ ಕಾಯ ಸಂಕಟಕ್ಕೀಡಾಗಿ ಹುಚ್ಚನಂತೆ ವರ್ತಿಸುತ್ತದೆ. ಕ್ರಿಯೆಯಲ್ಲಿಳಿದ ಭಾವ ದುರ್ಭಾವಗೊಂಡು ಕಾಯದಿಂದ ಕಾಯವನ್ನು ಕೊಂದು ಕಾಯಕ್ಕೆ ಕೊಲೆಗಡುಕನ ಪಟ್ಟ ಕಟ್ಟುತ್ತದೆ. ಇಲ್ಲ ಕಾಯವನ್ನೇ ಆತ್ಮಹತ್ಯೆಗೆಳೆಸುತ್ತದೆ. ಭಾವದೊಂದಿಗೆ ಮನವೂ ಸೇರಿಕೊಂಡು ಕಾಯವನ್ನು ನುಂಗಿ ಹಾಕುತ್ತವೆ. ಕಾಯದಲ್ಲಿ ಭಾವ ಮತ್ತು ಮನಗಳು ಮಾಡುವ ರಕ್ಕಸ ಕೆಲಸಗಳು ಯಾವ ಕಾಯದ ಗಮನಕ್ಕೂ ಬರುವುದಿಲ್ಲ. ಕಾಯವನ್ನು ಭಾವ ಮತ್ತು ಮನಗಳು ರಿಮೋಟ್ ಕಂಟ್ರೋಲ್‌ನಂತೆ ಬಳಸುತ್ತವೆ. ಅವು ಹಾಕಿದ ತಾಳಕ್ಕೆ ಕಾಯ ಕುಣಿಯುತ್ತದೆ.

ಡಕ್ಕೆಯ ಬೊಮ್ಮಣ್ಣ ಶರಣರು ಕಾಯವನ್ನು ಡಕ್ಕೆಯನ್ನಾಗಿ, ಅದಕ್ಕೆ ಭಾವವೆಂಬ ಚರ್ಮದ ಹೊದಕೆ ಬಿಗಿದು ಸ್ಥೂಲ ಸೂಕ್ಷ್ಮ ಎಂಬ ಚೆಂಡುಗಳನ್ನು ಅರಿವಿನ ನೇಣಿನಲ್ಲಿ ಕಟ್ಟಿ ಮರುವಾದಾಗೊಮ್ಮೆ ಅರಿವಿನಿಂದ ಹೇಗೆ ಹೊಡೆಯಬೇಕೆಂಬುದನ್ನು ವಿವರಿಸಿದ್ದಾರೆ. ಆ ಹೊಡೆತದಿಂದ ಅರಿವೆಂಬ ಕಾಲಾಂತಕ ಭೀಮೇಶ್ವರ ಲಿಂಗವಲ್ಲದೆ ಬೇರಲ್ಲ ಎಂದು ಬರುವ ಕಾಯದ ನಾದಕ್ಕೆ ಬೊಮ್ಮಣ್ಣ ಶರಣರು ಶರಣು ಹೋಗಿದ್ದಾರೆ.

□

# ಹಂಗಳಿದ ಅರಿವಿನ ಕಾಯ

**ಉದಯದಲ್ಲಿ ಬ್ರಹ್ಮನ ಕಾವೆ**
**ಮಧ್ಯಾಹ್ನಕ್ಕೆ ವಿಷ್ಣುವ ಕಾವೆ**
**ಅಸ್ತಮಕ್ಕೆ ರುದ್ರನ ಕಾವೆ**
**ಕತ್ತಲೆಯಾದ ಮತ್ತೆ ತಮ್ಮ ತಮ್ಮ ಮಂದೆಗೆ ಹೊಡೆದು**
**ಈ ಕಾವ ಕಟ್ಟಿಗೆಯ ಇನ್ನೆಂದಿಗೆ ಬಿಡುವೆ ?**
**ಗೋಪಿನಾಥ ವಿಶ್ವೇಶ್ವರ ಲಿಂಗವು ನಷ್ಟವಹನ್ನಕ್ಕ**
**ಎನ್ನ ಕೈಯ ಕಟ್ಟಿಗೆ ಬಿಡದು.**

**- ತುರುಗಾಹಿ ರಾಮಣ್ಣ ಶರಣರು**

ಮಥುರೆಯ ಗೋಪಾಲ ಗೋವುಗಳ ಕಾಯ್ದಂತೆ, ತುರುಗಾಹಿ ರಾಮಣ್ಣ ಶರಣರು ಕಲ್ಯಾಣದ ಶರಣರ ಗೋವುಗಳನ್ನು ಕಾಯ್ದರು. ಗೋವುಗಳ ಕಾಯುವುದೇ ಇವರ ಕಾಯಕ! ಹುಲಿ ಚಿರತೆ, ಸಿಂಹಗಳ ಬಾಯಿಗೆ ತುತ್ತಾಗದಂತೆ ಗೋವುಗಳ ಕಾಯುವುದು ಸುಲಭದ ಕೆಲಸವೇ ?

ಹಾಗೆಯೇ ಉದಯ ಮಧ್ಯಾಹ್ನ ಸಂಜೆಯವರೆಗೂ ತನು ಅರಿಷಡ್ವರ್ಗಗಳೆಂಬ ವ್ಯಾಘ್ರನ ಬಾಯಿಗೆ ತುತ್ತಾಗದಂತೆ ಕಾಯುವುದು ಕೂಡಾ ಸುಲಭದ ಕೆಲಸವಲ್ಲ.

**ಉದಯದಲ್ಲಿ ಬ್ರಹ್ಮನ ಕಾವೆ :**

ತನುವಿನಲ್ಲಿ ಬ್ರಹ್ಮನೂ ಇದ್ದಾನೆ, ಭ್ರಮೆಯೆಂಬ ಹುಲಿಯೂ ಇದೆ. ತನುವೆಂಬ ಆಕಳು ಬ್ರಹ್ಮನ ಬಾಯಿಗೆ ಸಿಕ್ಕರೆ ಸಕಲರಿಗೆ ಸದಾ ಅಮೃತವನ್ನೇ ನೀಡುತ್ತದೆ. ಭ್ರಮೆಯೆಂಬ ಹುಲಿಯ ಬಾಯಿಗೆ ಸಿಕ್ಕರೆ ಸದ್ದಿಲ್ಲದಂತೆ ಆಕಳು ನರಳಿ, ನರಳಿ ಹುಲಿಗೆ ಆಹಾರವಾಗುತ್ತದೆ. ಹೊತ್ತಾರೆ ಎದ್ದು ಬ್ರಹ್ಮನ ಬರುವಿಗಾಗಿ ಕಾಯ ಕಾಯಲೇಬೇಕು.

**ಮಧ್ಯಾಹ್ನಕ್ಕೆ ವಿಷ್ಣುವ ಕಾವೆ :**

ಸೃಷ್ಟಿಕರ್ತ ಬ್ರಹ್ಮನಾದರೆ ರಕ್ಷಣೆ ಮಾಡುವವ ವಿಷ್ಣು, ಲಯ ಮಾಡುವವ ರುದ್ರ. ವಿಷ್ಣು ಕಾಯಕ್ಕೆ ಯಾವ ಬಾಧೆಯೂ ಆಗದಂತೆ ಕಾಯುತ್ತಾನೆ.

**ಅಸ್ತಮಕ್ಕೆ ರುದ್ರನ ಕಾವೆ :**

ಸೂರ್ಯ ಮುಳುಗುವ ಸಮಯ ಗೋಧೂಳಿ ಸಮಯ ರುದ್ರನೆಂಬ ಕಾಲನ ಬಾಧೆ ಕಾಯಕ್ಕೆ ಬಾರದಿರಲೆಂದು ರುದ್ರನನ್ನು ಕಾಯುವೆ.

**ಕತ್ತಲೆಯಾದ ಮತ್ತೆ ತಮ್ಮ ತಮ್ಮ ಮಂದೆಗೆ ಹೊಡೆದು ಈ ಕಾವ ಕಟ್ಟಿಗೆಯ ಇನ್ನೆಂದಿಗೆ ಬಿಡುವೆ ? ಗೋಪಿನಾಥ ವಿಶ್ವೇಶ್ವರ ಲಿಂಗವು ನಷ್ಟವಹನ್ನಕ್ಕ ಎನ್ನ ಕೈಯ ಕಟ್ಟಿಗೆ ಬಿಡದು :**

ಕತ್ತಲೆಯಾದ ಮೇಲೆ ದನಗಳನ್ನು ಆಯಾ ಮನೆಗಳ ಕೊಟ್ಟಿಗೆಗೆ ಹೊಡೆಯುವೆ. ದನಗಳ ಕಾಯುವ ಈ ಕಟ್ಟಿಗೆಯನ್ನು ಇನ್ನೆಂದಿಗೆ ಬಿಡುವೆ ? ಗೋವುಗಳ ಒಡೆಯ ಗೋಪತಿನಾಥನೆಂಬ ವಿಶ್ವೇಶ್ವರ ಲಿಂಗವು ನಷ್ಟವಾಗದನ್ನಕ್ಕ ಎನ್ನ ಕೈಯ ಕಟ್ಟಿಗೆಯ ಬಿಡೆನು ಎಂದಿದ್ದಾರೆ ರಾಮಣ್ಣ ಶರಣರು.

ವ್ಯಾಘ್ರನ ಬಾಯಿಂದ ಗೋವುಗಳನ್ನು ರಕ್ಷಣೆ ಮಾಡುವುದಕ್ಕಾಗಿ ಕಟ್ಟಿಗೆಯ ಹಿಡಿದು ಉದಯ,

ಮಧ್ಯಾಹ್ನ, ಅಸ್ತಮಾನ, ಕತ್ತಲೆಯ ಸಮಯವನ್ನು ಕಳೆಯುವುದರಲ್ಲೇ ಹೋಯಿತು. ಕಾಯುವ ಕಾಯ ಕಟ್ಟಿಗೆಯಿಲ್ಲದೆ ಗೋವುಗಳು ಸ್ವತಂತ್ರವಾಗಿ ಬದುಕುವ ಶಕ್ತಿ ಕಂಡುಕೊಳ್ಳಲಿಲ್ಲ. ಹಾಗೆಯೇ ಸೃಷ್ಟಿಕರ್ತ ಬ್ರಹ್ಮ ಸೃಷ್ಟಿ ಮಾಡಿ ಕಾಯವನ್ನು ಕಾಯಲು ಕಾವಲು ಕಾದ, ವಿಷ್ಣು ಬಂದು ಕಾಯವನ್ನು ರಕ್ಷಣೆ ಮಾಡಿದ. ರುದ್ರ ಬಂದು ರಾತ್ರಿಯೆಲ್ಲಾ ಕಾಯವನ್ನು ಕಾವಲು ಕಾದ.

ರುದ್ರನೆಂಬ ಕಾಲನ ವಶದಲ್ಲಿ ನಿದ್ರೆಯಲ್ಲಿದ್ದ ಕಾಯ ರಾತ್ರಿಯೆಲ್ಲಾ ಸತ್ತಂತ್ತಿದ್ದರೂ ಬೆಳಿಗ್ಗೆಯೆಲ್ಲ ಪುನಃ ಬ್ರಹ್ಮನಿಂದ ಸೃಷ್ಟಿಯಾಗಿ ಮಧ್ಯಾಹ್ನ ವಿಷ್ಣುವಿನಿಂದ ರಕ್ಷಿಸಲ್ಪಟ್ಟಿತು. ಹೀಗೆ ಪ್ರತಿದಿನ ಮೂರು ಕಾಲಗಳಲ್ಲಿ ಮೂವರಿಂದ ರಕ್ಷಿಸಲ್ಪಟ್ಟಿತೇ ಹೊರತು ಸ್ವತಂತ್ರವಾಗಿ ಬದುಕುಳಿಯಲಿಲ್ಲ. ಕಾಯಗುಣ ನಷ್ಟವಾಗಲಿಲ್ಲ.

ಕಾಯದೊಡೆಯ ಗೋಪತಿನಾಥನೆಂಬ ಅರಿವೇ ವಿಶ್ವೇಶ್ವರ ಲಿಂಗವು ಕಾಯಕ್ಕೆ ಈತ ಪರಿಚಯವಾದರೆ ಸತ್ತು ಹುಟ್ಟುವನಲ್ಲ ಎನ್ನುವ ಕೀಲ ಹೊಳೆಯುತ್ತದೆ.

''ಹುಟ್ಟಿಸುವಾತ ಬ್ರಹ್ಮನೆಂಬರು ರಕ್ಷಿಸುವಾತ ವಿಷ್ಣುವೆಂಬರು ನೋಡಾ, ಬ್ರಹ್ಮ ತನ್ನ ಶಿರವೇಕೆ ಹುಟ್ಟಿಸಲಾರ. ವಿಷ್ಣು ತನ್ನ ಮಗನನ್ನೇಕೆ ರಕ್ಷಿಸಲಾರ ? ದುಷ್ಟ ನಿಗ್ರಹ, ಶಿಷ್ಟ ಪ್ರತಿಪಾಲಕ ನಮ್ಮ ಕೂಡಲಸಂಗಮದೇವಾ''

''ಸತ್ತು ಹುಟ್ಟುವನಲ್ಲ ಸಂದೇಹ ಸೂತಕಿಯಲ್ಲ. ಆಕಾರ ನಿರಾಕಾರ ನೋಡಯ್ಯಾ ! ಕಾಯ ವಂಚಕನಲ್ಲ, ಜೀವ ವಂಚಕನಲ್ಲ ನಿರಂತರ ಸಹಜ ನೋಡಯ್ಯಾ ! ಶಂಕೆಯಿಲ್ಲದ ಮಹಾ ಮಹಿಮ ನೋಡಯ್ಯಾ, ಕೂಡಲ ಸಂಗನ ಶರಣನು ಉಪಮಾತೀತ ನೋಡಯ್ಯಾ''

ತನುವಿನೊಡೆಯ ಗೋಪತಿನಾಥ ಹುಟ್ಟು ಸಾವುಗಳೆಂಬ ಸಂದೇಹ ಸೂತಕಿಯಲ್ಲ. ತನುವಿನಾಕಾರದಲ್ಲಿದ್ದ ನಿರಾಕಾರನು ಯಾವ ಶಂಕೆಯೂ ಇಲ್ಲದ ಮಹಾಮಹಿಮನು. ಬ್ರಹ್ಮ, ವಿಷ್ಣು, ರುದ್ರರಿಗೆ ತನ್ನ ತೋಳ್‌ತೆಕ್ಕೆಯ ರುಚಿಯನುಣಿಸಿ ಸರ್ವರನ್ನೂ ಕಾಯುವ ವಿಶ್ವೇಶ್ವರ ಲಿಂಗವು. ತನುವಿನೊಡೆಯನ ಪರಿಚಯ ತನುವಿಗಾದರೆ ಯಾವ ಕಾವಲುಗಾರನೂ ಬೇಕಿಲ್ಲ.

□

# ತನುವಿನ ಮರೆವಿಗೆ ತನುವಿನ ಅರಿವೇ ಮದ್ದು

**ಅರಿವಿನ ಕುಳವನರಿಯೆ, ಮರಹಿನ ತೆರನನರಿಯೆ**
**ಅರಿವು, ಮರಹಳಿದ ಗವರೇಶ್ವರ ಲಿಂಗಕ್ಕೆ**
**ಅರಿವೇ ಅರ್ಪಿತ, ಮರವೇ ಅನರ್ಪಿತ**
**ಮೊರನ ಹೆಣೆವ ಗೌರ, ನಾನೆತ್ತ ಬಲ್ಲೆನಯ್ಯಾ .**

**- ಮೇದರ ಕೇತಯ್ಯ ಶರಣರು**

**ಅರಿವಿನ ಕುಳವನರಿಯೆ, ಮರಹಿನ ತೆರನ ನರಿಯೆ :**

ಬೆಳಕೂ ಇದೆ ಕತ್ತಲೂ ಇದೆ, ಇದೇನು ಚೋದ್ಯವೋ ? ಆನೆಯೂ ಸಿಂಹವೂ ಒಂದೆಡೆ ಉಂಬುವಂತೆ ಎಂದು ತನುವಿನ ಅರಿವು ಮರೆವುಗಳ ಚೋದ್ಯದ ಎರಡು ಉಪಕರಣಗಳನ್ನು ನೆನಪಿಸಿಕೊಂಡು ಅಲ್ಲಮಪ್ರಭುಗಳು ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಹಾಗೆಯೇ ಮೇದಾರ ಕೇತಯ್ಯ ಶರಣರು ಕೂಡಾ ನಾನೆತ್ತ ಬಲ್ಲೆನಯ್ಯ ಈ ಬ್ರಹ್ಮಜ್ಞಾನವನು ಎನ್ನುತ್ತಾ ತನುವಿನ ಅರಿವು ಮರೆವುಗಳನ್ನು ಬೆನ್ನುಬಿದುರು, ಖಂಡ ಬಿದುರುಗಳ ಮೂಲಕ ಕೇರುವ ಮರದಲ್ಲಿ ಹೆಣೆದು ಕಟ್ಟಿದ್ದಾರೆ.

ಬ್ರಹ್ಮವಿದ್ಯೆ ಎನ್ನುವುದು ತನುವಿನ ವಿದ್ಯೆ. ಇದನ್ನು ತತ್ತ್ವಶಾಸ್ತ್ರಗಳ ಮೂಲಕ ಕಲಿತರೆ ಬಾಯಿಗೆ ಹತ್ತಿರವಾಗುತ್ತದೆ. ತನುವಿಗೆ ದೂರವಾಗುತ್ತದೆ. ಅದಕ್ಕಾಗಿಯೇ ಶರಣರು ದಾಸರು ತತ್ವಪದಕಾರರು, ಆರೂಢ ಅವಧೂತರು ತನುವಿನಲ್ಲಿಯೇ ಕಂಡು ತನುವಿನ ಮನವನ್ನೇ ಘನಮನವನ್ನಾಗಿ ಮಾಡಿದರು.

ತನುವಿಗೆ ಅರಿವೇ ಆಭರಣ. ಆದರೆ ಅರಿವು ಮರೆವಾಗಿ ಮರೆವೇ ತನುವಿಗೆ ಪ್ರಧಾನವಾಗಿದೆ. ಅರಿವೂ ಇದೆ, ಮರೆವೂ ಇದೆ. ಕತ್ತಲೂ ಇದೆ ಬೆಳಕೂ ಇದೆ. ಇದೇನು ಚೋದ್ಯವೋ ? ಬೆಳಕಿದ್ದಲ್ಲಿ ಕತ್ತಲಿನ ಪ್ರವೇಶ ಸಾಧ್ಯವಾಗುವುದಿಲ್ಲ. ಹಗಲು ಎನ್ನುವುದು ಸೂರ್ಯನ ಸಾಮ್ರಾಜ್ಯ , ಅಲ್ಲಿ ಕತ್ತಲಿಗೆ ಅವಕಾಶವೇ ಇಲ್ಲ. ಹಾಗೆಯೇ ತನುವಿನಲ್ಲಿಯೂ ತನುವಿರುವವರೆಗೆ ನಿರಂತರ ಬೆಳಗುವ ಅರಿವೆಂಬ ಸೂರ್ಯನಿದ್ದಾನೆ. ಈ ಸೂರ್ಯನಿಗೆ ಮರೆವು ಅಜ್ಞಾನವೆಂಬ ಕತ್ತಲು ಆವರಿಸಿದೆ. ಸಿಂಹದ ಹೆದರಿಕೆ ಆನೆಗಿಲ್ಲ, ಬೆಳಕಿನ ಹೆದರಿಕೆ ಕತ್ತಲಿಗಿಲ್ಲ. ಸಿಂಹದ ಸ್ವಪ್ನ ಬಿದ್ದರೆ ಆನೆ ಬದುಕುವುದಿಲ್ಲ. ಹೀಗಿದ್ದರೂ ಅರಿವೆಂಬ ಸಿಂಹ ಅಜ್ಞಾನವೆಂಬ ಆನೆ ತನುವಿನ ತಟ್ಟೆಯಲ್ಲಿ ಸಹಭೋಜನ ನಡೆಸಿವೆ.

ನಿರಂತರವಾಗಿ ಅರಿವಿನ ಧಾರೆಯನ್ನು ಎರೆಯುವ ಗವರೇಶ್ವರ ಲಿಂಗಕ್ಕೆ ಅರಿವೇ ಅರ್ಪಿತ, ಮರೆವೇ ಅನರ್ಪಿತ. ಅರಿವು ವಸ್ತುವಿನ ಮೇಲೆ ಬೆಳಕು ಚೆಲ್ಲಿ, ವಸ್ತುವನ್ನು ಅನಾವರಣ ಮಾಡುತ್ತದೆ ; ಏನೂ ಪಡೆಯುವುದಿಲ್ಲ. ಮರೆವು ವಸ್ತುವಿಗೆ ಮಾರುಹೋಗಿ, ಅದರ ಮೇಲೆ ಕತ್ತಲು ಚೆಲ್ಲಿ; ವಸ್ತುವಿನ ನಿಜರೂಪ ಕಾಣದಂತೆ ಮಾಡುತ್ತದೆ. ಆ ವಸ್ತುವನ್ನು ತನುವಿನ ಗರ್ಭಕ್ಕೆ ಆಲಿಂಗಿಸಿಕೊಂಡು ತನುವಿನ ಸುಖವನ್ನೇ ವಸ್ತುವಿಗೆ ಚೆಲ್ಲಿ ಆ ವಸ್ತುವಿನಿಂದಲೇ ಸುಖವಾಯಿತೆಂದು ಭ್ರಮಿಸಿ ತನುವನ್ನು ಆನಂದಪಡುವಂತೆ ಮಾಡುತ್ತದೆ.

ಮರೆವು ಆವರಿಸಿಕೊಂಡ ತನುವಿಗೆ ವಸ್ತುವೇ ಪ್ರಧಾನ. ವಸ್ತುವಿಗಾಗಿ ತನ್ನಂತೆ ಸಕಲ ಸಂಪತ್ತುಳ್ಳ ತನುವನ್ನು ಕೊಲ್ಲಲು ಮರೆವಿನ ತನು ಹೇಸುವುದಿಲ್ಲ. ತನುವಿನ ಮರೆವಿಗೆ, ತನುವಿನ ಅರಿವೇ

ಮದ್ದು. ಅರಿವಾದರೆ ಮರೆವು ಅರಿವಿನಲ್ಲಿ ಲೀನವಾಗಿ ಅರಿವಿನ ತನುವಾಗುತ್ತದೆ. ಅರಿವೆಂಬ ಬಿದರಿನಲ್ಲಿ ಮರೆವನ್ನು ಹೆಣೆದು ಮರಮಾಡಿ ಕೇರಿದ್ದಾರೆ ಮೇದಾರ ಕೇತಯ್ಯ ಶರಣರು.

□

**ಅರಿವಿನ ಪರಿಮಳ :**

- ಅರಿವು ವಸ್ತುವಿನ ಮೇಲೆ ಬೆಳಕು ಚೆಲ್ಲಿ, ವಸ್ತುವನ್ನು ಅನಾವರಣ ಮಾಡುತ್ತದೆ ; ಏನೂ ಪಡೆಯುವುದಿಲ್ಲ. ಮರೆವು ವಸ್ತುವಿಗೆ ಮಾರುಹೋಗಿ, ಅದರ ಮೇಲೆ ಕತ್ತಲು ಚೆಲ್ಲಿ; ವಸ್ತುವಿನ ನಿಜರೂಪ ಕಾಣದಂತೆ ಮಾಡುತ್ತದೆ. ಆ ವಸ್ತುವನ್ನು ತನುವಿನ ಗರ್ಭಕ್ಕೆ ಆಲಿಂಗಿಸಿಕೊಂಡು ತನುವಿನ ಸುಖವನ್ನೇ ವಸ್ತುವಿಗೆ ಚೆಲ್ಲಿ ಆ ವಸ್ತುವಿನಿಂದಲೇ ಸುಖವಾಯಿತೆಂದು ಭ್ರಮಿಸಿ ತನುವನ್ನು ಆನಂದಪಡುವಂತೆ ಮಾಡುತ್ತದೆ.
- ಮರೆವು ಆವರಿಸಿಕೊಂಡ ತನುವಿಗೆ ವಸ್ತುವೇ ಪ್ರಧಾನ. ವಸ್ತುವಿಗಾಗಿ ತನ್ನಂತೆ ಸಕಲ ಸಂಪತ್ತುಳ್ಳ ತನುವನ್ನು ಕೊಲ್ಲಲು ಮರೆವಿನ ತನು ಹೇಸುವುದಿಲ್ಲ. ತನುವಿನ ಮರೆವಿಗೆ, ತನುವಿನ ಅರಿವೇ ಮದ್ದು.

# ಮರೆವು ಕಳೆದುಕೊಂಡ ಅಂಗಗಳೆಲ್ಲ ಲಿಂಗಗಳೆ

**ಆಲಿಕಲ್ಲ, ನೀರೊಳಗೆ ಬೆರಸಿದಂತೆ,**
**ಉಪ್ಪಿನ ಹರಳ, ಉದಕದೊಳಗೆ ಹಾಕಿದಂತೆ,**
**ಕರ್ಪೂರದ ಹಣತೆಯಲ್ಲಿ, ಜ್ಯೋತಿಯ ಬೆಳಗ ಬೆರಸಿದಂತೆ,**
**ಮಹಾಲಿಂಗ ಚೆನ್ನರಾಮೇಶ್ವರ ಲಿಂಗದಲ್ಲಿ ಬೆರಸಿ,**
**ಎರಡಳಿದಡಗಿದ ನಿಜಲಿಂಗೈಕ್ಯನು.**

**-ಮೈದುನ ರಾಮಯ್ಯ ಶರಣರು**

**ಆಲಿಕಲ್ಲ, ನೀರೊಳಗೆ ಬೆರಸಿದಂತೆ :**

ಆಲಿಕಲ್ಲು ನೀರೊಳಗೆ ಬೆರಸಿದರೆ ಬೇಗ ನೀರಾಗುತ್ತದೆ. ಬೆರಸದಿದ್ದರೆ ನೀರಾಗುವುದಕ್ಕೆ ತಡವಾಗುತ್ತದೆ. ಅದಕ್ಕೆ ತನ್ನದೇ ಆದ ವಾತಾವರಣ ಬೇಕಾಗುತ್ತದೆ.

ಹಾಗೆಯೇ ಉಪ್ಪಿನ ಹರಳು ನೀರೊಳಗೆ ಬೆರಸಿದರೆ ಕೂಡಲೇ ನೀರಾಗುತ್ತದೆ. ಉಪ್ಪು ಮತ್ತೆ ನೀರೊಳಗೆ ಸಿಗುವುದಿಲ್ಲ.

ಕರ್ಪೂರದ ಹಣತೆಯಲ್ಲಿ ಜ್ಯೋತಿ ಬೆಳಗಿಸಿದರೆ ಕರ್ಪೂರ ಜ್ಯೋತಿ ಎರಡೂ ಸಿಕ್ಕುವುದಿಲ್ಲ.

ತನುವಿನ ಮಹಾಜ್ಞಾನದಲ್ಲಿ ಅರಿವು ಮರೆವುಗಳನ್ನು ಬೆರಸಿದರೆ ಎರಡಳಿದು ಮಹಾಲಿಂಗ ಚೆನ್ನರಾಮೇಶ್ವರಲಿಂಗದಲ್ಲಿ ಐಕ್ಯವಾದ ನಿಜ ಲಿಂಗೈಕ್ಯನು ತಾನೇ ಆಗುತ್ತಾನೆ.

ಮೈದುನ ರಾಮಯ್ಯ ಶರಣರು ತಾನು ಮಹಾಜ್ಞಾನಿ ಯಾಗಲು ನಾಲ್ಕು ಸರಳವಾದ ಸೂತ್ರಗಳನ್ನು ನೀಡಿದ್ದಾರೆ.

ನೀರು ಗಟ್ಟಿಗೊಂಡು ಆಲಿಕಲ್ಲು ಎನ್ನುವ ಹೆಸರು ಪಡೆದುಕೊಂಡಿದೆ. ಆಲಿಕಲ್ಲು ನೀರು ಒಂದೇ ಆದರೂ ಹೆಸರು ಮಾತ್ರ ಬೇರೆ ಬೇರೆ. ಆಲಿಕಲ್ಲಿನಲ್ಲಿ ನೀರಿನ ಗುಣಧರ್ಮವಿಲ್ಲ; ನೀರಿನಲ್ಲಿ ಆಲಿಕಲ್ಲಿನ ಗುಣಧರ್ಮವಿಲ್ಲ.

ನೀರು ಗಟ್ಟಿಗೊಂಡು ಉಪ್ಪಿನ ಹರಳಾಗಿದೆ. ಉಪ್ಪನ್ನು ನೀರು ಅನ್ನುವಂತಿಲ್ಲ. ನೀರನ್ನು ಉಪ್ಪು ಅನ್ನುವಂತಿಲ್ಲ. ನೀರಲ್ಲಿ ಉಪ್ಪು ಬೆರೆಸಿದಾಗ ಉಪ್ಪು ನೀರಾಯಿತು. ಉಪ್ಪಿನ ಹರಳು ನೀರಲ್ಲಿ ಹುಡುಕಿದರೆ ದೊರೆಯುವುದಿಲ್ಲ.

ಅಂಗದಲ್ಲಿ ಅರಿವು ಇದೆ; ಅದನ್ನು ತಿಳಿಯುವ ಮನವೂ ಇದೆ. ಮನ ಅರಿವಿನಲ್ಲಿ ಬೆರೆಸಿದರೆ ಗುರುವಾಗುವುದು. ನೀರು ಆಲಿಕಲ್ಲು ಬೆರೆಸಿ ನೀರು ಮಾಡಲು ಬರುತ್ತದೆ ಅದರಂತೆ ಉಪ್ಪು ಉದಕ ಬೆರಸಿ ಉದಕ ಮಾಡಲು ಬರುತ್ತದೆ. ಕರ್ಪೂರಕ್ಕೆ ಜ್ಯೋತಿ ಮುಟ್ಟಿಸಿ ಎರಡೂ ಕಳೆಯಲು ಬರುತ್ತದೆ. ಆದರೆ ಮನ ಅರಿವಿನಲ್ಲಿ ಕರಗಿಸಿ ಗುರು ಮಾಡುವುದು ಜಟಿಲ. ಅಂಗ ಲಿಂಗಾಂಗ ಮಾಡುವುದು ಇನ್ನೂ ಜಟಿಲವಾಗುತ್ತದೆ.

ಕರ್ಪೂರ ಕಾಣುತ್ತದೆ, ಜ್ಯೋತಿಯೂ ಕಾಣುತ್ತದೆ ಕರ್ಪೂರಕ್ಕೆ ಜ್ಯೋತಿ ಚುಂಬಿಸಿದಾಗ ಉರಿದು ಎರಡೂ ಇಲ್ಲವಾಗುತ್ತದೆ. ಅದರ ಕಲೆ ಕೂಡಾ ಉಳಿಯುವುದಿಲ್ಲ. ಹಾಗೆಯೇ ಅರಿವಿನಲ್ಲಿ ಮರೆವು ಬೆರೆತು, ಅರಿವು ಮರೆವುಗಳೆರಡು ಅಂಗದ ಲಿಂಗದಲ್ಲಿ ಬೆರೆತು ಆ ಅಂಗವೇ

ಲಿಂಗವಾಗುತ್ತದೆ; ಲಿಂಗಾಂಗವಾಗುತ್ತದೆ.

ಎರಡಳಿದು ಲಿಂಗಾಂಗವಾದ ಅಂಗಕ್ಕೆ ಕಾಣುವ ಅಂಗಗಳೆಲ್ಲ ಲಿಂಗಗಳೇ! ಹೆಣ್ಣಿಲ್ಲ ಗಂಡಿಲ್ಲ, ಶ್ರೀಮಂತ ಬಡವ ಅಧಿಕಾರಿ ಮುನ್ನವೇ ಇಲ್ಲ. ಜಾತಿ ಮತ ಪಂಥಗಳಿಲ್ಲ. ತನ್ನಂತೆ ಇತರ ಅಂಗಗಳನ್ನು ನೋಡುವ ವಿಶ್ವಾಂಗವಾಗುತ್ತದೆ.

ಅರಿವು ಮರೆವುಗಳನ್ನು ಅಂಗದ ಲಿಂಗದಲ್ಲಿ ಬೆರೆಸುವ ಕಲೆಯನ್ನು ಬಲ್ಲ ಸಮರ್ಥ ಜ್ಞಾನಿಗಳಿಂದ ತಿಳಿಯಬೇಕಿದೆ. ತಿಳಿದರೆ ಸಕಲ ಅಂಗಗಳು ಲಿಂಗಗಳೇ!

□



# ಬೇಡುವವ ಸತ್ತರೆ ವಸ್ತುಗಳ ಮಾಡಿದವ ಏಕೆ ಬೇಡಿಯಾನು ?

**ನಾನು ನಾನಾದ ಕಾರಣ ಎನಗೆ ಗುರುವಿಲ್ಲ.**
**ನಾನೆಂಬುದರಿಯೆನಾಗಿ ಎನಗಾ ಲಿಂಗವಿಲ್ಲ.**
**ನಾ ಮಾಡದವನಾಗಿ ಎನಗಾ ಜಂಗಮವಿಲ್ಲ.**
**ಇಂತೀ ಮೂರು ಇಲ್ಲದವಂಗೆ ಭಕ್ತಿ ಪಥವಿಲ್ಲ.**
**ಇದನಿನ್ನಾರ ಕೇಳುವೆ,**
**ರಕ್ಕಸನೊಡೆಯ ಕೊಟ್ಟುದ ಬೇಡ.**

**-ರಕ್ಕಸ ಬೊಮ್ಮಿತಂದೆ ಶರಣರು**

ಎಲ್ಲ ಶಿಕ್ಷಣಗಳು ತನುವಿನಿಂದಲೇ ಬಂದಿವೆ. ತನುವಿನ ಏಳ್ಗೆಗಾಗಿಯೇ ಕಲಿಯಬೇಕಾಗಿದೆ. ಕಲಿಯುವುದೆಲ್ಲ ತನುವಿನ ಹಿತಕ್ಕಾಗಿ ಎನ್ನುವುದು ಮರೆಯದಿದ್ದರೆ, ಯಾವ ಶಿಕ್ಷಣವೂ ತನುವಿಗೆ ತೊಂದರೆ ಕೊಡುವುದಿಲ್ಲ. ದೊಡ್ಡದು ಚಿಕ್ಕದು ಎನ್ನುವ ತಾರತಮ್ಯ, ಮಾಡುವ ಕಾಯಕದಲ್ಲಿ ಉಂಟಾಗುವುದಿಲ್ಲ.

ತನುವಿನ ಮಲ ತನುವೇ ತೊಳೆದುಕೊಳ್ಳುತ್ತದೆ , ಆದರೂ ಮಾಡುವ ಕಾಯಕದಲ್ಲಿ ತಾರತಮ್ಯವೆಸಗುತ್ತದೆ. ತನುವಿನಲ್ಲಿ ಉಂಟಾದ ಅಹಂಕಾರ ತನುವಿನ ಮಲ ಮರೆಯಿಸಿ, ತನ್ನ ಕಾಯಕ ದೊಡ್ಡದ್ದು, ಅನ್ಯ ತನುಗಳ ಕಾಯಕ ಚಿಕ್ಕದು ಎಂದು ಅಸಹ್ಯದಿಂದ ಮೂದಲಿಸಿ ನುಡಿಯುತ್ತದೆ.

ರಕ್ಕಸ ಬೊಮ್ಮಿ ತಂದೆ ಶರಣರು ನಾನು ಎನ್ನುವ ಅಹಂಕಾರವನ್ನು ತನುವಿನಿಂದ ತೆಗೆದುಹಾಕಿದ್ದಾರೆ. ಅದರ ಸೂತ್ರವನ್ನು ಓದುಗರಿಗೆ ಬಿಚ್ಚಿಟ್ಟಿದ್ದಾರೆ :

ನಾನು ಎನ್ನುವುದು ತನುವಿನ ರಕ್ಕಸ. ಅದು ಇರುವವರೆಗೆ ತನುವಿಗೆ ಭಕ್ತ ಎನ್ನುವ ವೇಷ ಹಾಕಿ ಅನ್ಯ ತನುವನ್ನು ಗುರುವನ್ನಾಗಿ ಮಾಡಿಕೊಳ್ಳುತ್ತದೆ. ಗುರು ಎನ್ನುವ ವೇಷ ಹಾಕಿ ಅನ್ಯ ತನುವನ್ನು ಶಿಷ್ಯನನ್ನಾಗಿ ಮಾಡಿಕೊಳ್ಳುತ್ತದೆ. ಗುರುವಿನಿಂದ ತನುವಿಗೆ ಲಿಂಗ ಕಟ್ಟಿಸಿಕೊಳ್ಳುತ್ತದೆ. ದೀಕ್ಷೆ ಪಡೆದು ಶಿಷ್ಯನಾಗುತ್ತದೆ. ಜಂಗಮನಾಗಿ, ಮಠಾಧಿಪತಿಯಾಗಿ, ಕಾವಿ ಹಾಕುತ್ತದೆ. ಜಗದ್ಗುರುವಾಗಿ ಪಲ್ಲಕ್ಕಿಯಲ್ಲಿ ಕೂಡುತ್ತದೆ. ರಾಜಕಾರಣಿಯಾಗಿ ಖಾದಿ ಹಾಕಿಸುತ್ತದೆ.

ಕಳ್ಳನಾಗಿ ತನುವನ್ನು ಕದಿಯುವಂತೆ ಮಾಡುತ್ತದೆ. ವಿಟನಾಗಿ ತನುವನ್ನು ವೇಶ್ಯಾಗೃಹಕ್ಕೆ ಕರೆದೊಯ್ಯುತ್ತದೆ. ತಾನು ಬದುಕುವುದಕ್ಕಾಗಿ ತನುವನ್ನು ವೇಶ್ಯಾವೃತ್ತಿಯಲ್ಲಿ ತೊಡಗಿಸಿಕೊಳ್ಳುತ್ತದೆ. ಹಣ ದ್ರವ್ಯ ಆಭರಣ ಸಂಗ್ರಹಿಸಿ ಶ್ರೀಮಂತನ ವೇಷ ಧರಿಸುತ್ತದೆ. ಬಡವನಾಗಿ ಪ್ರಸಾದಕ್ಕಾಗಿ ಮನೆ ಮನೆ ಅಲೆಯುವಂತೆ ಮಾಡುತ್ತದೆ. ಹೆಣ್ಣಿಗೆ ಗಂಡಾಗಿ ಗಂಡಿಗೆ ಹೆಣ್ಣಾಗಿ ಕಾಡಿ ಕಾಮುಕನನ್ನಾಗಿಸುತ್ತದೆ.

**ನಾನು ನಾನಾದ ಕಾರಣ ಎನಗೆ ಗುರುವಿಲ್ಲ :**

ತನುವಿನಲ್ಲಿ ನಾನು ಎನ್ನುವ ಅಹಂಕಾರಿ ರಕ್ಕಸನಿದ್ದಾನೆ. ಅವನು ಎನ್ನುವ ಅರಿವೆಂಬ ಮಹಾಜ್ಞಾನಿ ಗುರು ಇದ್ದಾನೆ. ನಾನು ಅವನನ್ನು ತಿಳಿದು ಆ ಗುರುವೇ ನಾನಾದ ಕಾರಣ ಮತ್ತೆ ತನು

ವಿನಿಂದ ಬೋಧಿಸುವ ಗುರುವನ್ನು ಮಾಡಿಕೊಳ್ಳಲಿಲ್ಲ.

**ನಾನೆಂಬುದರಿಯೆನಾಗಿ ಎನಗಾಲಿಂಗವಿಲ್ಲ:**

ಅಂಗದಲ್ಲಿ ನಾನು ಎನ್ನುವ ರಕ್ಕಸ ಅಳಿದ ಬಳಿಕ, ಅದು ಅರಿವಿನ ಅಂಗ. ಆ ಅರಿವೇ ಲಿಂಗ. ಅಂಗದ ಕಣ ಕಣದಲ್ಲಿಯೂ ಅರಿವೆಂಬ ಲಿಂಗವಿರುವಾಗ ಅಂಗಕ್ಕೆ ಮತ್ತೆ ತೋರಿಕೆಯ ಲಿಂಗ ಕಟ್ಟಿಸಿಕೊಳ್ಳಲಿಲ್ಲ.

**ನಾ ಮಾಡದವನಾಗಿ ಎನಗಾ ಜಂಗಮವಿಲ್ಲ :**

ತನುವಿನ ಅರಿವು ಮಾಡುವ ಬೇಡುವ ಗುಣಗಳಿಂದ ನಿರ್ಗುಣಿ ಜಂಗಮವಾಗಿರುವಾಗ ಮತ್ತೆ ನನಗೆ ವೇಷದ ಜಾತಿ ಜಂಗಮನ ಅವಶ್ಯಕತೆಯಿಲ್ಲ.

**ಇಂತೀ ಮೂರು ಇಲ್ಲದವಂಗೆ ಭಕ್ತಿ ಪಥವಿಲ್ಲ ಇದನಿನ್ನಾರ ಕೇಳುವೆ, ರಕ್ಕಸನೊಡೆಯ ಕೊಟ್ಟುದ ಬೇಡ :**

ಗುರು ಲಿಂಗ ಜಂಗಮವೆಂಬ ಮೂರು ಇಲ್ಲದವಂಗೆ ಭಕ್ತಿ ಪಥವೆಂಬ ಆಚಾರವಾದರೂ ಏಕೆ ? ತನುವಿನ ರಕ್ಕಸ ಸತ್ತು ರಕ್ಕಸನೊಡೆಯನೊಬ್ಬನೇ ತನುವಿನಲ್ಲಿ ಉಳಿದಾಗ ತನು ಒಡೆಯನ ತನು. ಒಡೆಯನಿಗೆ ಕೊಡುವುದು ಗೊತ್ತಲ್ಲದೆ ಪಡೆಯುವುದು ಗೊತ್ತಿಲ್ಲ.

ಚಿನ್ನ ಬೆಳ್ಳಿ ಒಡವೆ ದ್ರವ್ಯ ಭೂಮಿ ಆಹಾರ ಕರೆನ್ಸಿ ಇವೆಲ್ಲವುಗಳೂ ಅರಿವಿನ ಪ್ರೊಡೆಕ್ಟ್. ತನುವಿನ ಅರಿವಿನಿಂದಲೇ ತಯಾರಾದ ವಸ್ತುಗಳು. ನಾನು ಎಂಬ ರಕ್ಕಸ ತನುವಿಗೆ ಆವರಿಸಿರುವುದರಿಂದ, ತನುವೇ ಮರೆತು ಅವುಗಳನ್ನು ಸಂಗ್ರಹಿಸುತ್ತದೆ ; ಬೇಡುತ್ತದೆ ! ಬೇಡುವವನೇ ಸತ್ತಾಗ ವಸ್ತುಗಳನ್ನು ಮಾಡಿದವನು ಏಕೆ ಬೇಡಿಯಾನು ? ಇದು ರಕ್ಕಸ ಬೊಮ್ಮಿ ತಂದೆಗಳ ಸೂತ್ರ !

□

# ಮಣ್ಣ ಗರ್ಭದಲ್ಲಿ ಹೊನ್ನಿದೆ
# ತನುವಿನ ಗರ್ಭದಲ್ಲಿ ಅರಿವಿದೆ

ಮರಾಳಂಗೆ ಹಾಲು ನೀರನೆರೆದಲ್ಲಿ
ನೀರನುಳುಹಿ ಹಾಲಕೊಂಬ ಭೇದವ ನೋಡಾ !
ಎಣ್ಣೆ ನೀರ ಕೂಡಿದಲ್ಲಿ ಅದ ತನ್ನಿಂದಲೇ ಬೆಳೆದು,
ಚೆನ್ನಾಗಿ ಉರಿಯದ ಭೇದವ ನೋಡಾ !
ಮಣ್ಣು ಹೊನ್ನಿನಲ್ಲಿ ಬೆಳೆದು, ತನ್ನ ತಪ್ಪಿಸಿಕೊಂಡು,
ಹೊನ್ನು ಬೆಲೆಯಾದ ಭೇದವ ನೋಡಾ !
ತನ್ನೊಳಗೆ ತಾನಿದ್ದು ತನ್ನನರಿಯದೆ,
ತೊಳಲುವ ಬಿನ್ನಾಣವ ನೋಡಾ !
ಚೆನ್ನಾಗಿ ನುಡಿವ ಅಣ್ಣಗಳೆಲ್ಲರೂ ಹೊನ್ನು ಹೆಣ್ಣು ಮಣ್ಣೆಂಬ ಬಲೆಗೆ ಸಿಲ್ಕಿ,
ನಿಜವುಳ್ಳ ಅಣ್ಣಗಳ ಬಾಗಿಲಲ್ಲಿ ನಿಂದು,
ಬಣ್ಣಗೆಟ್ಟವರ ಕಂಡು ಚುನ್ನವಾಡುತಿರ್ದ, ಜಾಂಬೇಶ್ವರಾ .

-ರಾಯಸದ ಮಂಚಣ್ಣ ಶರಣರು

ಹೊನ್ನು ಹೆಣ್ಣು ಮಣ್ಣೆಂಬುದು ಜಗದ ತನುಗಳಿಗೆ ವಿಧಿಯಾಗಿ ಕಾಡುತ್ತದೆ. ತನು ಇವುಗಳ ಸಂಪಾದನೆಗಾಗಿ ತನ್ನಂತೆ ಇರುವ ತನುಗಳನ್ನು ಕೊಂದು ಪಡೆಯುವುದಕ್ಕೂ ಹೇಸುವುದಿಲ್ಲ. ಇವುಗಳನ್ನು ಸೃಷ್ಟಿಸಿದ್ದು ತನುವೇ. ಇವುಗಳಿಗೆ ಮರುಳಾದದ್ದೂ ತನುವೇ.

ಅರಿವಿನಿಂದ ಭೂಮಿ ಅಗೆದಾಗ ಮಣ್ಣ ತಪ್ಪಿಸಿಕೊಂಡು ಹೊರಬಂದ ಹೊನ್ನಿಗೆ ಬೆಲೆ ಬಂದಿತು. ಹಾಗೆಯೇ ಬೆಳೆಯುವ ಮಣ್ಣಿಗೂ ಬೆಲೆ ಬಂದಿತು. ಮಣ್ಣನ್ನು ಮಣ್ಣ ಗರ್ಭದಿಂದ ಹೊರಬಂದ ಹೊನ್ನನ್ನು ತನು ಪ್ರೀತಿಸಿತು.

ತನುವಿನ ಮನದ ಭ್ರಮೆಯ ಪ್ರೀತಿಯನ್ನೇ ಹೊನ್ನು ಮತ್ತು ಮಣ್ಣ ಮೇಲೆ ಚೆಲ್ಲಿ ಅವುಗಳಿಂದಲೇ ತನುವಿಗೆ ಸುಖವಾಯಿತೆಂದು ಭ್ರಮಿಸಿ, ವಿಧಿಯನ್ನು ಹೆಗಲಿಗೇರಿಸಿಕೊಂಡಿತು. ಅನುದಿನವೂ ಅವುಗಳ ಸಂಗ್ರಹ ಸುಖದ ಸಂಕಟಕ್ಕೊಳಗಾಯಿತು.

ಹಾಗೆಯೇ ತನ್ನಂತೆ ಇರುವ ತನುವನ್ನು ಹೆಣ್ಣೆಂದು ಗಂಡೆಂದು ಅಪ್ಪಿಕೊಂಡು ಅನುದಿನವೂ ಸ್ಪರ್ಶ ಸುಖದ ಬಯಕೆಗೆ ತನು ತೊಳಲಿ ಬಳಲಿತು. ತನು, ತನುವಿನ ಜನ್ಮಕ್ಕಾಗಿ ವರ್ಷಕ್ಕೊಮ್ಮೆ ಅಥವಾ ಋತುಕಾಲಕ್ಕೆ ಕಾತುರಪಟ್ಟರೆ ಅಡ್ಡಿಯಿಲ್ಲ, ನೋಡಿ ಸುಖಿಸುವ, ದೊರೆಯದಿದ್ದರೆ ಸಂಕಟದಿಂದ ಯಾತನೆಗೊಳಗಾಗುವ ಕೊಂದಾದರೂ ತನುವಿನೊಂದಿಗೆ ಕೂಡುವ ಪೈಶಾಚಿಕ ವೃತ್ತಿಯು ತನುವಿನಲ್ಲಿ ಬಲಿಯಿತು.

ಹಾಲು ನೀರು ಬೆರಸಿದರೆ ಹಾಲನ್ನು ಮಾತ್ರ ಸೇವಿಸಿ ನೀರು ಉಳಿಸುವ ಹಂಸದ ನೆನಪು ತನುವಿಗಾಗಲಿಲ್ಲ.

ಮಣ್ಣು ತಪ್ಪಿಸಿಕೊಂಡು ಬಂದ ಹೊನ್ನು ಅತಿ ಬೆಲೆಗೆ ಬಿಕರಿಯಾದ ಭೇದವು ತನುವಿಗೆ ಅರಿವಾಗಲಿಲ್ಲ.

ತನ್ನಂತೆ ಇರುವ ತನುವನ್ನು, ಮೂಳೆ ಮಾಂಸ ರಕ್ತ ಹೊದ್ದ ಚರ್ಮವನ್ನು ಅಪ್ಪಿಕೊಂಡು ತನ್ನ ದ್ರವ ತಾನೇ ಚೆಲ್ಲಿ ತನುವಿನಿಂದಲೇ ತನುವಿಗೆ ಸುಖವಾಯಿತೆಂಬ ಭ್ರಮೆ ತನುವಿಗೆ ದೂರವಾಗಲಿಲ್ಲ.

ತನುವಿಗೆ ಜನ್ಮ ನೀಡಿದ ಜಲದಿಂದಲೇ ಜನ್ಮ ಪಡೆದ ಹೊನ್ನು ಹೆಣ್ಣು ಮಣ್ಣು ನೋಡುವ ಅರಿವು ತನುವಿನಲ್ಲಿ ಮರೆಯಾಯಿತು.

ಜಲಬಿಂದು ಗರ್ಭ ಸೇರಿ ತನುವಾಯಿತು, ಜಲ ಕುದ್ದು ಪಾಕವಾಗಿ, ಗಟ್ಟಿಯಾಗಿ ಮಣ್ಣಾಯಿತು, ಭೂಮಿಯಾಯಿತು. ಆ ಮಣ್ಣೇ ಹೊನ್ನಿಗೆ ಜನ್ಮ ನೀಡಿತು.

ಜಲ ಹರಿದು ಸಸ್ಯವಾಯಿತು. ಆ ಸಸ್ಯಗಳಿಂದಲೇ ಕಡಲೆ ಕುಸುಬೆ ಸೂರ್ಯಕಾಂತಿ ಬೀಜವಾಗಿ ಎಣ್ಣೆಯಾಯಿತು. ಆ ಎಣ್ಣೆ ಮತ್ತೆ ನೀರಲ್ಲಿ ಬೆರೆತು ಉರಿಯದ ಭೇದ ತನುವಿಗೆ ಹೊಳೆಯದಾಯಿತು.

ವೇದ ಉಪನಿಷತ್ತು ಭಗವದ್ಗೀತೆ ನುಡಿಯುವ ತನು ಹೊನ್ನು ಹೆಣ್ಣು ಮಣ್ಣೆಂಬ ಬಲೆಗೆ ಸಿಲುಕಿ ಸಂಕಟಗೊಂಡಿತು. ತನ್ನಂತೆಯೇ ಇರುವ ನಿಜ ತಿಳಿದ ತನುವನ್ನು ಗುರುವನ್ನಾಗಿ ಮಾಡಿಕೊಳ್ಳಲು ಹಗಲಿರುಳು ಹುಡುಕಿತು. ಬಣ್ಣಗೆಟ್ಟ ಭಂಡ ತನುವಿನ ಮನವ ಕಂಡು ತನುವಿನ ಅರಿವೆಂಬ ಜಾಂಬೇಶ್ವರನು ಚುನ್ನವಾಡುತ್ತಿದ್ದಾನೆ .

ತನುವಿನಲ್ಲಿ ಅರಿವು ಇದೆ, ಮರೆವು ಇದೆ. ಅರಿವು ಪಡೆಯಲು, ಅರಿವಿನ ತನುವನ್ನು ಹುಡುಕುವ ಮರುಳ ತನುವನ್ನು ಕಂಡು ರಾಯಸದ ಮಂಚಣ್ಣ ಶರಣರು ಮಮ್ಮಲ ಮರುಗಿದ್ದಾರೆ.

□

**ಅರಿವಿನ ಪರಿಮಳ :**

- □ ತನುವಿನ ಮನದ ಭ್ರಮೆಯ ಪ್ರೀತಿಯನ್ನೇ ಹೊನ್ನು ಮತ್ತು ಮಣ್ಣ ಮೇಲೆ ಚೆಲ್ಲಿ ಅವುಗಳಿಂದಲೇ ತನುವಿಗೆ ಸುಖವಾಯಿತೆಂದು ಭ್ರಮಿಸಿ, ವಿಧಿಯನ್ನು ಹೆಗಲಿಗೇರಿಸಿಕೊಂಡಿತು. ಅನುದಿನವೂ ಅವುಗಳ ಸಂಗ್ರಹ ಸುಖದ ಸಂಕಟಕ್ಕೊಳಗಾಯಿತು.

# ಸ್ವತಂತ್ರ ತನುವಿಗೆ ದೇವರ ಹಂಗೇಕೆ?

**ಆವ ಕಾಯಕವಾದಡೂ ಸ್ವಕಾಯವ ಮಾಡಿ ಗುರು ಲಿಂಗ ಜಂಗಮದ ಮುಂದಿಟ್ಟು,**
**ಒಕ್ಕುದ ಹಾರೈಸಿ, ಮಿಕ್ಕುದ ಕೈಕೊಂಡು,**
**ವ್ಯಾಧಿ ಬಂದಡೆ ನರಳು, ಬೇನೆ ಬಂದಡೆ ಒರಲು,**
**ಜೀವ ಹೋದಡೆ ಸಾಯಿ, ಇದಕ್ಕಾ ದೇವರ ಹಂಗೇಕೆ?**
**ಭಾಪು ಲದ್ದೆಯ ಸೋಮಾ?**

**-ಲದ್ದೆಯ ಸೋಮಯ್ಯ ಶರಣರು**

ಯಾವ ಕಾಯಕ ಮಾಡಿದರೂ ಕೂಡಾ ಕಾಯ ಸ್ವಕಾಯವಲ್ಲ. ಕಾಯವನ್ನು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರವೆಂಬ ಕುಂಟಲಗಿತ್ತಿಯರು ಆಳುತ್ತಿದ್ದಾರೆ. ಅಷ್ಟ ಮದಗಳೆಂಬ ಕ್ರೂರಿಗಳ ಕೈಯಲ್ಲಿ ಕಾಯ ಸಿಕ್ಕು ಹೆಳವನಾಗಿದೆ. ತನ್ನ ಸ್ವಾತಂತ್ರ್ಯ ತಾನೇ ಕಳೆದುಕೊಂಡಿದೆ. ಕಾಯ ಒಂದಾದರೂ ಹದಿನಾಲ್ಕು ವೈರಿಗಳ ಜನರ ಸ್ವಾಧೀನದಲ್ಲಿದೆ.

ತನು ಒಂದಾದರೂ ತನುವಿನ ಇಂದ್ರಿಯಗಳು ಐದು. ಒಂದೊಂದು ಇಂದ್ರಿಯಕ್ಕೂ ಒಬ್ಬೊಬ್ಬ ರಕ್ಕಸ ವಕ್ಕರಿಸಿದ್ದಾನೆ. ಕಣ್ಣು ನೋಡುತ್ತದೆ. ನೋಡುವ ನೋಟದಲ್ಲಿಯ ರಕ್ಕಸ ಬೇಡಲು ಹಚ್ಚುತ್ತಾನೆ. ಕಣ್ಣಿಗೆ ಮಾತನಾಡಲು ಬರುವುದಿಲ್ಲ. ಬಾಯಿಗೆ ನೋಡಲು ಬರುವುದಿಲ್ಲ. ಆದರೂ ಕಣ್ಣಿನ ರಕ್ಕಸ ಬಾಯಿಗೆ ಬಂದು ನೋಡದ್ದನ್ನು ನೋಡಿದಂತೆ ಬೇಡುತ್ತಾನೆ. ಕಿವಿಗೆ ಕೇಳಲು ಬರುತ್ತದೆ : ಕೇಳದ ಬಾಯಿ ಕೇಳಿದೆನೆಂದು ನುಡಿಯುವ ಮೂಲಕ ರಕ್ಕಸ ಕಾಯದ ಸೇಡು ತೀರಿಸಿಕೊಳ್ಳುತ್ತಾನೆ. ಹೀಗೆ ಪಂಚೇಂದ್ರಿಯಗಳಲ್ಲಿ ವಾಸ ಮಾಡಿದ ರಕ್ಕಸ ಇಡೀ ತನುವನ್ನೇ ಕ್ಯಾಪ್ಚರ್ ಮಾಡಿದ್ದಾನೆ.

ಕಾಣುವ ವೈರಿಗಳೊಂದಿಗೆ ಕಾದು ಕಠಾರಿ , ಬಾಂಬು , ಅಣು ಬಾಂಬುಗಳೊಂದಿಗೆ ಯುದ್ದ ಮಾಡಿ ಗೆದ್ದು, ಸ್ವತಂತ್ರರಾದೆವೆಂದು ಘೋಷಣೆ ಮಾಡಬಹುದು. ಕಾಣದ ವೈರಿಗಳಿಂದ ಕಾಯ ಪರತಂತ್ರವಾಗಿದೆ. ನೋಡುವ ಕಣ್ಣಿಗೆ ವೈರಿಗಳು ಮುತ್ತಿಗೆ ಹಾಕಿ ಕಾಯವನ್ನು ಸಂಕಟಕ್ಕೊಡ್ಡಿವೆ. ಕೇಳುವ ಕಿವಿಗೆ ಮುತ್ತಿಗೆ ಹಾಕಿ ಶಬ್ದದ ಸೀಸ ಸುರಿಯುತ್ತಿವೆ. ರುಚಿಸುವ ನಾಲಿಗೆಗೆ ಮುತ್ತಿಗೆ ಹಾಕಿ ತನುವನ್ನೇ ಸಂಕಟಕ್ಕೊಡ್ಡಿವೆ. ಚರ್ಮದ ಕವಚಕ್ಕೆ ಮುತ್ತಿಗೆ ಹಾಕಿ ತನುವನ್ನೇ ಮೃತ್ಯು ಕೂಪಕ್ಕೆ ತಳ್ಳುತ್ತಿವೆ. ವಾಸಿಸುವ ಮೂಗಿಗೆ ಮುತ್ತಿಗೆ ಹಾಕಿ ನರಕದ ದರ್ಶನ ಮಾಡಿಸುತ್ತಿವೆ.

ಪರತಂತ್ರದ ಕಾಯವನ್ನು ಸ್ವತಂತ್ರಮಾಡುವ ಯುದ್ಧದ ಪರಿಕರ ಸೂತ್ರಗಳು ಕಾಯದಲ್ಲಿಯೇ ಇವೆ. ಗುರು ಲಿಂಗ ಜಂಗಮವೆಂಬ ಬ್ರಹ್ಮಾಸ್ತ್ರದ ಮೂಲಕ ಕಾಯಕ್ಕೆ ಮುತ್ತಿಗೆ ಹಾಕಿದ ರಕ್ಕಸರು ಸುಟ್ಟು ಬೂದಿಯಾಗುತ್ತಾರೆ. ಆಗ ಕಾಯ ಸ್ವಕಾಯ ! ಯಾರ ಹಂಗೂ ಇಲ್ಲದ ಸ್ವತಂತ್ರ ಕಾಯ! ನೋಡುವ ನೋಟವೆಲ್ಲ ಶೃಂಗಾರ, ಕೇಳುವ ಶಬ್ದವೆಲ್ಲ ಆನಂದ, ರುಚಿಸುವ ಪದಾರ್ಥವೆಲ್ಲ ಸ್ವಾದಿಷ್ಠ, ಸ್ಪರ್ಶಿಸುವ ವಸ್ತುಗಳೆಲ್ಲ ಹೂವಿನಂತೆ ಕೋಮಲ, ವಾಸಿಸುವ ಪದಾರ್ಥವೆಲ್ಲ ಶ್ರೀಗಂಧ.

ವ್ಯಾಧಿ ಬಂದರೆ ನರಳುತ್ತದೆ, ಬೇನೆ ಬಂದಡೆ ಒರಲುತ್ತದೆ, ಜೀವ ಹೋದಡೆ ಸಾಯುತ್ತದೆ. ಯಾವ ದೇವರ ಹಂಗೂ ಇಲ್ಲದಂತೆ ತಾನೇ ದೇವರ ದೇವನಾಗಿ ಸ್ವತಂತ್ರವಾಗಿ ಸ್ವಕಾಯವಾಗಿ ಬದುಕುತ್ತದೆ ಎನ್ನುತ್ತಾರೆ ಲದ್ದೆಯ ಸೋಮಯ್ಯ ಶರಣರು.

□

# ಜಲದ ತನುವಿನಲ್ಲಿ ಬತ್ತದ ಜ್ಞಾನದ ಸೆಲೆ

ಅಗೆಯದ ಬಾವಿಯಲ್ಲಿ ಸೆಲೆಯಿಲ್ಲದ ನೀರದೆ.
ಸೇದುವುದಕ್ಕೆ ಹುರಿಯಿಲ್ಲದ ಕಣ್ಣಿ,
ತುಂಬುವುದಕ್ಕೆ ಬಾಯಿಲ್ಲದ ಕುಂಭ,
ಸೇದುವಾತನ ಕಣ್ಣು ತಲೆಯ ಹಿಂದೆ ಅದೆ.
ಕಣ್ಣಿಯ ತೆಗೆವ ಕೈಕಾಲಿಲ್ಲದೆ ಬಾವಿಯ ತಡಿ ತಡವಾಯಿತ್ತು ,
ಅಲೇಖನಾದ ಶೂನ್ಯ ಕಲ್ಲಿನೊಳಗಾದ ಕಾರಣ.

–ವಚನಭಂಡಾರಿ ಶಾಂತರಸ

ತನು ಜ್ಞಾನಾಮೃತದ ಬುಗ್ಗೆ. ಬೊಗಸೆಯಲ್ಲಿ ಬಗೆದಂತೆಲ್ಲ ಜ್ಞಾನವೇ ಜ್ಞಾನ. ಸವೆಯದ ಜ್ಞಾನಾಮೃತ. ಜಗತ್ತಿನ ಸಕಲ ಪುಸ್ತಕಗಳೂ ತನುವಿನಿಂದಲೇ ಮುದ್ರಣಗೊಂಡವು. ಓದಿದರೆ ಆನಂದ. ಕೇಳಿದರೂ ಆನಂದ. ಮುಟ್ಟಿದರೂ ಆನಂದ. ಆನಂದವೆನ್ನುವುದು ತನುವಿನಲ್ಲಿರುವುದರಿಂದಲೇ ಓದಿದರೆ ಆನಂದವಾಗುತ್ತದೆ. ಪುಸ್ತಕ ಓದಿದ್ದಕ್ಕಾಗಿ ಆನಂದವಾಯಿತೆಂದು ಮನ ಕ್ಷಣಾರ್ಧದಲ್ಲಿ ತನುವಿನ ಆನಂದವನ್ನು ಮರೆಯಿಸಿಬಿಡುತ್ತದೆ. ಬರೆದವರನ್ನು ಪುಸ್ತಕವನ್ನು ಹೊಗಳುತ್ತದೆ.

ತನು ಜ್ಞಾನಾಮೃತದ ಬಾವಿ. ಸೆಲೆಯಿಲ್ಲದ ಜ್ಞಾನಾಮೃತವಿದೆ. ಅಮೃತದ ಜಲವನ್ನು ಬಾವಿಯಿಂದ ಸೇದುವುದಕ್ಕೆ ಹುರಿಯಿಲ್ಲದ ಹಗ್ಗ ಬೇಕು. ಬಾಯಿಲ್ಲದ ಕುಂಭ ಬೇಕು. ಆದರೆ ತಲೆಯ ಹಿಂದೆ ಕಣ್ಣಿಟ್ಟುಕೊಂಡು ಸೇದಿದರೆ ತಡವಾಗುತ್ತದೆ.

ಜಲಬಿಂದು ಗರ್ಭ ಸೇರಿ ತನುವಾಯಿತು. ಅಮೃತದ ಜಲವಾಗಿ ಹೊರಬಂದಿತು. ಅಮೃತದ ಬಿಂದುಗಳನ್ನೇ ಚೆಲ್ಲಿ ನುಡಿಯುತ್ತದೆ, ಆಲಿಸುತ್ತದೆ, ರುಚಿಸುತ್ತದೆ, ಸ್ಪರ್ಶಿಸುತ್ತದೆ, ವಾಸಿಸುತ್ತದೆ. ಈ ಐದು ಕ್ರಿಯೆಗಳ ಮೂಲಕ ಸೆಲೆಯೇ ಇಲ್ಲದ ತನುವೆಂಬ ಅಮೃತದ ಜಲ ನಿರಂತರ ಆನಂದಪಡುತ್ತದೆ.

ಜಲದಿಂದಲೇ ಐದು ಕ್ರಿಯೆಗಳು ನಡೆದರೂ ಕೂಡಾ ತನುವಿನ ಜಲಕ್ಕೆ ಮರೆವಾಯಿತು. ಪುಸ್ತಕ, ಪುಣ್ಯಕ್ಷೇತ್ರ, ಪಂಡಿತರ ಮಾತುಗಳೇ ಶ್ರೇಷ್ಠವಾದವು. ಆಲಿಸಿ, ಸಂಗ್ರಹಿಸಿ ತನ್ನಂತಹ ಇತರ ತನುಗಳಿಂದಲೇ ತನಗೆ ಸುಖವೆಂದು ಭ್ರಮಿಸಿತು. ತನ್ನ ಸಂಪತ್ತು ತನ್ನ ಗರ್ಭದಲ್ಲಿಯೇ ಐಕ್ಯವಾಯಿತು.

ಕಲಾವಿದನ ಮೊಳೆ ಮತ್ತು ಸುತ್ತಿಗೆಯಿಂದ ಪೆಟ್ಟುತಿಂದ ಕಲ್ಲು ದೇವರಾಯಿತು. ಕಲ್ಲು ನೋಡುವ ಕಣ್ಣು ಕಲ್ಲಿನೊಳಗಾಗಿ ತಲೆಯ ಹಿಂದಿನ ಕಣ್ಣು ದೇವರನ್ನು ಆರಾಧಿಸಿತು.

ಜಲಬಿಂದುವಿನಿಂದ ಹುಟ್ಟಿದ ಜಲದ ತನುವಿನಲ್ಲಿ ಸೆಲೆಯಿಲ್ಲದ ಅಮೃತದ ಬುಗ್ಗೆ ಮರೆಯಾಯಿತು. ಕಣ್ಣು, ಕಿವಿ, ಮೂಗು, ಚರ್ಮ, ನಾಲಿಗೆ ಕೂಡಾ ಅಮೃತದ ಜಲಬಿಂದುವಿನಿಂದಲೇ ನಿರ್ಮಾಣವಾಗಿವೆ. ನೋಡುವ ನೋಟವೆಲ್ಲ ಸುಂದರವಾದ ಲೇಖನಗಳೇ, ಕೇಳುವ ಶಬ್ದವೆಲ್ಲ ಲೇಖನಗಳೇ, ರುಚಿಸುವ ಪದಾರ್ಥ, ಸ್ಪರ್ಶಿಸುವ ಸುಖ, ವಾಸಿಸುವ ಆನಂದವೆಲ್ಲ ಲೇಖನಗಳೇ. ಮರೆವಾದ ಕಾರಣ ಅಲೇಖನಾಗಿ ತನುವಿನ ಗರ್ಭದಲ್ಲಿಯೇ ಐಕ್ಯವಾದ. ಅರಿವಾದರೆ ಕೋಟಿ ಸೂರ್ಯರನ್ನು ನಾಚಿಸುವ ಬೆಳಕು ಬೀರುತ್ತಾನೆ. ನಿರಂತರ ಶಾಂತರಸದ ಸಿಂಚನವನ್ನೇ ಚೆಲ್ಲುತ್ತಾನೆ. □

# ದಶಾವತಾರಗಳನ್ನು ಗಾಣಕ್ಕೆ ಹಾಕಿ ತಿರುವಿದ ಗಾಣದ ಕಣ್ಣಪ್ಪ

ಗಾಣವ ಹಾಕಲಾಗಿ ಆರಾರು ಸಿಕ್ಕಿದರು. ಆರೈಕೆಗೊಳ್ಳಯ್ಯ
ಐದಕ್ಕೊಂದು ಹೋಗಿ ನಾಲ್ಕರಲ್ಲಿ ನಾಚಿಕೆಗೆಟ್ಟು
ಜಗದಾಶೆಯ ಬಯಕೆಯಿಂದ ದಶಾವತಾರವಾದ.
ಇಷ್ಟದ ಇಂದ್ರಿಯಕ್ಕಾಗಿ ಪಾಶವ ಹೊತ್ತ ತಲೆಯಲ್ಲಿ
ಇಂತೀ ವೇಷಧಾರಿ ಹಾಕಿದ ಗಾಣದಲ್ಲಿ ಇಷ್ಟಕ್ಕೆ ಸಿಕ್ಕಿ
ಘಾಸಿಯಾದರು ಇನ್ನಿಪ್ಪುವರಾರಯ್ಯ
ಗುಹೇಶ್ವರನ ಶರಣ ಅಲ್ಲಮನಲ್ಲದೆ ?

–ಗಾಣದ ಕಣ್ಣಪ್ಪ ಶರಣರು

ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಗಳನ್ನು ಗಾಣದಲ್ಲಿ ಹಾಕಿ ತಿರಿವಿ ಆರೈಕೆಗೊಳ್ಳುವುದು ಉಚಿತ. ಇಲ್ಲವಾದಲ್ಲಿ ತನುವನ್ನು ತನ್ನತ್ತ ಸೆಳೆದುಕೊಂಡು ಗಾಣದಲ್ಲಿ ಹಾಕಿ ತಿರುವುತ್ತವೆ ಅರಿಷಡ್ವರ್ಗಗಳು.

ಪಂಚ ಜ್ಞಾನೇಂದ್ರಿಯಗಳಲ್ಲಿ ಕಣ್ಣು ಬಲು ಸೂಕ್ಷ್ಮ. ಅದು ನೋಡಿದತ್ತ ನಾಲ್ಕು ಇಂದ್ರಿಯಗಳನ್ನು ತನುವಿನೊಂದಿಗೆ ನಾಚಿಕೆಗೆಟ್ಟು ಸೆಳೆಯುತ್ತದೆ. ನೋಡುವ ವಸ್ತುವನ್ನು ಜ್ಞಾನದಿಂದ ಅಲ್ಲಿಯೇ ಅನಾವರಣ ಮಾಡಿದರೆ ಕಣ್ಣಿನೊಂದಿಗೆ ನಾಲ್ಕು ಇಂದ್ರಿಯಗಳು ತನು ಕೂಡಾ ಸೇಫಾಗಿ ಉಳಿಯುತ್ತದೆ.

ಇದು ಸಾಧ್ಯವಾಗದದ್ದಕ್ಕಾಗಿ ಶ್ರೀಕೃಷ್ಣ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರುಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ ದಶ ಅವತಾರಗಳನ್ನು ಎತ್ತಿದ. ಇಷ್ಟದ ಇಂದ್ರಿಯಕ್ಕಾಗಿ ತಲೆಯಲ್ಲಿ ಪಾಶವ ಹೊತ್ತ.

**ಇಂತೀ ವೇಷಧಾರಿ ಹಾಕಿದ ಗಾಣದಲ್ಲಿ ಇಷ್ಟಕ್ಕೆ ಸಿಕ್ಕಿ ಘಾಸಿಯಾದರು ಇನ್ನಿಪ್ಪುವರಾರಯ್ಯ ಗುಹೇಶ್ವರ ಶರಣ ಅಲ್ಲಮನಲ್ಲದೆ ? :**

ಸುಖಕ್ಕಾಗಿ ತನುವನ್ನು ಮನ ದುರ್ಬಳಕೆ ಮಾಡಿಕೊಂಡು ತನುವಿಗೆ ಹತ್ತು ಅವತಾರಗಳನ್ನು ಹಾಕಿತು. ಮನ ಹಾಕಿದ ಒಂದೊಂದು ಅವತಾರದಲ್ಲಿ ತನುವಿನ ಜ್ಞಾನದಿಂದ ಪಾರಾಗುವದಕ್ಕಿಂತ ಅವೆಲ್ಲವುಗಳನ್ನು ಒಟ್ಟಿಗೆ ತನ್ನಿಷ್ಟದಂತೆ ಗಾಣದಲ್ಲಿ ಹಾಕಿ ಪಾರಾಗುವುದು ಲೇಸಲ್ಲವೆ ? ಇದನ್ನು ತನುವಿನ ಗುಹೆಯಲ್ಲಿ ಉಳಿದವ ಗುಹೇಶ್ವರ ಶರಣ ಅಲ್ಲಮನೊಬ್ಬನೆ ಬಲ್ಲ ಎಂದು ಗಾಣದ ಕಣ್ಣಪ್ಪ ಶರಣರು ತನುವಿನ ಜ್ಞಾನವನ್ನು ತೀಕ್ಷ್ಣವಾಗಿ ಪಡೆಯುವ ಸರಳ ಸೂತ್ರವನ್ನು ಓದುಗರಿಗೆ ನೀಡಿದ್ದಾರೆ.

□

# ಅರಿವಾದರೆ ಜ್ಞಾನಿ ಮರೆವಾದರೆ ಕುರಿ

**ಮೂರು ವರ್ಣದ ಬೊಟ್ಟುಗ, ಆರು ವರ್ಣದ ಅಳಗ,**
**ಐದು ವರ್ಣದ ಸಂಚಿಗ ಇವರೊಳಗಾದ ನಾನಾವರ್ಣದ**
**ಅಜಕುಲ, ಕುರಿವರ್ಗ, ಕೊಲುವ ತೋಳನ ಕುಲ,**
**ಮುಂತಾದ ತ್ರಿವಿಧದ ಬಟ್ಟೆಯ ಮೆಟ್ಟಿದೆ, ಮೂರಮುಟ್ಟಿದೆ,**
**ಆರ ತಟ್ಟಿದೆ, ಐದರ ಬಟ್ಟೆಯ ತಟ್ಟಿದೆ,**
**ಒಂದೇ ಹೊಲದಲ್ಲಿ ಮೇದು, ಮಂದೆಯಲ್ಲಿ ನಿಂದು, ಸಂದೇಹ ಕಳೆದು,**
**ಉಳಿಯದ ಸಂದೇಹವ ತಿಳಿದು,**
**ವೀರಬೀರೇಶ್ವರ ಲಿಂಗದಲ್ಲಿಗೆ ಹೋಗುತ್ತಿರಬೇಕು.**

**-ವೀರಗೊಲ್ಲಾಳ ಶರಣರು**

ವೀರಗೊಲ್ಲಾಳ ಶರಣರು ಕುರಿ ಕಾಯುವ ಕಾಯಕದಲ್ಲಿ ನಿರತರಾದವರು. ಬೊಟ್ಟುಗ ಅಳಗ ಸಂಚಿಗ ಹೆಸರಿನಲ್ಲಿ ಕುರಿಗಳ ಬಣ್ಣಗಳನ್ನು ವಿಂಗಡಿಸಿದ್ದಾರೆ. ಹಾಗೆಯೇ ತನುವಿನ ಜ್ಞಾನವನ್ನು , ತನುವಿಗೆ ಆವರಿಸಿದ ಅಜ್ಞಾನವನ್ನು ತಮ್ಮ ಕಾಯಕದ ಪಡೆನುಡಿಗಳಿಂದ ಕರೆದು ಜ್ಞಾನ-ಅಜ್ಞಾನವನ್ನು ಬೈಫರ್‌ಕೇಷನ್ ಮಾಡಿದ್ದಾರೆ.

**ಮೂರು ವರ್ಣದ ಬೊಟ್ಟುಗ:** ತನು ನೋಡಲು ಒಂದೇ ವರ್ಣದ್ದಾದರೂ, ಅದು ಸ್ಥೂಲ, ಸೂಕ್ಷ್ಮ ಕಾರಣ ಎಂಬ ಮೂರು ವರ್ಣದ ಬೊಟ್ಟುಗ ಜಾತಿಯ ಕುರಿ.

ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ ಐಕ್ಯನೆಂಬ ಆರು ವರ್ಣದ ಅಳಗ ಜಾತಿಯ ಮಂದೆ. ಶಬ್ದ, ಸ್ಪರ್ಶ, ರೂಪ, ರಸ, ಗಂಧಾ ದಿಗಳನ್ನು ಕಿವಿ, ಚರ್ಮ, ಕಣ್ಣು, ನಾಲಿಗೆ ಮೂಗಿನ ಮೂಲಕ ಜ್ಞಾನದಿಂದ ಬಳಕೆಮಾಡುವ ಚತುರ ಸಂಚಿಗನೆಂಬ ಜಾತಿಯ ಕುರಿಗಳು ಕೂಡಾ ಮಂದೆಯಲ್ಲಿ ಬೆರೆತಿವೆ.

ಬೊಟ್ಟುಗ, ಅಳಗ, ಸಂಚಿಗನೆಂಬ ಜಾತಿಕುರಿಗಳ ಮಂದೆಯಲ್ಲಿ ನಾನಾ ವರ್ಣದ ಅಜಕುಲವೂ ಇದೆ. ಹಾಗೆಯೇ ಏನೂ ತಿಳಿಯದೆ ಅಜ್ಞಾನಕ್ಕೆ ಬಲಿಯಾಗುವ ಕುರಿ ವರ್ಗವೂ ಇದೆ. ಇವುಗಳನ್ನು ಕೊಂದು ತಿನ್ನುವ ತೋಳನ ಕುಲವೂ ಇದೆ.

ಸ್ಥೂಲ ಸೂಕ್ಷ್ಮ ಕಾರಣ ಎಂಬ ಬೊಟ್ಟುಗದ ಜಾತಿಕುರಿಗೆ ತ್ರಿವಿಧದ ಬಟ್ಟೆಯನ್ನು ದಿಟ್ಟತನ ದಿಂದ ಮೆಟ್ಟಲು ಬಂದಲ್ಲಿ ಸ್ಥೂಲ ಸೂಕ್ಷ್ಮ ಕಾರಣ ಎಂಬ ಮೂರು ತನುಗಳನ್ನು ಆನಂದದಿಂದ ಮುಟ್ಟಲು ಸಾಧ್ಯವಾಗುತ್ತದೆ. ಆಗ ಭಕ್ತ ಮಾಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣನಾಗಿ ಮಹಾಜ್ಞಾನ ದಲ್ಲಿ ಮಿಂದು ಅದರಲ್ಲಿ ಐಕ್ಯನಾಗಲೂ ಬರುತ್ತದೆ. ಆಗ ಕಣ್ಣು, ಕಿವಿ, ಮೂಗು, ನಾಲಿಗೆ ಚರ್ಮ ವೆಂಬ ಐದು ಜ್ಞಾನೇಂದ್ರಿಯಗಳು ಒಂದೇ ತನುವಿನ ಮಹಾಜ್ಞಾನವೆಂಬ ಹೊಲದಲ್ಲಿ ಮೇದು ಆನಂದ ಪಡುತ್ತವೆ. ಮಂದೆಯಲ್ಲಿ ನಿಂದು ಸಂದೇಹ ಕಳೆದುಕೊಳ್ಳುತ್ತವೆ. ಉಳಿದ ಸಂದೇಹಗಳನ್ನೂ ಅರಿವಿನಿಂದ ತಿಳಿಯುತ್ತಾ ವೀರ ಬೀರೇಶ್ವರಲಿಂಗನೆಂಬ ತನುವಿನ ಜ್ಞಾನದ ಬಳಿಗೆ ಸಾಗುತ್ತವೆ. ಅರಿವಿನ ವೀರಕುರಿ ಎಂಬ ತನು ತಾನೇ ಆಗುತ್ತದೆ ಎಂದಿದ್ದಾರೆ ವೀರಗೊಲ್ಲಾಳ ಶರಣರು.

□

# ಅತಿಥಿಯನ್ನು ಆದರಿಸುವ ಬಸವಣ್ಣನ ಸೂತ್ರ

**ಹಾದರ ಹಸುಗೊಲೆ ವಿಷಯಂಗಳಲ್ಲಿ ಆದರಿಸಬೇಕು.**
**ಬಲ್ಲವರಲ್ಲಿ ಸಾಧನೆಯಾಯಿತ್ತು**
**ಎಲ್ಲರೂ ಕಲಿತ ಕಲಿಕೆಯಲ್ಲಿ ಇದನ್ನು ಭೇದಿಸಲರಿಯೆ**
**ಕಾಮಹರಪ್ರಿಯ ರಾಮನಾಥಾ.**

**- ತಳವಾರ ಕಾಮಿದೇವಯ್ಯ ಶರಣರು**

**ಹಾದರ ಹಸುಗೊಲೆ ವಿಷಯಂಗಳಲ್ಲಿ ಆದರಿಸಬೇಕು :**

ತನುವಿನಲ್ಲಿ ಮೂರು ವಿಧದ ಹಸಿವಿದೆ. ಅನ್ನದ ಹಸಿವು, ಕಾಮದ ಹಸಿವು ಹಾಗೂ ಮನದಲ್ಲಿ ಹಾದರ ಮಾಡುವ ಹಸಿವು. ಮನೆಗೆ ಬಂದ ಅತಿಥಿಗೆ ಅನ್ನ, ಪಾನಾದಿಗಳನ್ನು ನೀಡಿ ಆದರಿಸಬಹುದು. ತನುವಿನ ವಿಷಯದ ಹಸಿವು ಮನದ ಹಾದರದ ಹಸಿವಗಳನ್ನು ನೀಗಿಸುವುದು ಹೇಗೆ? ತನುವು ಅನ್ನಪಾನಾದಿಗಳನ್ನು ಸ್ವೀಕರಿಸಿದರೆ ಜಠರಾಗ್ನಿ ಸಂತೃಪ್ತಿ! ಆದರೆ ತನುವನ್ನಾವರಿಸಿದ ಮನ ಅನ್ನ ನೀಡಿದ ತನುಗಳೊಂದಿಗೆ ಹಾದರ ಮಾಡುವುದು ಬಿಡುವುದಿಲ್ಲ. ತನುವನ್ನಾವರಿಸಿದ ಚರ್ಮ ಅನ್ನ ನೀಡಿದ ತನುವಿನೊಂದಿಗೆ ಸುಖಿಸುವುದಕ್ಕಾಗಿ ಹವಣಿಸುವುದು ಬಿಡುವುದಿಲ್ಲ.

ಅತಿಥಿ ಮಾತುಗಳೇನೊ ಬಲು ಸೊಗಸು. ಮಾತಿಗೂ ಮನಕ್ಕೂ ಅಜಗಜಾಂತರ ವ್ಯತ್ಯಾಸ. ಮುಖವಾಡ ಧರಿಸಿ ಮಾತನಾಡುತ್ತಾನೆ. ಮಾತನಾಡುವ ತನುವಿನೊಂದಿಗೆ ಮನದಲ್ಲಿ ಹಾದರ ನಡೆದಿರುತ್ತದೆ. ಮನದ ಹಾದರದ ಹಸಿವನ್ನು ತನುವಿನ ವಿಷಯದ ಹಸಿವನ್ನು ಆದರಿಸಿ ಸತ್ಕರಿಸುವುದು ಹೇಗೆ?

ಆತಿಥಿಯನ್ನು ಬರಮಾಡಿಕೊಂಡ ಯಾವ ಮನೆಯೊಡಯನಿಗೂ ಸಾಧ್ಯವಾಗದ ಮಾತು. ಊಹೆಗೂ ನಿಲುಕದ ಮಾತು. ಮನೆಗೆ ಬಂದ ಅತಿಥಿಯನ್ನು ಸರ್ವರೀತಿಯಲ್ಲೂ ಸತ್ಕರಿಸುವುದು ಉಚಿತ. ಆದರೆ ಅತಿಥಿ ಸತ್ಕಾರ ಬಲ್ಲ ಜ್ಞಾನಿಗೆ ಮಾತ್ರ ಇದು ಸಾಧ್ಯ.

**ಬಲ್ಲವರಲ್ಲಿದ್ದು ಸಾಧನೆಯಾಯ್ತಿ. ಎಲ್ಲರೂ ಕಲಿತ ಕಲಿಕೆಯಲ್ಲಿ ಇದನು ಭೇದಿಸಲರಿಯೆ ಕಾಮಹರ ಪ್ರಿಯ ರಾಮನಾಥ:**

ಕಾಮಿದೇವಯ್ಯ ಶರಣರು, ಎಲ್ಲರಿಗೂ ಇದು ಸಾಧ್ಯವಾಗದ ಮಾತು ಎನ್ನುತ್ತ ಬಲ್ಲವರಲ್ಲಿದ್ದು ಸಾಧ್ಯವಾಯಿತ್ತು ಎಂದಿದ್ದಾರೆ.

ಬಸವಣ್ಣನವರಿಗೆ ಮಾತ್ರ ಅತಿಥಿಗಳನ್ನು ಆದರಿಸುವ ಕಲೆ ಗೊತ್ತಿತ್ತು. ಅವರು ಸರ್ವ ಶರಣರಿಗೂ ಈ ಕಲೆಯ ಕೀಲನ್ನು ಕೆಳಗಿನಂತೆ ಸಾದರಪಡಿಸಿದ್ದಾರೆ.

**ಒಡವೆ ಭಂಡಾರ, ದ್ರವ್ಯ ಬೇಡುವ ಅತಿಥಿ:**

ಒಡವೆ ಭಂಡಾರ ಕಡವರ ದ್ರವ್ಯವ ಬಡ್ಡಿ ವ್ಯವಹಾರಕ್ಕೆ ಕೊಟ್ಟು ಮನೆಯ ಗೋಂಟಿನಲ್ಲಿ ಹೊಯ್ದುಕೊಂಡಿದ್ದೆನಾದಡೆ ಅದು ಎನ್ನರ್ಥವಲ್ಲ. ಅನರ್ಥವೆಂಬೆ. ಸಂಗಮದೇವಾ ನೀನು ಜಂಗಮರೂಪವಾಗಿ ಬಂದು ಆ ಧನವನು ನೀನು ಬಲ್ಲಂತೆ ಎನ್ನ ಮುಂದೆ ಸೂರೆಗೊಳುತಿರ್ದಡೆ ನಾನು ಬೇಕುಬೇಡೆಂದು ಮನದಲ್ಲಿ ಮರುಗಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ

ಮನದೊಡೆಯ ನೀನೆ ಬಲ್ಲೆ.

**ಸತಿಯ ಬೇಡುವ ಅತಿಥಿ:**

ಕಾಮನೇಮವೆಂಬ ಸಿಂಧು ಬಲ್ಲಾಳನ ವಧುವ ಸರ್ವಭುವನದೊಡೆಯ ಸಂಗಮದೇವರು ಬೇಡುವಂತಲ್ಲ. ಎನ್ನ ಸತಿ ನೀಲಾಲೋಚನೆ ಪೃಥ್ವಿಗಗ್ಗಳೆಯ ಚೆಲುವೆ, ಆಕೆಯ ಸಂಗಮದೇವಾ ನೀನು ಜಂಗಮರೂಪಾಗಿ ಬಂದು ಎನ್ನ ಮುಂದೆ ಸಂಗವ ಮಾಡುತ್ತಿರಲು ಎನ್ನೊಡನಿರ್ದ ಸತಿಯೆಂದು ಮಾಯಕ್ಕೆ ಮರುಗಿದೆನಾದಡೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ, ಮನದೊಡೆಯ ನೀನೆ ಬಲ್ಲೆ.

**ಮಗನ ಬೇಡುವ ಅತಿಥಿ:**

ಪ್ರತ್ಯಕ್ಷವಾಗಿ ಸಿರಿಯಾಳ ಸೆಟ್ಟಿ ಚಂಗಳವ್ವೆಯ ಮನೆಗೆ ಬಂದು ಅವರ ಮಗನ ಬೇಡುವಂತಲ್ಲ. ಸಂಗಮದೇವಾ ನಿನ್ನ ಹೆಸರ ಚಿಕ್ಕ ಸಂಗಯ್ಯನಿದ್ದಾನೆ. ನೀನು ಜಂಗಮರೂಪಾಗಿ ಬಂದು ಆತನ ಹಿಡಿದು ಎನ್ನಮುಂದೆ ಹೆಡೆಗುಡಿಯಕಟ್ಟಿ ಚಿನಿಖಂಡವ ಮಾಡಿ, ಬಾಣಸವ ಮಾಡುವಲ್ಲಿ, ಎನ್ನ ಉದರದಲ್ಲಿ ಬಂದ ಪುತ್ರನೆಂದು ಮಾಯಕ್ಕೆ ನಾನು ಮರುಗಿದೆನಾದಡೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಮನದೊಡೆಯ ನೀನೆ ಬಲ್ಲೆ. ಇಂತಿ ತ್ರಿವಿಧವು ಹೊರಗಣವು. ಎನ್ನ ನೋವಿನೊಳಗಲ್ಲ, ಎನ್ನ ಬೇನೆಯೊಳಗಲ್ಲ.

ಇನ್ನು ನಾನಿದ್ದೇನೆ. ಕದ್ದ ಕಳ್ಳನ ಕಟ್ಟುವಂತೆ ಕಟ್ಟಿ ನೀನು ಜಂಗಮ ರೂಪಾಗಿ ಬಂದು ಎನ್ನಂಗದ ಮೇಲೆ ಶಸ್ತ್ರವನ್ನಿಕ್ಕಿ ನೋಡು, ಬಸಿದ ಶೂಲ ಪ್ರಾಪ್ತಿಯ ಮಾಡಿ ನೋಡು, ನವ ಖಂಡವ ಮಾಡಿ ಕಡಿಕಡಿದು ನೋಡು, ಆ ಶೂಲ ವೈದ್ಯೆದು ಮುಖವಾಗಿ ಹಾಯುವಾಗ ಹರಿತಿನಿಸಿನೋಡಿ. ಈ ರೀತಿಯಲ್ಲಿ ಎನ್ನ ಭಂಗಬಿಡಿಸಿ ನೋಡಿದೆಡೆಯೂ ಲಿಂಗಾರ್ಚನೆಯ ಮಾಡುವುದ ಬಿಡೆ, ಜಂಗಮ ದಾಸೋಹ ಮಾಡುವುದು ಬಿಡೆ, ಪಾದ ತೀರ್ಥ ಪ್ರಸಾದವ ಕೊಂಬುದ ಬಿಡೆ. ಇಂತೀ ತ್ರಿವಿಧಕ್ಕೆ ರೋಷವ ಮಾಡಿ ಬಿಟ್ಟೆನಾದಡೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ. ಇಷ್ಟರೊಳಗೆ ತಪ್ಪುಳ್ಳಡೆ ಮೂದಲಿಸಿ ಮೂಗಕೊಯ್ಯಿ ಕೂಡಲಸಂಗಮದೇವಾ ಎಂದು ಸತ್ಕರಿಸಿ ತಮ್ಮ ತನುವನ್ನೇ ಬೇಡುವ ಅತಿಥಿಗೆ ಆತಿಥ್ಯ ನೀಡಿದ್ದಾರೆ ಮಹಾಜ್ಞಾನಿ ಬಸವಣ್ಣನವರು.

ದ್ರವ್ಯವನ್ನು ಹೆಂಡತಿಯನ್ನು ಮಗನನ್ನು ಕೊನೆಗೆ ನಾನು ಎಂಬ ತನುವಿನ ಅಜ್ಞಾನವನ್ನು ಮನೆಗೆ ಬಂದ ಅತಿಥಿಗೆ ನೀಡಿ ಅತಿಥಿಯ ಅಜ್ಞಾನವನ್ನು ಕಳೆದು ಜಂಗಮನನ್ನಾಗಿಸಿ ಆದರದಿಂದ ಸತ್ಕರಿಸಿದ್ದಾರೆ ಬಸವಣ್ಣನವರು. ತಳವಾರ ಕಾಮಿದೇವಯ್ಯ ಶರಣರು ಹೀಗೆ ಅತಿಥಿ ಸತ್ಕಾರ ಬಲ್ಲ ಬಸವಣ್ಣನವರಲ್ಲಿದ್ದು ಸಾಧನೆ ಮಾಡಿಕೊಂಡು ತನುವಿನ ವಿಷಯಾದಿಗಳನ್ನು ಜಯಿಸಿ ಕಾಮಹರ ಪ್ರಿಯ ರಾಮನಾಥನೇ ತಾವಾಗಿದ್ದಾರೆ.

□

# ತನುವನ್ನು ಮುಂದುಗಾಣಿಸದ ಮನ

**ಮುಂದುಗಾಣದ ಮಾನವರು ಮತ್ತೊಂದನರಿಯದೆ ಕೆಟ್ಟರು.**
**ಲಿಂಗವ ಪೂಜಿಸಿ, ಪ್ರಸಾದವ ವೇಧಿಸಿ, ಪ್ರಾಣಲಿಂಗ ಜಂಗಮ ವೆಂದರಿಯದೆ**
**ಕೆಟ್ಟುಹೋದರಯ್ಯಾ , ಕೂಡಲ ಚೆನ್ನ ಸಂಗಮದೇವಾ**

**-ಚೆನ್ನಬಸವಣ್ಣ**

**ಮುಂದುಗಾಣದ ಮಾನವರು ಮತ್ತೊಂದನರಿಯದೆ ಕೆಟ್ಟರು:**

ಚೆನ್ನ ಬಸವಣ್ಣನವರು ಹನ್ನೆರಡನೆಯ ಶತಮಾನದಲ್ಲಿ ಹೇಳಿದ ಮಾತಿದು. ಮನವುಳ್ಳ ಮನುಷ್ಯನ ಗುಣವೇ ಹಾಗೆ. ಮನ ಚಂಚಲೆ, ಅದು ಎಂದೂ ಮನುಷ್ಯನನ್ನು ಮುಂದುಗಾಣಲು ಬಿಡುವುದಿಲ್ಲ. ಮನ ನಷ್ಟವಾದರೆ ಮನುಷ್ಯ ಮುಂದುಗಾಣುವನು.

**ಲಿಂಗವ ಪೂಜಿಸಿ ಪ್ರಸಾದವ ವೇಧಿಸಿ, ಪ್ರಾಣಲಿಂಗ ಜಂಗಮವೆಂದರಿಯದೆ ಕೆಟ್ಟು ಹೋದರಯ್ಯಾ , ಕೂಡಲ ಚೆನ್ನ ಬಸಂಗಮದೇವಾ:**

ಲಿಂಗಪೂಜೆಯೆಂದರೆ ಅರಿವಿನ ಪೂಜೆ. ಶಬ್ಧ, ಸ್ಪರ್ಶ, ರೂಪ, ರುಚಿ ಪರಿಮಳದ ಸಹಜ ಗುಣವನ್ನು ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು ಎನ್ನುವ ಜ್ಞಾನೇಂದ್ರಿಯಗಳು ಅರಿವಿನಿಂದ ಸಹಜವಾಗಿಯೇ ಅನುಭವಿಸಬೇಕು. ಆದರೆ ಜ್ಞಾನೇಂದ್ರಿಯಗಳನ್ನು ಆವರಿಸಿದ ಮನ, ವಸ್ತುಗಳನ್ನು ವಿಪರೀತವಾಗಿ ಕಂಡು ಕೇಳಿ ದೇಹವನ್ನು ವಿಕೃತಗೊಳ್ಳುವಂತೆ ಮಾಡುತ್ತದೆ.

ಉದಾ: ಕತ್ತೆ ಎನ್ನುವ ಶಬ್ಧವನ್ನು ಮನ ಆವರಿಸಿದ ಕಿವಿ ವಿಪರೀತವಾಗಿ ಕೇಳಿ ದೇಹಕ್ಕೆ ರವಾನಿಸುತ್ತದೆ. ನಡುಕ ಹುಟ್ಟಿಸಿ ನರಕಯಾತನೆ ಅನುಭವಿಸುತ್ತದೆ. ಶಬ್ದ ಮಾಡಿದ ತನುವನ್ನು ಕೊಲೆ ಮಾಡುತ್ತದೆ. ಇಲ್ಲ ಶಬ್ದ ಕೇಳಿದ ತನುವನ್ನು ಆತ್ಮಹತ್ಯೆಗೆಳೆಸುತ್ತದೆ. ಶಬ್ದ ಮಾಡಿದ ತನು ನಷ್ಟವಾಗಬೇಕು. ಇಲ್ಲಿ ಕೇಳಿದ ತನು ನಷ್ಟವಾಗಬೇಕು. ಇದು ಮನ ಆವರಿಸಿದ ಮನುಷ್ಯನ ಕೆಲಸ. ಕತ್ತೆ ಎನ್ನುವ ಶಬ್ದವನ್ನು ಮನ ತಿಳಿಯದೆ ತನುವನ್ನು ಮುಂದುಗಾಣದಂತೆ ಮಾಡುತ್ತದೆ. ಕಿವಿ ಜ್ಞಾನೇಂದ್ರಿಯ. ಇದರಲ್ಲಿ ಜ್ಞಾನ (ಲಿಂಗ) ತುಂಬಿದೆ. ಜ್ಞಾನದಿಂದ ಕತ್ತೆ ಎನ್ನುವ ಶಬ್ದ ಕೇಳಿದರೆ ಕತ್ತೆ ತಾನಲ್ಲ. ಕತ್ತೆಯೂ ಕತ್ತೆಯಲ್ಲ. ಒಂದು ಪ್ರಾಣಿಯನ್ನು ಗುರುತಿಸಲು ಇಟ್ಟ ಹೆಸರು ಕತ್ತೆಯಾಗುವುದಿಲ್ಲ. ಶಬ್ದ ನುಡಿದ ತನುವಿನ ಮನದ ಚೇಷ್ಟೆಯಿದು. ಶಬ್ದವನ್ನು ಮನದಿಂದ ಕೇಳಿದರೆ ಜಗಳ, ಕೊಲೆ ಆತ್ಮಹತ್ಯೆ . ಜ್ಞಾನದಿಂದ ಕೇಳಿದರೆ ಶಬ್ದ ತನುವಿನಲಿ ಜೀರ್ಣವಾಗಿ ಹಸನ್ಮುಖಿಯಾಗುತ್ತಾನೆ. ಕತ್ತೆ ಎನ್ನುವ ಶಬ್ದ ತನುವಿಗೆ ಪ್ರಸಾದವಾಗುತ್ತದೆ. ತನುವಿನೊಂದಿಗೆ ಪ್ರಾಣ ಸಂಕಟಗೊಳ್ಳದೆ ಜಂಗಮವಾಗುತ್ತದೆ. ಅರಿವಾಗುತ್ತದೆ. ನುಡಿದ ತನುವಿನ ಸಂಕಟವೂ ಶಮನಗೊಳ್ಳುತ್ತದೆ. ಬಲವಾಗಿ ತಿಳಿಯಬೇಕಷ್ಟೆ.

ಹೀಗೆ ತನುವಿನ ಜ್ಞಾನ ತಿಳಿದು ಅದನ್ನು ಪೂಜಿಸಿ ಆ ಜ್ಞಾನವೇ ತಾನಾಗಲು ಶರಣರು, ಸಂತರು, ದಾಸರು ಬೆಡಗಿನ ಪದಗಳಿಂದ ಕೂಡಿದ ಸೂತ್ರಗಳನ್ನು ರಚಿಸಿದರು. ಆ ಸೂತ್ರಗಳನ್ನು ಭೇದಿಸಿ ತಿಳಿಯಲರಿಯದೆ ಲಿಂಗ, ಜಂಗಮ, ಪ್ರಾಣಲಿಂಗಿ, ಪ್ರಸಾದಿಯೆಂದು ಪೂಜಿಸಿ ಕೆಟ್ಟುಹೋದರಯ್ಯಾ ಎಂದು ಮಹಾಜ್ಞಾನಿ ಚೆನ್ನಬಸವಣ್ಣನವರು 12ನೇ ಶತಮಾನ ದಲ್ಲಿಯೇ ಮರುಕ ವ್ಯಕ್ತಪಡಿಸಿದ್ದಾರೆ. ಇಂದಿಗೂ ಸಹಿತ ಸತ್ಯ ಮನಕ್ಕೆ ಗೋಚರಕ್ಕೆ ಬಾರದೆ ಇರುವುದು ಸೋಜಿಗವೇ ಸರಿ.

□

# ತನುವಿನ ಕಾಮದ ಹುಚ್ಚು ಬಿಡಿಸುವ ಶರಣರ ಸೂತ್ರ

**ನೆವದಿಂದ ಶರಣರ ಬಾಗಿಲಲ್ಲಿ ಹೋಗಿ**
**ಕಟ್ಟಿದ ಹಸು ಕೂಡಿದ ಎತ್ತು ಬಿಡಿರೋ ಎಂದು ಕೂಗುತ್ತಿದ್ದೇನೆ**
**ಎನ್ನ ಕೂಗಿನ ದನಿಯಿಂದ ಮಹಾಶರಣರ ಸತಿ ಬಂದು ಕಟ್ಟಿದ ಹಸುವ ಬಿಟ್ಟು,**
**ಕೂಡಿದ ಎತ್ತ ಕೆಡಹಿ**
**ನಾಳೆ ಕೊಡಿಯೆಂದು ಹೊಡೆವುತ್ತಿದ್ದೇನೆ**
**ಗೋಪಿನಾಥ ವಿಶ್ವೇಶ್ವರ ಲಿಂಗದಡಿಗಾಗಿ.**

**-ತುರುಗಾಹಿ ರಾಮಣ್ಣ ಶರಣರು**

ಶರಣರು ತನುವಿನ ಜ್ಞಾನವನ್ನು ಸಂಪೂರ್ಣ ಬಳಕೆ ಮಾಡಿಕೊಂಡು ಜ್ಞಾನದಿಂದಲೇ ಕಾಯಕ ಮಾಡಿದರು, ಜ್ಞಾನದಿಂದ ಜೀವಿಸಿದರು, ಜ್ಞಾನದಿಂದಲೇ ಉಸಿರಾಡಿದರು. ಜ್ಞಾನದಿಂದಲೇ ಮಾತನಾಡಿದರು. ತಾವಿರುವ ಕ್ಷೇತ್ರವನ್ನೇ ವಿಶ್ವವಿದ್ಯಾಲಯ ಮಾಡಿಕೊಂಡು ತಮಗೂ ಅನ್ಯರಿಗೂ ಅರಿಯದಂತೆ ಕುಲಪತಿ, ಉಪ ಕುಲಪತಿ, ಪ್ರಾಧ್ಯಾಪಕರಾಗಿ ಪಾಠ ಮಾಡಿದರು. ಕೇಳಿದ ವಿದ್ಯಾರ್ಥಿಗಳೂ ಪ್ರಾಧ್ಯಾಪಕರಾದರು. ಕಲ್ಯಾಣದಲ್ಲಿ ಪಾಠ ಮಾಡುವ ಶರಣರೂ ಪ್ರಾಧ್ಯಾಪಕರೇ ಕೇಳುವ ವಿದ್ಯಾರ್ಥಿಗಳು ಪ್ರಾಧ್ಯಾಪಕರೇ. ಯಾರಿಗೆ ಪಾಠ ಮಾಡಬೇಕು? ಇಂತಹ ಅಪರೂಪದ ಪ್ರಸಂಗವೊಂದು ಈ ವಚನದಲ್ಲಿ ಬರುತ್ತದೆ.

**ನೆವದಿಂದ ಶರಣರ ಬಾಗಿಲಲ್ಲಿ ಹೋಗಿ ಕಟ್ಟಿದ ಹಸು ಕೂಡಿದ ಎತ್ತು ಬಿಡಿರೊ ಎಂದು ಕೂಗುತ್ತಿದ್ದೇನೆ:**

ರಾಮಣ್ಣ ಶರಣರದು ದನಕಾಯುವ ಕಾಯಕ. ಶರಣರ ಮನೆಯ ದನಗಳನ್ನು ಮೇಯಿಸಿ ರಾತ್ರಿ ಕೊಟ್ಟಿಗೆಗೆ ತಂದು ಬಿಡುವುದೇ ಅವರ ನಿತ್ಯದ ಕಾಯಕ. ಈ ನೆಪದಿಂದ ಒಮ್ಮೆ ಶರಣರನ್ನು ಪರೀಕ್ಷಿಸಲು ಕಟ್ಟಿದ ಹಸು ಕೂಡಿದ ಎತ್ತು ಬಿಡಿ ಎಂದು ರಾಮಣ್ಣ ಬಾಗಿಲಲ್ಲಿ ನಿಂತು ಕೂಗಿದರು. ಮಹಾ ಶರಣರ ಸತಿ ಕೊಟ್ಟಿಗೆಗೆ ಬಂದು ಕಟ್ಟಿದ ಹಸುವನ್ನು ಬಿಟ್ಟು ಕೂಡಿದ ಎತ್ತನ್ನು ಕೆಡವಿ, ಉಳಿದ ದನಗಳನ್ನು ಬಿಡುತ್ತಾಳೆ. ಶರಣಸತಿಯನ್ನು ಪರೀಕ್ಷೆ ಮಾಡಲು ಹೋದ ತರುಗಾಹಿ ರಾಮಣ್ಣ ಶರಣರು ನಾಚಿ ನೀರಾಗಿ ತಮ್ಮ ಅಜ್ಞಾನ ಆ ಮಹಾತಾಯಿಗೆ ತೋರ್ಪಡಿಸದೆ, ನಾಳೆ ಬಿಡಿ ಎಂದು ವಡವಡುತ್ತಾ ಬಿಟ್ಟ ದನಗಳನ್ನು ಮೇಯಿಸಲು ಗೋಮಾಳಕ್ಕೆ ಹೋಗುತ್ತಾರೆ.

ರಾಮಣ್ಣ ಶರಣರು ಶರಣರ ಮನೆಗೆ ಹೋಗಿ ದನಗಳನ್ನು ಬಿಡುವ ನೆಪದಲ್ಲಿ ಬೆಡಗಿನ ಮಾತನ್ನಾಡಿದ್ದರು. ಶರಣಸತಿ ಕೊಟ್ಟಿಗೆಗೆ ಬಂದು ಯಾವ ಮಾತು ಆಡದೆ ಕಟ್ಟಿದ ಹಸುವನ್ನು ಬಿಟ್ಟು ಕೂಡಿದ ಎತ್ತನ್ನು ಕೆಡವಿ, ಉಳಿದ ದನಗಳ ಕುಣಿಕೆ ಬಿಚ್ಚಿ ಶರಣರ ಮಾತಿಗೆ ಮೌನದ ಉತ್ತರ ನೀಡಿದ್ದಳು. ದನಕಾಯುವ ರಾಮಣ್ಣನ ವಿನೋದದ ಮಾತಿಗೆ ಶರಣರ ಸತಿಯ ಪರಮಾನಂದದ ಉತ್ತರವಾಗಿತ್ತು.

ಕಟ್ಟಿದ ಹಸು ಮತ್ತೆ ಕೂಡಲು ಬಯಸುವುದಿಲ್ಲ. ಕೂಡಿದ ಎತ್ತು ಮತ್ತೆ ಕೂಟಕ್ಕೆಳಸುವುದಿಲ್ಲ. ಇವೆರಡೂ ಸಂತಾನ ಉತ್ಪತ್ತಿಗಾಗಿ ಕೂಡಿ ಪರಮಾನಂದ ಅನುಭವಿಸಿದ್ದವು. ಕೂಡಿದ ಸಾಕ್ಷಿಗಾಗಿ ಹಸು ಮತ್ತೊಂದು ಜೀವವನ್ನು ತನ್ನ ಗರ್ಭದಲ್ಲಿ ಧರಿಸಿಕೊಂಡಿದ್ದರಿಂದ ಮತ್ತೆ ಕೂಡುವ ಅವಶ್ಯಕತೆಯಿರಲಿಲ್ಲ.

ಗರ್ಭ ಧರಿಸುವ ಕಾರಣಕ್ಕಾಗಿ ಎತ್ತು ಹಸುವನ್ನು ಕೂಡಿ ಗರ್ಭದಾನ ಮಾಡಿ ಆನಂದ ಪಟ್ಟಿತ್ತು; ಮತ್ತೆ ಎತ್ತು ಹಸುವನ್ನು ಕೂಡುವ ಪ್ರಮೇಯವೇ ಇರಲಿಲ್ಲ. ಅದಕ್ಕಾಗಿಯೇ ಶರಣ ಸತಿ ಇವೆರಡನ್ನು ಬಿಟ್ಟು ಉಳಿದ ದನಗಳ ಕುಣಿಕೆ ಬಿಚ್ಚಿ ಮೇಯಲಟ್ಟಿದ್ದಳು.

ಸಂತಾನ ಕ್ರಿಯೆಗೆ ಮಾತ್ರ ಕೂಡುವ ದನಗಳ ಅರಿವಿನ ಕೂಟದ ಚಿತ್ರಣವನ್ನು ಓದುಗರ ಮುಂದೆ ಸರಳ ಚಿಕ್ಕ ಸಂಭಾಷಣೆಯ ಮೂಲಕ ಶರಣರು ಬಿಚ್ಚಿಟ್ಟಿದ್ದಾರೆ. ಅರಿವಿದ್ದೂ ಕಾಮದ ಬಯಕೆಗಾಗಿ ಅರ್ಥವಿಲ್ಲದೆ ಮತ್ತೆ ಮತ್ತೆ ಕೂಡುವ ತನುಗಳ ಕೂಟದ ಚಿತ್ರಣವನ್ನು ಓದುಗರಿಗೆ ಬೆಡಗಿನ ಮೂಲಕ ಅನಾವರಣ ಮಾಡಿದ್ದಾರೆ.

ತನುವಿನ ಮರೆವು ಮತ್ತೊಂದು ತನುವನ್ನು ಅರ್ಥವಿಲ್ಲದೆ ಕಾಮಕ್ಕಾಗಿ ಮತ್ತೆ ಮತ್ತೆ ಬಯಸಿ ಕೂಡಿ ಸುಖಿಸುತ್ತದೆ. ತನುವಿನಲ್ಲಿರುವ ಸುಖದ ದ್ರವ ತನುವೇ ಚೆಲ್ಲಿ ಸುಖವಾಯಿತೆಂದು ಭ್ರಮೆಯಿಂದ ಆನಂದ ಪಡುವ ತನುವನ್ನು ಅರಿವು ಎಚ್ಚರಿಸುತ್ತದೆ. ಪಶುಗಳಿಗಿದ್ದ ಅರಿವು ತನುಗಳಿಗಿಲ್ಲ. ಹಿಂದೆ ಋಷಿ ತನುಗಳು ಸಂತಾನ ಬೇಕಿದ್ದಾಗ ಮಾತ್ರ ಕೂಡುತ್ತಿದ್ದರಂತೆ.

ದನಗಳಲ್ಲಿ ಸಹಜತೆಯಿದೆ. ಸಂತಾನಕ್ಕಾಗಿ ಮಾತ್ರ ಕೂಟದ ಬಯಕೆ ಹುಟ್ಟುತ್ತದೆ. ತನುಗಳಲ್ಲಿ ಸಹಜ ಜ್ಞಾನ ಮರೆಯಾಗಿರುವುದರಿಂದ ಮತ್ತೆ ಮತ್ತೆ ಕೂಟ ಬಯಸುತ್ತದೆ. ತನುವಿನ ದ್ರವ ಕೂಡುವ ಮುನ್ನ ನಷ್ಟವಾದರೆ ಮತ್ತೆ ಕೂಡಲು ತನು ಬೇಡ. ಈ ಅರಿವಾದರೆ ಸಂತಾನದ ಆಪೇಕ್ಷೆಯಿಲ್ಲದೆ ಕೂಟಕ್ಕೆ ಅಣಿಯಾಗುವ ತನುಗಳ ಅಕ್ರಮ ಕೂಟ ಕೂಡಲೇ ನಿಲ್ಲುತ್ತದೆ. ತನುವಿಗೆ ತನುವಿನ ಸಹಜ ಜ್ಞಾನವಾಗಬೇಕು. ಈ ಜ್ಞಾನಕ್ಕಾಗಿಯೇ ಎಷ್ಟೊಂದು ಮಠಗಳು ಎಷ್ಟೊಂದು ಗುರುಗಳು ಎಷ್ಟೊಂದು ಪುಸ್ತಕಗಳು ಎಷ್ಟೊಂದು ಸಂತರು! ಮನಕ್ಕೆ ಇವೇ ದೊಡ್ಡವಾದವು; ತನುವಿನ ಸಹಜ ಜ್ಞಾನವೇ ದೂರವಾಯಿತು. ಅದಕ್ಕಾಗಿಯೇ ತನುವು ಜ್ಞಾನ ಹೇಳುವುದೂ ಬಿಡಲಿಲ್ಲ; ಅಕ್ರಮವಾಗಿ ಕೂಡುವದನ್ನು ಬಿಡಲಿಲ್ಲ.

ವಚನದ ಕೊನೆಯ ಎರಡು ಸಾಲುಗಳಲ್ಲಿ ನಾಳೆ ಕೊಡಿಯೆಂದು ಹೊಡೆವುತ್ತಿದ್ದೇನೆ ಗೋಪಿನಾಥ ವಿಶ್ವೇಶ್ವರ ಲಿಂಗದಡಿಗಾಗಿ ಎಂದು ಮತ್ತೆ ಬೆಡಗಿನಿಂದ ನುಡಿದಿದ್ದಾರೆ.

ಕಟ್ಟಿದ ಹಸು, ಕೂಡಿದ ಎತ್ತು ಬಿಟ್ಟು ಉಳಿದ ದನಗಳ ಕುಣಿಕೆ ಬಿಚ್ಚಿದ ಶರಣರ ಸತಿಗೆ ನಾಳೆ ಕೊಡಿ ಎಂದು ಹೊಡೆವುತ್ತಿದ್ದೇನೆ. ಗೋಪಿನಾಥ ವಿಶ್ವೇಶ್ವರ ಲಿಂಗದಡಿಗಾಗಿ ಎಂದು ತಮ್ಮಲ್ಲಿಯೇ ಗುನುಗುನಿಸಿದ್ದಾರೆ ರಾಮಣ್ಣ ಶರಣರು.

ಗೋಪಿನಾಥ ವಿಶ್ವೇಶ್ವರ ಲಿಂಗದಡಿಗಾಗಿ ಅಂದರೆ ಆ ಎರಡು ದನಗಳು ಅರಿವಿನ ಅಡಿಗೆ ಒಳಗಾದವು. ಅದರಂತೆಯೇ ತನುವನ್ನು ಮತ್ತೆ ಮತ್ತೆ ಕಾಮಕ್ಕೆಳೆಸುವ ಭ್ರಮಾಧೀನ ಮನ ತನುವಿನ ಬ್ರಹ್ಮನಲ್ಲಿ ಲೀನವಾದರೆ ಬ್ರಹ್ಮತನುವಾಯಿತು. ತನುವಿನ ಮರೆವು ಅರಿವಿಗೆ ಶರಣು ಹೋಗಿ ಅರಿವಿನ ತನುವಾಯಿತು. ಅರಿವೆಂಬ ಲಿಂಗ ಪತಿಯಾದರೆ ಮನ ಲಿಂಗದಲ್ಲಿ ಆಲಿಂಗನವಾಗಿ ಶರಣ ಸತಿಯಾಯಿತು. ಅರಿವೆಂಬ ವಿಶ್ವೇಶ್ವರನಲ್ಲಿ ಸೇರಿ ಆ ವಿಶ್ವೇಶ್ವರನೇ ತಾನಾಯಿತು. ಹೀಗೆ ದನಗಳ ಮೂಲಕ ಜಗತ್ತಿನ ತನುಗಳಿಗೆ ಪಾಠ ಮಾಡಿದ ರಾಮಣ್ಣ ಶರಣರನ್ನು ದನಗಾಹಿ ಎನ್ನಬಹುದೇ? ಶಿಕ್ಷಕರಿದ್ದರೆ ಹೀಗಿರಬೇಕು. ವಿದ್ಯಾರ್ಥಿಗಳನ್ನು ತನ್ನಂತೆ ಜ್ಞಾನಿಯಾಗಿಸುವ ತಾಕತ್ತಿರಬೇಕು.



# ವಚನಾನುಕ್ರಮಣಿಕೆ

| ಕ್ರ.ಸಂ. | ವಚನ | ವಚನಕಾರರು | ಪುಟ |
|---|---|---|---|
| | **'ಗ'** | | |
| 66 | ಗುರುಲಿಂಗ ಜಂಗಮಕ್ಕೆ ದಾಸೋಹವ | - ಮರುಳ ಶಂಕರ ದೇವರು | 147 |
| 67 | ಗುರುಲಿಂಗ ಶಿವಲಿಂಗ ಜಂಗಮಲಿಂಗ | - ಚೆನ್ನಬಸವಣ್ಣ | 5 |
| 68 | ಗುರುವಾದರೆ ಲಿಂಗವನೆತ್ತಬಲ್ಲ? | - ಚೆನ್ನಬಸವಣ್ಣ | 165 |
| 69 | ಗುರು ಶಿಷ್ಯಂಗೆ ಬೋಧಿಸುವಲ್ಲಿ | - ನುಲಿಯ ಚಂದಯ್ಯ | 159 |
| | **'ಚ','ಛ', 'ಜ'** | | |
| 70 | ಜನಿತವಿಲ್ಲದೆ ನಿರ್ಜನಿತವಾದೆ? | - ಸಿದ್ಧರಾಮ ಶಿವಯೋಗಿ | 47 |
| 71 | ಜಲದೊಳಗೆ ಭವಿಸಿತ್ತು ಜಲಕೆ ನಂದದ ಕಿಚ್ಚು | - ಸಿದ್ಧರಾಮ ಶಿವಯೋಗಿ | 20 |
| 72 | ಜೂಜಿನ ವೇದನೆಯುಂಟು ಜಾಗರದ ಬಲವಿಲ್ಲ | - ಅಲ್ಲಮ ಪ್ರಭು | 58 |
| | **'ತ,ದ-ನ'** | | |
| 73 | ತನಗಲ್ಲದುದ ಘಟ ಸೋಂಕಿದಲ್ಲಿ | - ಕರುಳಕೇತಯ್ಯ ಶರಣರು | 65 |
| 74 | ತನ್ನಲ್ಲೊಂದು ಗುಣ ತೋರಲಿಕ್ಕಾಗಿ | - ಕೂಗಿನ ಮಾರಯ್ಯ ಶರಣರು | 75 |
| 75 | ತನು ತನ್ನ ಕಾಣದು, ಮನ ತನ್ನನರಿಯದು | - ಘಟ್ಟಿವಾಳಯ್ಯ ಶರಣರು | 90 |
| 76 | ತಾ ಮಿಥ್ಯನಾದ ಮತ್ತೆ ಜಗವೆಲ್ಲವೂ ತನಗೆ ಮಿಥ್ಯ | - ಕೀಲಾರದ ಭೀಮಣ್ಣ | 73 |
| 77 | ತಿಳಿನೀರೆಂಬೆ, ತಿಳಿನೀರೆಂಬೆ | - ಸಿದ್ಧರಾಮ ಶಿವಯೋಗಿ | 41 |
| 78 | ದುಷ್ಕರ್ಮಂಗಳ ಮಾಡುವರನಂತರುಂಟು | - ಸಿದ್ಧರಾಮ ಶಿವಯೋಗಿ | 43 |
| 79 | ದೃಕ್ಕು ಗುರುವಿನ ಭಾವ, ದೃಶ್ಯ ಶಿಷ್ಯನ ಯುಕ್ತಿ | - ಪ್ರಸಾದಿ ಬೋಗಣ್ಣ ಶರಣರು | 125 |
| 80 | ದೆಸೆ ದಿಗ್ವಲಯದಲ್ಲಿ ಪಸರಿ ಪರ್ಬಿತ್ತು ನಿನ್ನ ನಾಮ | - ಸಿದ್ಧರಾಮ ಶಿವಯೋಗಿ | 29 |
| 81 | ನದಿಯ ನೀರು ಹೋದುವಯ್ಯಾ ಸಮುದ್ರಕ್ಕೆ | - ಸಿದ್ಧರಾಮ ಶಿವಯೋಗಿ | 39 |
| 82 | ನನಗೆ ನಾನೆ ಗುರುವಾದೆನಯ್ಯಾ | - ಬಹುರೂಪಿ ಚೌಡಯ್ಯ | 116 |
| 83 | ನಾಚಿ ಮಾಡಬಲ್ಲಡೆ, ನಾಚನೆಂದೆಂಬೆ | - ಮಾರುಡುಗೆಯ ನಾಚಣ್ಣ | 152 |
| 84 | ನಾ ನಿನ್ನ ಕೇಳಿಹೆನೆಂದಡೆ | - ಗೋರಕ್ಷಕ ಶರಣ | 86 |
| 85 | ನಾನು ನಾನಾದ ಕಾರಣ ಎನಗೆ ಗುರುವಿಲ್ಲ | - ರಕ್ಕಸ ಬೊಮ್ಮಿ ತಂದೆ ಶರಣರು | 197 |
| 86 | ನೀನೊಲಿದು ಕೂರ್ತವರು | - ಗಜೇಶ ಮಸಣಯ್ಯ | 80 |
| 87 | ನೆನೆಯಲರಿಯೆ ನಿರ್ಧರಿಸಲರಿಯೆ | - ಡೋಹರ ಕಕ್ಕಯ್ಯಶರಣರು | 177 |
| 88 | ನೆವದಿಂದ ಶರಣರ ಬಾಗಿಲಲ್ಲಿ ಹೋಗಿ | - ತುರುಗಾಹಿ ರಾಮಣ್ಣ | 208 ✓ |
| | **'ಪ,ಫ,ಬ,ಭ-ಮ'** | | |
| 89 | ಪರಧನ ಪರಾನ್ನ ಪರಸ್ತ್ರೀಯರಾಸೆ ಬಿಡದು | - ನಿವೃತ್ತಿ ಸಂಗಯ್ಯ | 110 |
| 90 | ಪೃಥ್ವಿಯೆಂಬ ಅಂಗದ ಧರೆಯಲ್ಲಿ | - ಬಿಬ್ಬಿ ಬಾಚಯ್ಯ ಶರಣರು | 126 |
| 91 | ಪ್ರಸಾದವೆ ಅಂಗವಾದವನ ಇರುವು ಎಂತುಟೆಂದಡೆ | - ಪ್ರಸಾದಿ ಲೆಂಕಣ್ಣ ಶರಣರು | 124 |
| 92 | ಬಯಲು ಬಯಲನೆ ಬಿತ್ತಿ ಬಯಲು ಬಯಲನೆ ಬೆಳೆದು | - ಅಲ್ಲಮಪ್ರಭು | 168 |
| 93 | ಬಿತ್ತು ಅಂಕುರವ ನುಂಗಿಪ್ಪಾಗ | - ಕೋಲ ಶಾಂತಯ್ಯ | 76 |
| 94 | ಬ್ರಹ್ಮಾಂಡ ಕೋಟಿಗಳುರುಳಿ ಬೀಳುವಲ್ಲಿ | - ತೆಲುಗೇಶ ಮಸಣಯ್ಯ ಶರಣರು | 99 |
| 95 | ಬೇಡುವ ಭಂಡನ, ಕೊಡದೆ ಹೋರುವ ಲಂಡನ | - ಕಲಕೇತಯ್ಯ ಶರಣರು | 70 |
| 96 | ಬಂಗಾರಕ್ಕೆ ಒಳಹೊರಗುಂಟೆ? ಕರ್ಪೂರ ಚಂದನ ಅಗರು | - ಬಾಲಸಂಗಣ್ಣ ಶರಣರು | 127 |
| 97 | ಬಂದಲ್ಲಿ ನಿಂದು ಕಂಡು ಸಂದೇಹವಳಿದ ಮತ್ತೆ | - ಶರಣ ನಿಜಗುಣಯೋಗಿ | 106 |
| 98 | ಭರಿತಾರ್ಪಣ ಸಹಭೋಜನ ನೈವೇದ್ಯ | - ಭರಿತಾರ್ಪಣದ ಚೆನ್ನಬಸವಣ್ಣ | 132 |
| 99 | ಭಿಕಾರಿ ಭಿಕಾರಕ್ಕೆಳಸ | - ಭಿಕಾರಿ ಭೀಮಯ್ಯ ಶರಣರು | 134 |



ದೇಹದಲ್ಲಿ ಎರಡು ಟೂಲ್‌ಗಳಿವೆ. ಒಂದು ಜ್ಞಾನ, ಮತ್ತೊಂದು ಮನ.
ಮನ ಎಂಬ ಉಪಕರಣ ಬಳಸಿ ಈಚಲ ನೋಡಿದರೆ ಹೆಂಡವಾಗಿ
ಕಾಣುತ್ತದೆ. ಹೆಂಡದ ರುಚಿ ಬಯಸಿ ಜೀವನ ಪರ್ಯಂತ ದಾಸನಾಗುತ್ತಾನೆ.
ಅಂಗ ನೋಡಿದರೆ ಅಂಗನೆಯಂತೆ ಕಾಣುತ್ತಾಳೆ.
ಅಂಗಕ್ಕೆ ಅಂಗದೊಡನೆ ಬೆರೆಯುವ ಆಸೆ.
ಜ್ಞಾನ ಎಂಬ ಉಪಕರಣ ಬಳಸಿ ನೋಡಿದರೆ ಈಚಲಿನ ನೀರು ನೀರೇ,
ತೆಂಗಿನ ನೀರು ನೀರೇ. ಭೇದವಿಲ್ಲ. ಎರಡಕ್ಕೂ ವ್ಯಸನಿಯಾಗಲಿಲ್ಲ.
ಅಂಗನೆಯದೂ ಅಂಗವೇ, ತನ್ನದೂ ಅಂಗವೇ.
ಎಡಗೈಗೆ ಬಲಗೈ ತಾಗಿದರೆ ರಾಸಾಯನಿಕ ಕ್ರಿಯೆಯಿಲ್ಲ .
ಹಾಗೆ ಜ್ಞಾನ ತಿಳಿಯುವ ಕ್ರಿಯೆಯಲ್ಲಿ ಭಾಗಿಯಾಗಿ ದೃಢ
ನಿರ್ಧಾರಕ್ಕೆ ಬರುತ್ತದೆ. ದೇಹವನ್ನು ತಲ್ಲಣಗೊಳಿಸದೆ ಎಲ್ಲವನ್ನೂ
ತನ್ನಂತೆ ನೋಡುತ್ತದೆ. ಜಾತಿ–ಮತ, ಪಂಥ, ಬಡವ–ಶ್ರೀಮಂತ,
ಹೆಣ್ಣು–ಗಂಡೆನ್ನದೆ ಜಲಬಿಂದುವಿನಿಂದಾದ ಅಂಗಗಳೆಲ್ಲ ತನ್ನಂತೆ ಇರುವ
ಲಿಂಗಗಳಾಗಿಯೇ ಕಾಣುತ್ತದೆ.
ಮನ ವಸ್ತುವನ್ನು ವಿರೂಪಗೊಳಿಸಿ, ವಿಕೃತವಾಗಿ ಅನುಭವಿಸಿದರೆ,
ಜ್ಞಾನ ವಸ್ತುವಿನ ಮೂಲ ಸತ್ಯವನ್ನು ನೋಡಿ ಆನಂದಿಸುತ್ತದೆ.